# ತ್ರಾಟಿಕಾ ನಾಟಕ.

ಅಥವಾ

## "ನೊಂದ ಗಂಡ ತುಂಟ ಹೆಂಡತಿ" ನಾಟಕ.

(ಆಂಗ್ಲ ಮಹಾಕವಿ ಶೇಕ್ಸಪಿಯರನು ರಚಿಸಿದ

**"ಟೇಮಿಂಗ ಆಫ್ ದಿ ಶ್ರ್ಯೂ"**

ಎಂಬ ಇಂಗ್ಲಿಷ ನಾಟಕದ ಅನುವಾದವು.)

ಇದು

**ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ**

ಡಿಸ್ಟ್ರಿಕ್ಟ ಪ್ಲೀಡರ ಧಾರವಾಡ.

ಇವರಿಂದ ರಚಿತವಾಗಿ ಧಾರವಾಡ ಕರ್ನಾಟಕ ಪ್ರಿಂಟಿಂಗ ವರ್ಕ್ಸದಲ್ಲಿ

ಶ್ರೀ. ಮಾಧವ ಕೃಷ್ಣ ಜೋಶಿ ಇವರಿಂದ ಮುದ್ರಿಸಲ್ಪಟ್ಟಿತು.

(ಸುಧಾರಿಸಿದ ೨ನೆಯ ಆವೃತ್ತಿ)

**ಸನ್ ೧೯೨೯ನೆಯ ಜುಲೈ.**



**ಬೆಲೆ ಒಂದು ರೂಪಾಯಿ.**

# ಪಾತ್ರಗಳ ಹೆಸರುಗಳು



**ಲಕ್ಷ್ಮೀಪತಿರಾವ Baptista**—ಕುಸುಮಪುರದ ಒಬ್ಬ ಶ್ರೀಮಂತ ಮುದುಕನು.

**ರಂಗೂ (ತ್ರಾಟಿಕೆ) Katherina**—ಲಕ್ಷ್ಮೀಪತಿರಾಯನ ಹಿರಿಯ ಮಗಳು.

**ಕಮಲಿ Bianca**—ಲಕ್ಷ್ಮೀಪತಿರಾಯನ ಚಿಕ್ಕ ಮಗಳು.



**ರಂಗರಾವ Lucentio**—ಮಣಿಪುರದ ಒಬ್ಬ ಶ್ರೀಮಂತ ಗೃಹಸ್ಥನ ಮಗನು. (ಕಮಲಿಯ ಮೇಲೆ ಮೋಹಿತನಾದವನು.)

**ವೆಂಕಣ್ಣನಾಯಕ**—ರಂಗರಾಯನ ಗೆಳೆಯನು

**ಪ್ರತಾಪರಾವ Petruchio**—ತ್ರಾಟಿಕೆಯನ್ನು ಬೇಡಲಿಕ್ಕೆ ಬಂದವನು.

**ನೀಲಾ Grumio**—ಪ್ರತಾಪರಾಯನ ಒಬ್ಬ ಸೇವಕನು.

**ತಿಪ್ಪಾ Curtis**—ಪ್ರತಾಪರಾಯನ ಒಬ್ಬ ಸೇವಕನು.

**ತಮ್ಮಾ Tranio**—ರಂಗರಾಯನ ಸೇವಕನು.

**ಭೀಮರಾವ Gremio**<br>**ಬಾಪೂರಾವ Hortensio** } ಕಮಲಿಯನ್ನು ತಮಗೆ ಬೇಡುವವರು.

**ನರಸಿಂಗರಾವ Vincentio**—ರಂಗರಾಯನ ಮುದುಕ ತಂದೆ.

**ಸರಸ್ವತಿ**—ಭೀಮರಾಯನು ಪುನರ್ವಿವಾಹ ಮಾಡಿಕೊಂಡ ಹೆಂಡತಿ.

**ವೆಂಕಟಸ್ವಾಮಿ**—ಗಾಯಕ.

**ಶಂಕರಶಾಸ್ತ್ರಿ**—ಪುರಾಣಿಕ.

ಇವರ ಹೊರತಾಗಿ ಸಿಂಪಿಗನು, ಜವಳಿಯವನು, ಅಕ್ಕಸಾಲಿಗನು ಮೊದಲಾದವರು.



# ಪ್ರಸ್ತಾವನೆ.

ಈ ನಾಟಕವು ಆಂಗ್ಲ ಮಹಾಕವಿ ಸೆಕ್ಸ್‌ಪಿಯರನು ರಚಿಸಿದ **Taming of the shrew** ಎಂಬ ಇಂಗ್ಲೀಷ ನಾಟಕದ ಅನುವಾದವಿರುತ್ತದೆ. ಇದೇ ಹೆಸರಿನ ಮರಾಠಿ ನಾಟಕವನ್ನು ಪುಣೆಯ ಫರ್ಗ್ಯೂಸನ್ನ ಕಾಲೇಜದ ಇಂಗ್ಲಿಷ ಪ್ರೊಫೆಸರ ಕೈ. ವಾ. ವಾಸುದೇವರಾವ ಕೇಳಕರ ಬಿ. ಎ. ಇವರು ಶಾಹೂ ನಗರ ವಾಸಿ ಮಹಾರಾಷ್ಟ್ರ ನಾಟಕ ಮಂಡಳಿಯವರಿಗೋಸ್ಕರ ಈಗ ೩೦ ವರ್ಷಗಳ ಹಿಂದೆ ಬರೆದುಕೊಟ್ಟಿರು. ಈ ಮಹಾರಾಷ್ಟ್ರ ನಾಟಕದವರು ಸನ್ನ ೧೯೦೮ನೆಯ ಇಸವಿಯಲ್ಲಿ ಧಾರವಾಡಕ್ಕೆ ಬಂದಾಗ್ಗೆ ಹ್ಯಾಮಲೆಟ್ ಮತ್ತು ತ್ರಾಟಿಕಾ ಎಂಬ ಪ್ರೋಜ (ಗದ್ಯ) ನಾಟಕಗಳನ್ನು ಪ್ರಯೋಗ ಮಾಡಿ ತೋರಿಸಿದರು. ಅವುಗಳನ್ನು ಆ ಕಾಲಕ್ಕೆ ಧಾರವಾಡದೊಳಗೆ ಅಸ್ತಿತ್ವದಲ್ಲಿದ್ದ ಭರತಕಲೋತ್ತೇಜಕ ಕನ್ನಡ ಸಂಗೀತ ನಾಟಕ ಸಮಾಜದವರು ನೋಡಿ ತಾವೂ ಪ್ರೋಜ ನಾಟಕಗಳನ್ನು ಪ್ರಯೋಗಮಾಡಬೇಕೆಂದು ಕುತೂಹಲಪಟ್ಟು ನನಗೆ ತ್ರಾಟಿಕಾ ನಾಟಕವನ್ನು ಕನ್ನಡದಲ್ಲಿ ಬರೆದುಕೊಡಲಿಕ್ಕೆ ಆಗ್ರಹದ ಸೂಚನೆಯನ್ನು ಮಾಡಿದರು. ನಾನು ಅವರ ಸೂಚನೆಯನ್ನು ಮಾನ್ಯ ಮಾಡಿ ಕನ್ನಡ ಸಮಾಜಕ್ಕೂ ಕನ್ನಡಿಗರ ರೀತಿ ನಡಾವಳಿಗಳಿಗೂ ಅನುಸರಿಸಿ ಕೆಲಕೆಲವು ಹೆಚ್ಚುಕಡಿಮೆಮಾಡಿ ಈ ಮರಾಠಿ ನಾಟಕವನ್ನು ಕನ್ನಡದಲ್ಲಿ ಪರಿವರ್ತಿಸಿ ಆ ನಾಟಕ ಸಮಾಜದವರ ಕಡೆಗೆ ಕೊಟ್ಟೆನು. ಆದರೆ ದುರ್ದೈವದಿಂದ ಸ್ವಲ್ಪ ದಿವಸಗಳಲ್ಲಿಯೇ ಆ ನಾಟಕದವರಿಗೆ ಕೆಲವು ಅನಾನುಕೂಲತೆಗಳು ಒದಗಲು ಆ ನಾಟಕಸಮಾಜವು ನಿಂತುಹೋಯಿತು. ಇದರಿಂದ ನನ್ನ ನಾಟಕವು ರಂಗಭೂಮಿಯ ಮೇಲೆ ಬರುವ ಸುಪ್ರಸಂಗವು ತಪ್ಪಿಹೋಯಿತು.

ಆ ಮೇಲೆ ನಾನು ನನ್ನ ಈ ನಾಟಕವನ್ನು ಕರ್ನಾಟಕ ವಿದ್ಯಾವರ್ಧಕ ಸಂಘದವರ ಕಡೆಗೆ ಪರೀಕ್ಷೆಯ ಸಲುವಾಗಿ ಕಳುಹಿಸಿಕೊಟ್ಟೆನು. ಅವರು ಇದನ್ನು ಓದಿ ಪರೀಕ್ಷಿಸಿ ಇದಕ್ಕೆ ಪಾರಿತೋಷಕವನ್ನು ಕೊಟ್ಟರು. ಇದರಿಂದ ನಾನು ಉತ್ತೇಜನವನ್ನು ಹೊಂದಿ ಸನ್ನ ೧೯೨೦ನೆಯ ಇಸವಿಯಲ್ಲಿ ಇದರ ೧ನೆಯ ಆವೃತ್ತಿಯನ್ನು ಮುದ್ರಿಸಿ ಪ್ರಸಿದ್ಧ ಮಾಡಿದೆನು. ಈ ನನ್ನ ನಾಟಕವು ಮರಾಠಿ

ನಾಟಕದ ಶಬ್ದಶಃ ಭಾಷಾಂತರವಿರುವದಿಲ್ಲ. ಇದಲ್ಲದೆ ಪ್ರೊಫೆಸರ ಕೇಳಕರರು ತಮ್ಮ ನಾಟಕದ ಪಾತ್ರಗಳನ್ನು ಮಾಂಸಾಹಾರಿ ಮರಾಠಾ ಸಮಾಜದಿಂದ ತೆಗೆದು ಕೊಂಡಿದ್ದು ನಾನು ನನ್ನ ಪಾತ್ರಗಳನ್ನು ಶಾಕಾಹಾರಿ ಬ್ರಾಹ್ಮಣ ಸಮಾಜದಿಂದ ತೆಗೆದುಕೊಂಡಿದ್ದೇನೆ. ಆದುದರಿಂದ ಅರ್ಥಾತ್ ನಾನು ಅವರ ಭಾಷಣಗಳಲ್ಲಿ ಹೆಚ್ಚುಕಡಿಮೆಗಳನ್ನು ಮಾಡಿರುತ್ತೇನೆ. ಹಾಗೂ ನನ್ನ ಪಾತ್ರಗಳ ಹೆಸರು ಗಳನ್ನು ಪ್ರತಾಪರಾವ, ತ್ರಾಟಿಕಾ ಮತ್ತು ಕಮಲಾ ಈ ಮೂರನ್ನು ಹೊರ್ತು ಪಡಿಸಿ ಉಳಿದವುಗಳನ್ನು ಕನ್ನಡ ಸಮಾಜಕ್ಕೆ ಒಪ್ಪುವಂತೆ ಹೊಸವು ಇಟ್ಟಿರು ತ್ತೇನೆ. ಇದೇ ಪ್ರಕಾರ ನಾನು ಅವರ ಭಾಷಣಗಳಲ್ಲಿಯೂ ಕೆಲವು ಸ್ಥಳಗಳಲ್ಲಿ ತಿದ್ದುಪಡಿ ಮಾಡಿರುತ್ತೇನೆ.

ನನ್ನ ನಾಟಕದ ೧ನೆಯ ಆವೃತ್ತಿಯು ಮುದ್ರಣವಾದ ಕೆಲವು ವರ್ಷಗಳ ತರುವಾಯ ಅಂದರೆ ಈಗ ಒಂದೆರಡು ವರ್ಷಗಳ ಹಿಂದೆ ಮುಂಬಯಿ ಯುನಿವ್ಹರ್ಸಿಟಿಯ ಫೆಲೊಗಳೂ ಕನ್ನಡ ಪಂಡಿತರೂ ಆದ ಶ್ರೀಯುತ ವಿನಾಯಕರಾವ ಜೋಯಿಸ ಬಿ. ಎ. ರಿಟಾಯರ್ಡ ಎಜ್ಯುಕೇಶನಲ್ ಇನಸ್ಪೆಕ್ಟರ ಇವರ ಕೃಪಾಕಟಾಕ್ಷವು ಈ ನಾಟಕದಮೇಲೆ ಬಿದ್ದುದರಿಂದ ಇವರು ಇದನ್ನು ಪಠ್ಯಪುಸ್ತಕವೆಂದು ಮಾನ್ಯ ಮಾಡಲಿಕ್ಕೆ ಯುನಿವ್ಹರ್ಸಿಟಿಯವರ ಕಡೆಗೆ ಶಿಫಾರಸು ಮಾಡಿದರು. ಆ ಬಳಿಕ ಯುನಿವ್ಹರ್ಸಿಟಿಯ ಪಠ್ಯಪುಸ್ತಕಗಳ ಕಮಿಟಿಯ ಸದಸ್ಯರು ಇದನ್ನು ಪರೀಕ್ಷಿಸಿ ಬಿ. ಎ. ತರಗತಿಗೆ ಪಚ್ಚುವದಕ್ಕಾಗಿ ಮಾನ್ಯ ಮಾಡಿರುತ್ತಾರೆ. ಇದಕ್ಕಾಗಿ ನಾನು ಶ್ರೀಯುತ ವಿನಾಯಕರಾವ ಜೋಯಿಸರವರಿಗೂ ಯುನಿವ್ಹರ್ಸಿಟಿಯ ಪಠ್ಯಪುಸ್ತಕಗಳ ಕಮಿಟಿಯ ಸದಸ್ಯರಿಗೂ ನನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ. ಹಾಗೂ ಇದರ ೨ನೆಯ ಆವೃತ್ತಿಯನ್ನು ಮುದ್ರಿಸಿ ಪ್ರಸಿದ್ಧ ಮಾಡಲಿಕ್ಕೆ ನನಗೆ ಉದಾರ ಭಾವದಿಂದ ಆರ್ಥಿಕ ಸಹಾಯವನ್ನು ಮಾಡಿದ ನನ್ನ ಶ್ರೀ ವಾಗ್ದೇವೀ ಗ್ರಂಥಮಾಲೆಯ ಯೂವತ್ತು ಆಶ್ರಯದಾತರಿಗೂ, ಇದನ್ನು ಅಲ್ಪಾವಧಿಯೊಳಗೆ ಅಂದವಾಗಿ ಮುದ್ರಿಸಿಕೊಟ್ಟ ಕರ್ನಾಟಕ ಪ್ರಿಂಟಿಂಗ ವರ್ಕ್ಸನ ವ್ಯವಸ್ಥಾಪಕರಿಗೂ ನಾನು ಅತ್ಯಂತ ಕೃತಜ್ಞನಾಗಿರುತ್ತೇನೆ.

ತಮ್ಮ ವಿಧೇಯ

**ಧಾರವಾಡ** } **ಗ. ಹು. ಹೊನ್ನಾಪುರಮಠ,**
ತಾ|| ೧–೭–೧೯೨೯ ಇಸವಿ } ಗ್ರಂಥಕರ್ತ.

# ಓದುವವರಿಗೆ ಸೂಚನೆ

ನಾನು ಈ ನಾಟಕದ ಹಿಂದಿನ ಆವೃತ್ತಿಯಲ್ಲಿ **ನೀಲಾ, ತಿಪ್ಪಾ, ತವ್ವಾ** ಈ ಮೂರು ಜನ ಸೇವಕರ ಹಾಗೂ **ಸಿಂಪಿಗನ** ಮಾತುಗಳನ್ನು ಗ್ರಾಮ್ಯ ಭಾಷೆಯಲ್ಲಿ ಬರೆದಿದ್ದೆನು. ಆದರೆ ಗ್ರಾಮ್ಯ ಭಾಷೆಯು ವಿದ್ಯಾರ್ಥಿಗಳಿಗಾಗಲಿ, ಸಭ್ಯ ಸ್ತ್ರೀಪುರುಷರಿಗಾಗಲಿ ಓದುವದಕ್ಕೆ ಯೋಗ್ಯವಾಗುವದಿಲ್ಲೆಂದು ನನ್ನ ನಿದರ್ಶನಕ್ಕೆ ಬಂದುದರಿಂದ ನಾನು ಆ ಗ್ರಾಮ್ಯ ಭಾಷೆಯನ್ನು ಪೂರ್ಣವಾಗಿ ತೆಗೆದು ಹಾಕಿ ಅದರ ಬದಲಾಗಿ ಸುಲಭವಾದ ಓದುವ ಭಾಷೆಯನ್ನು ಉಪಯೋಗಿಸಿದ್ದೇನೆ. ಇದರಿಂದ ಈ ನಾಟಕವು ಹೆಚ್ಚು ವಾಚನೀಯವಾಗಿ ಇದಕ್ಕೆ ಹೆಚ್ಚಿಗೆ ಜನಾಶ್ರಯವು ದೊರಕೀತೆಂದು ನಾನು ಪೂರ್ಣವಾಗಿ ಆಶಿಸುತ್ತೇನೆ.

ಈ ನಾಟಕವನ್ನು ರಂಗಭೂಮಿಯ ಮೇಲೆ ತರಲಪೇಕ್ಷಿಸುವ ನಾಟಕ ಮಂಡಳಿಯವರು ಮುಂಚಿತವಾಗಿ ನನ್ನ ಅಪ್ಪಣೆಯನ್ನು ಕೇಳಿಕೊಳ್ಳಬೇಕು. ಅಂದರೆ ಅವರಿಗೆ ಯೋಗ್ಯ ಸೌಕರ್ಯವನ್ನು ಮಾಡಿಕೊಡುವವರಲ್ಲಿ ಬರುವದು. ನನ್ನ ಅಪ್ಪಣೆಯನ್ನು ಪಡೆದುಕೊಳ್ಳದೆ ಯಾರಿಗೂ ರಂಗಭೂಮಿಯ ಮೇಲೆ ತರಲಿಕ್ಕೆ ಅಧಿಕಾರವಿರುವದಿಲ್ಲ. ಈ ನೇಮವು ಹಾಯಸ್ಕೂಲ ಅಥವಾ ಕಾಲೇಜಗಳಲ್ಲಿ ಆನಂದಕೂಟ (ಗ್ಯಾದರಿಂಗ)ವನ್ನು ಮಾಡುವವರಿಗೆ ಸಂಬಂಧವಿಲ್ಲ.

**ಗ್ರಂಥಕರ್ತ.**

**ಮುದ್ರಕರು** :—ಮಾಧವ ಕೃಷ್ಣ ಜೋಯಿಸ ಧಾರವಾಡ ಮತ್ತು
ಖಂಡೋ ರಾಮಚಂದ್ರ ಭಿಸೆ ಧಾರವಾಡ.

**ಮುದ್ರಣಾಲಯ** :- ಕರ್ನಾಟಕ ಪ್ರಿಂಟಿಂಗ ವರ್ಕ್ಸ್, ಧಾರವಾಡ.

**ಪ್ರಕಾಶಕರು** :—ಗದಿಗೆಂಯ್ಯ ಹುಚ್ಚಯ್ಯ ಹೊನ್ನಾಪುರಮಠ ಧಾರವಾಡ

**ಪ್ರಕಾಶನ ಸ್ಥಳ** :—ಧಾರವಾಡ ಚಂದ್ರೋದಯ ಮುದ್ರಣಾಲಯ
ಕಾರ್ಯಾಲಯ. ೧೯೩೯—೪೦,

# ತ್ರಾಟಿಕಾ ನಾಟಕ.



## ಅಂಕ ೧ನೇದ್ದು.



### ಪ್ರವೇಶ ೧—ಕುಸುಮಪುರದ ಒಂದು ಓಣಿ.

( ರಂಗರಾಯನೂ ವೆಂಕಣ್ಣನಾಯಕನೂ ಮಾತಾಡುತ್ತ ಬರುತ್ತಾರೆ. )

**ವೆಂಕಣ್ಣನಾಯಕ**—ರಾಯರೇ, ಇಂಥ ಹುಚ್ಚು ವಿಚಾರವನ್ನು ಬಿಟ್ಟು ಬಿಡಿರಿ. ನಿಮ್ಮ ಅಪೇಕ್ಷೆಯು ಸರಳ ಮಾರ್ಗದಿಂದಲೇ ಕೈಗೂಡುತ್ತಿರುವಾಗ ನೀವಾಗಿ ಏಕೆ ಅಡ್ಡ ಹಾದಿಯನ್ನು ಹಿಡಿಯುವಿರಿ ?

**ರಂಗರಾವ**—ಸಾಕಪ್ಪಾ, ನಿನ್ನ ಪುರಾಣ ಸಾಕು. ನೀನು ಹೇಳುವ ಮಾರ್ಗವು ಮೂಕ ಗೊಂಬೆಗಳ ಲಗ್ನದ್ದು. ಅದು ನನಗೆ ಎಷ್ಟು ಮಾತ್ರಕ್ಕೂ ಒಪ್ಪಿಗೆಯಿಲ್ಲ.

**ವೆಂಕಣ್ಣನಾಯಕ**—ನಿಮಗೆ ಹೇಳಲಿಕ್ಕೆ ನಾನೆಷ್ಟರವನು ? ನೀವು ವಿದ್ಯಾವಂತರು, ಪುರಾಣೇತಿಹಾಸಗಳನ್ನು ಓದಿದವರು, ಮೇಲಾಗಿ ಶಾಸ್ತ್ರಾಧ್ಯಯನ ಮಾಡಿದವರು. ಜ್ಞಾನಬಲದಿಂದ ನಿಮಗೆ ಧೀರೋದಾತ್ತ ಗಾಂಭೀರ್ಯಾದಿ ಗುಣಗಳು ಬಂದಿರುತ್ತವೆ. ಅಂದಮೇಲೆ ನಿಮಗೆ ಬುದ್ಧಿಯನ್ನು ಹೇಳತಕ್ಕ ಸಾಮರ್ಥ್ಯವು ನನಗಂತೂ ಇಲ್ಲ. ಆದಾಗ್ಯೂ ನನಗೆ ನನ್ನ ಬಡತನದ ಮೂಲಕ ಈ ಜಗತ್ತಿನಲ್ಲಿ ಬಂದಿರುವ ಅನುಭವವು ನಿಮಗೆ ಇರುವದಿಲ್ಲ. ಆದುದರಿಂದ ನೀವು ನನ್ನ ಅಭಿಪ್ರಾಯವನ್ನು ಚೆನ್ನಾಗಿ ವಿಚಾರ ಮಾಡಬೇಕೆಂದು ನಾನು ಪುನಃ ನಿಮಗೆ ಬೇಡಿಕೊಳ್ಳುತ್ತೇನೆ.

**ರಂಗರಾವ**—ಎಲೋ, ನೀನು ಅನ್ನುವಂತೆ ನನ್ನ ಮನಸ್ಸು ಸುಸಂಸ್ಕೃತವಾಗಿರುವ ಕಾರಣ ನನ್ನ ಮನಸ್ಸಿನಲ್ಲಿ ಇಂಥ ವಿಚಾರಗಳು ಬರುತ್ತವೆ. ವಿದ್ಯೆಯ ಗಾಳಿಯು ಸಹ ಸ್ಪರ್ಶವಾಗದಿರುವವರಿಗೆ ಬಹುಕಾಲದಿಂದ ನಡೆದು ಬಂದಂಥ

ಕಾಡು ಮಾರ್ಗವನ್ನು ಬಿಟ್ಟು ಎರಡನೇ ಗತಿಯೇನು ? ನಿನಗೆ ಅನುಭವವು ಹೆಚ್ಚಿಗಿರುತ್ತದೆಂಬುವದು ನಿಜವೇ. ಆದರೆ ಜಗತ್ತಿನಲ್ಲಿ, ಕಿಂಬಹುನಾ ನಮ್ಮ ಈ ದೇಶದಲ್ಲಿ ಕ್ವಚಿತವಾಗಿ ಕಂಡುಬರುವಂಥ ಮಾರ್ಗದ ಸಂಬಂಧದಿಂದ ನಿನಗೆ ಜ್ಞಾನವಿರುವ ಸಂಭವವೆಲ್ಲಿರುತ್ತದೆ? ನಾನು ನಿನಗೆ ಒಂದೇ ಮಾತು ಹೇಳುತ್ತೇನೆ ಕೇಳು. ತಾಯಿ ತಂದೆಗಳ ಮೇಲೆ ಕೈಯಿಟ್ಟು ಕುಳಿತು **"ಅವರು ಮಾಡಿದ್ದೇ ಮಟ್ಟ, ಕಟ್ಟಿದ್ದೇ ಪಟ್ಟ"** ಎಂದು ತಿಳಿದುಕೊಂಡು ಕುಳಿತುಕೊಳ್ಳುವ ಹೆಣದತ್ತನು ನಾನಲ್ಲ. ಇದಲ್ಲದೆ ಲಗ್ನದ ವಿಷಯವಂತೂ ಬಹಳ ಸೂಕ್ಷ್ಮವಿರುವದು. ನಮ್ಮ ಸಂಸಾರದ ಸುಖದುಃಖದಲ್ಲಿ ಸಮಭಾಗಿಯಾಗಿರುವ ಸತಿಯನ್ನು ನಾವೇ ಸ್ವತಃ ಹುಡುಕಿಕೊಳ್ಳಬೇಕಲ್ಲದೆ ಹಿರಿಯರ ಮೇಲೆ ಅವಲಂಬಿಸಿ ಕುಳಿತುಕೊಳ್ಳುವದು ನನಗೆ ಯೋಗ್ಯ ತೋರುವದಿಲ್ಲ. ನಾನೇನೂ ಸಣ್ಣ ಹುಡುಗನಲ್ಲ. ನನಗೆ ನನ್ನ ಹಿತಾಹಿತಗಳು ಚೆನ್ನಾಗಿ ತಿಳಿಯುತ್ತವೆ.

**ವೆಂಕಣ್ಣನಾಯಕ**—ರಾಯರೇ! ನಾನು ಇದಕ್ಕೆ ತಿರುಗಿ ಮಾತಾಡಿದರೆ ನಿಮಗೆ ಸಿಟ್ಟು ಬಂದೀತು. ಇಷ್ಟು ವರ್ಷ ಹಿರಿಯರೇ ಮಕ್ಕಳ ಲಗ್ನವನ್ನು ಮಾಡುತ್ತ ಬಂದಿರುತ್ತಾರಷ್ಟೇ? ಅಂದಮೇಲೆ ಈ ಸಾಂಪ್ರದಾಯದಿಂದ ಕೆಡಕು ಪರಿಣಾಮಗಳು ಸಂಭವಿಸಿದ ಉದಾಹರಣೆಗಳು ಎಲ್ಲಿಯಾದರೂ ಕಂಡುಬರುತ್ತವೇನು? **"ಅಜ್ಜ ಆರುತಲೆ ಮುತ್ಯ ಮೂರುತಲೆ"**ಗಳಿಂದ ಯಾವತ್ತು ಜನರು ತಮ್ಮ ಹಿರಿಯರು ಆರಿಸಿದಂಥ ಹೆಂಡಂದಿರನ್ನೇ ಲಗ್ನ ಮಾಡಿಕೊಂಡು ಸುಖದಿಂದ ಸಂಸಾರ ಮಾಡುತ್ತ ಬರುತ್ತಾರೆ. ಹೀಗಿದ್ದು ಈಗ ನಿಮ್ಮ ಮನಸ್ಸಿನಲ್ಲಿಯೇ ಮಾತ್ರ ಈ ಹೊಸ ಕಲ್ಪನೆಯು ಏಕೆ ಬಂದಿತೋ ತಿಳಿಯದು. ನಾಲ್ಕು ಜನರು ಅನುಸರಿಸುವ ಶಿಷ್ಟಸಾಂಪ್ರದಾಯವನ್ನು ಬಿಟ್ಟು ನಿಮಗೆ ಅಪರಿಚಿತವಾದ ಮಾರ್ಗವನ್ನು ಅನುಸರಿಸಿ ನಿಮ್ಮ ಅನುಭವಶೂನ್ಯವಾದ ತಾರುಣ್ಯಕ್ಕೆ ಅಮರ್ಯಾದೆಯನ್ನೂ ದುಃಖವನ್ನೂ ತಂದುಕೊಳ್ಳುವದು ವಿವೇಕವಲ್ಲ.

**ರಂಗರಾವ**—ಸಾಕು. ಈ ವಿಷಯವು ಬರೀ ವಾದವಿವಾದದಿಂದ ನಿರ್ಣಯವಾಗತಕ್ಕಂಥದಲ್ಲ. ನಮ್ಮ ಹೆಂಡಂದಿರನ್ನು ನಾವೇ ಹುಡುಕಿಕೊಂಡು ಲಗ್ನ ಮಾಡಿಕೊಳ್ಳುವದರಿಂದ ಸಂಸಾರದಲ್ಲಿ ಹೆಚ್ಚು ಸುಖವು ಸಿಗುತ್ತದೋ ಇಲ್ಲೋ ಎಂಬುವದನ್ನು ನಾನು ಸ್ವಂತ ಅನುಭವದಿಂದ ನಿರ್ಣಯ ಮಾಡತಕ್ಕವನಿ

ದ್ದೇನೆ. ನನಗೆ ಬೇಕಾದ ಪರಿಣಾಮವು ಸಂಭವಿಸಲಿ. ಯಾರು ಹೇಳಿದರೂ ನಾನು ಕೇಳುವದಿಲ್ಲ.

**ವೆಂಕಣ್ಣನಾಯಕ**—ನೀವು ನಿಶ್ಚಯವನ್ನೇ ಮಾಡಿದ್ದೀರಿ. ಮೇಲಾಗಿ ನೀವು ಹಟವಾದಿಗಳೆಂಬುದು ನಿಮ್ಮ ಬಾಲ್ಯದಿಂದಲೇ ನನಗೆ ಗೊತ್ತುಂಟು. ಆದು ರಿಂದ ನಾನು ನಿಮ್ಮ ವಿರುದ್ಧ ಪಕ್ಷದಿಂದ ಬೇಕಾದಷ್ಟು ಯೋಗ್ಯ ಕಾರಣಗಳನ್ನು ತೋರಿಸಿದಾಗ್ಯೂ ಅವು ನಿಮಗೆ ರುಚಿಸಲಾರವು. ಆದರೆ ನಿಮ್ಮ ಕೃತಿಯಿಂದ ನಿಮ್ಮ ವೃದ್ಧ ಮತ್ತು ಸನ್ಮಾನನೀಯ ತಾಯಿತಂದೆಗಳಿಗೆ ಏನನಿಸೀತೆಂಬುವದನ್ನು ನೀವು ಅವಶ್ಯವಾಗಿ ವಿಚಾರ ಮಾಡಿರಿ.

**ರಂಗರಾವ**—ವೆಂಕಣ್ಣನಾಯಕಾ, ಅದನ್ನೆಲ್ಲ ನಾನು ಈ ಮೊದಲೇ ವಿಚಾರ ಮಾಡಿರುತ್ತೇನೆ. ನಾನು ಅವರ ಅಪ್ಪಣೆಯನ್ನು ತೆಗೆದುಕೊಳ್ಳಲಿಲ್ಲವೆಂದು ಅವರಿಗೆ ಸ್ವಲ್ಪ ಹೊತ್ತು ಸಿಟ್ಟು ಬಂದೀತು. ಆದರೆ ನಾನು ನೇಮಿಸಿದ ಸ್ಥಳವು ಒಳ್ಳೇ ಮರ್ಯಾದೆಯುಳ್ಳದ್ದೆಂತಲೂ, ಸೊಸೆಯು ಸುಸ್ವರೂಪಿ ಮತ್ತು ಸದ್ಗುಣಿಯೆಂತಲೂ ಅವರಿಗೆ ಮನವರಿಕೆಯಾದ ತರುವಾಯ ಆ ನನ್ನ ಸುಜ್ಞ ತಾಯಿತಂದೆಗಳು ನನ್ನನ್ನು ಕ್ಷಮಿಸದೆ ಇರಲಾರರು. ಇದು ನೋಡು ! ನೀನು ಈ ಪ್ರಕಾರ ಇಲ್ಲದ್ದೊಂದು ಮಾತಾಡಿ ಸುಮ್ಮನೆ ನನ್ನನ್ನು ಅಧೈರ್ಯಗೊಳಿಸ ಬೇಡ. ನೀನು ನನ್ನ ಜೀವದ ಗೆಳೆಯನು. ಆದುದರಿಂದ ನಿನ್ನ ಸಹಾಯವಂತೂ ನನಗೆ ಅವಶ್ಯವಾಗಿ ಬೇಕಾಗಿರುತ್ತದೆ. ಇಂಥ ಪರಸ್ಥಳದಲ್ಲಿ ನಿನ್ನ ಹೊರತು ನನಗೆ ಯಾರು ಸಹಾಯಮಾಡುತ್ತಾರೆ? ನನ್ನ ಅರ್ಧಾಂಗಿಯನ್ನು ನಾನೇ ಹುಡುಕ ಬೇಕೆಂದು ನನ್ನ ಮನಸ್ಸಿನಲ್ಲಿ ನಿಶ್ಚಯ ಮಾಡಿರುತ್ತೇನೆ. ನಾನು ನಿರಾಶೆಯಿಂದ ದುಃಖದಲ್ಲಿ ತೊಳಲಾಡುವದು ನಿನಗೆ ಯೋಗ್ಯವಾಗಿ ಕಾಣುತ್ತದೋ ?

**ವೆಂಕಣ್ಣನಾಯಕ**—ರಾಯರೇ ಸಾಕಿನ್ನು. ಮನಸ್ಸಿಗೆ ಇಷ್ಟೇಕೆ ವ್ಯಥೆ ಮಾಡಿಕೊಳ್ಳುತ್ತೀರಿ ? ಈ ವೆಂಕಣ್ಣನಾಯಕನು ನಿಮ್ಮ ನಿಜವಾದ ಸ್ನೇಹಿತ ನಿರುತ್ತಾನೆ. ನೀವು ಪ್ರಚಂಡಗಡದಿಂದ ಈ ಕೆಲಸಕ್ಕೋಸ್ಕರ ಹೊರಟಾಗಲೇ ನಾನು ನಿಮಗೆ ಸಹಾಯ ಮಾಡಬೇಕೆಂದು ನಿಶ್ಚಯಿಸಿರುತ್ತೇನೆ. ನಿಮ್ಮ ಮನ ಸ್ಸಿನ ನಿಶ್ಚಯವು ಎಷ್ಟಿರುತ್ತದೆಂದು ಪರೀಕ್ಷಿಸುವದಕ್ಕಾಗಿಯೇ ಈ ಪ್ರಕಾರ ಇಷ್ಟೊತ್ತು ನಿಮ್ಮ ವಿರುದ್ಧವಾಗಿ ಮಾತಾಡಿದೆನು.

**ರಂಗರಾವ**— ಭಾಪು ! ಸ್ನೇಹಿತನಿದ್ದರೆ ಇಂಥವನೇ ಇರಬೇಕು.

**ವೆಂಕಣ್ಣನಾಯಕ**— ಪ್ರಚಂಡಗಡದಲ್ಲಿರುವಾಗ್ಗೆ ನಾನು ನಿಮ್ಮ ತೀರ್ಥರೂಪರಿಗೆ ಬರೆದಂಥ ಪತ್ರದ ಪ್ರತಿಯನ್ನು ನನ್ನ ಹತ್ತರ ಇಟ್ಟಿರುತ್ತೇನೆ. ಅವರಿಗೆ ಇತ್ತಕಡೆಯ ಸಮಾಚಾರವು ಕಿಂಚಿತ್ತಾದರೂ ಗೊತ್ತಾದರೆ ನಿಮ್ಮ ಕೆಲಸಕ್ಕೆ ವಿಘ್ನವುಂಟಾದೀತೆಂದು ತಿಳಿದು ನೀವು ಯಾವಾಗಲು ವಿದ್ವಜ್ಜನರ ಸಹವಾಸದಲ್ಲಿ ನಿಮಗ್ನರಾಗಿರುತ್ತೀರೆಂತಲೂ, ನಿಮಗೆ ವಿದ್ಯಾವ್ಯಾಸಂಗದ ಹೊರತು ಎರಡನೇ ವ್ಯಾಸಂಗವು ಇರುವದಿಲ್ಲೆಂತಲೂ ನಾನು ಆ ಪತ್ರದಲ್ಲಿ ಬರೆದಿರುತ್ತೇನೆ. ಇಗೋ ಕೇಳಿರಿ. ಆ ಪತ್ರವನ್ನೇ ನಿಮ್ಮ ಮುಂದೆ ಪೂರ್ಣವಾಗಿ ಓದಿಬಿಡುತ್ತೇನೆ. (ಪತ್ರವನ್ನು ತೆಗೆದು ಓದುತ್ತಾನೆ.) "ಶಿರಸ್ಸಾಷ್ಟಾಂಗ ನಮಸ್ಕಾರಗಳು. ಇಂದಿನ ಮಿತಿಯವರೆಗೆ ತಮ್ಮ ಆಶೀರ್ವಾದದಿಂದ ನಾನೂ ತಮ್ಮ ಚಿರಂಜೀವರೂ ಕ್ಷೇಮದಿಂದಿದ್ದೇವೆ. ತಮ್ಮ ಚಿರಂಜೀವ ಶ್ರೀಮಂತ ರಾಜಶ್ರೀಗಳು ವಿದ್ಯಾಭ್ಯಾಸದಲ್ಲಿ ನಿಮಗ್ನರಾಗಿರುತ್ತಾರೆ. ಅವರಿಗೆ ಜ್ಞಾನಾರ್ಜನೆಯ ಹೊರತು ಎರಡನೇ ವ್ಯಸನವೇ ಇಲ್ಲ. ಅವರು ಜ್ಞಾನಾರ್ಜನ ಮತ್ತು ನೀತಿವಾದಗಳಲ್ಲಿ ತಲ್ಲೀನರಾಗಿರುತ್ತಾರೆ. ಇಂದ್ರಿಯ ಸುಖೋಪಭೋಗವಂತೂ ಅವರಿಗೆ ಕನಸುಮನಸಿನಲ್ಲಿ ಸಹ ಗೊತ್ತಿಲ್ಲ. ಇಂದ್ರಿಯ ದಮನದಲ್ಲಿ ಅವರು ಪ್ರತಿ ಶುಕ್ರಾಚಾರ್ಯರಾಗಲಿಕ್ಕೆ ಹತ್ತಿರುತ್ತಾರೆ. ನ್ಯಾಯಶಾಸ್ತ್ರದಲ್ಲಂತೂ ಅವರು ಬಹಳ ಪ್ರವೀಣರಾಗಿದ್ದು ತಮ್ಮ ಪ್ರತಿಪಕ್ಷದವರನ್ನು ಹಾ ಹಾ ಅನ್ನುವಷ್ಟರೊಳಗೆ ಕೋಟಿ ಕ್ರಮದಲ್ಲಿ ಸೋಲಿಸಿ ಬಿಡುತ್ತಾರೆ. ಸಾಹಿತ್ಯಶಾಸ್ತ್ರವಂತೂ ಅವರ ಮನೆಯ ತೊತ್ತಾಗಿರುತ್ತದೆ. ಆದುದರಿಂದ ಅವರು ಭಾಷಣ ಮಾಡುವಾಗ ಉಪಯೋಗಿಸುವ ಅಲಂಕಾರಾದಿಗಳನ್ನು ಕೇಳಿ ಶ್ರೋತೃಗಳು ತಲ್ಲೀನರಾಗುತ್ತಾರೆ. ಅವರು ಕಾವ್ಯದಲ್ಲಿಯ ರಸಾಸ್ವಾದವನ್ನು ತೆಗೆದುಕೊಳ್ಳುವಾಗ ಈ ಜಗತ್ತನ್ನೇ ಮರೆತುಬಿಡುತ್ತಾರೆ. ಗಣಿತ ಮತ್ತು ನೀತಿ ಶಾಸ್ತ್ರಗಳಲ್ಲಿ ಅತ್ಯಂತ ಆಸಕ್ತರಾಗಿ ಯಾವಾಗಲು ಆಯಾ ಶಾಸ್ತ್ರಗಳ ಪ್ರಮೇಯಗಳನ್ನೂ ಗೂಢ ತತ್ವಗಳನ್ನೂ ಕುರಿತು ವಿಚಾರಮಾಡುತ್ತ ಕುಳಿತುಕೊಳ್ಳುತ್ತಾರೆ. ಇತ್ಯಾದಿ ಇತ್ಯಾದಿ."

**ರಂಗರಾವ**— (ನಗುತ್ತ) ಭಲೆ. ಭಲೆ. ವೆಂಕಣ್ಣನಾಯಕಾ ! ನಿನ್ನ ಪತ್ರದ ಅರ್ಥವನ್ನು ತಿಳಿದುಕೊಳ್ಳಲಿಕ್ಕೆ ನಮ್ಮ ಹಿರಿಯರು ಒಬ್ಬ ಶಾಸ್ತ್ರಿಗಳ ಬಳಿಯ

ಲ್ಲಿಯೇ ಹೋಗಬೇಕಾದೀತು. (ಇಬ್ಬರೂ ನಗುತ್ತಾರೆ) ನೀನು ವಿಶೇಷ ಕಲಿತವನಲ್ಲ. ಹೀಗಿದ್ದು ನಿನಗೆ ಈ ಪತ್ರದಲ್ಲಿ ಇಂಥ ದೊಡ್ಡ ದೊಡ್ಡ ಶಬ್ದಗಳನ್ನೂ ಅಲಂಕಾರಗಳನ್ನೂ ಬರೆಯಲಿಕ್ಕೆ ಹೇಗೆ ಬಂದಿತು ?

**ವೆಂಕಣ್ಣನಾಯಕ**—ನಿಮ್ಮ ಸಹವಾಸದಿಂದ ನಾನು ಇಷ್ಟು ಕಲಿಯದೆ ಬಿಟ್ಟಿದ್ದರೆ ನಿಮ್ಮ ಸ್ನೇಹಿತನೆಂದು ಕರೆಸಿಕೊಳ್ಳಲಿಕ್ಕೆ ಸರ್ವಥಾ ಯೋಗ್ಯನಾಗುತ್ತಿದ್ದಿಲ್ಲ. ಅದು ಹೇಗೂ ಇರಲಿ. ನೀವು ಆ ಹುಚ್ಚ ಭೀಮರಾಯನ ಬಾಯಿಂದ ಲಕ್ಷ್ಮೀಪತಿರಾಯನ ಮಗಳ ಸೌಂದರ್ಯದ ವರ್ಣನೆಯನ್ನು ಕೇಳಿ ಮರುಳುಗೊಂಡು ನನ್ನನ್ನು ಇಲ್ಲಿಗೆ ಕರೆದು ತಂದಿರಿ. ಆದರೆ ನಾನು ಇನ್ನು ಮುಂದೆ ಮಾಡತಕ್ಕ ಕಾರ್ಯವಾವದು ?

**ರಂಗರಾವ** —ನೀನು ಏನು ಮಾಡಬೇಕೆಂಬುವದನ್ನು ನಾನು ಇನ್ನೂ ನನ್ನ ಮನಸ್ಸಿನಲ್ಲಿ ನಿರ್ಧಾರ ಮಾಡಿಲ್ಲ. ಆ ಸುಂದರಿಯ ಮುಖಕಮಲವು ಒಮ್ಮೆ ದೃಷ್ಟಿಗೆ ಬಿದ್ದ ಬಳಿಕ ನಮಗೆ ವಿಚಾರಗಳು ತೋಚಿದಂತೆ ನಡೆಯೋಣ. ಆ ಲಕ್ಷ್ಮೀಪತಿರಾಯನ ಮನೆಯನ್ನು ನೀನಂತೂ ನೋಡಿಕೊಂಡು ಬಂದಿರುತ್ತೀ. ಆ ಮನೆಯು ಇನ್ನೂ ಎಷ್ಟು ದೂರಿರುವದು ?

**ವೆಂಕಣ್ಣನಾಯಕ**—ನಿಲ್ಲಿರಿ. ನೋಡೋಣ. (ಅತ್ತಿತ್ತ ನೋಡಿ) ಇದೇ ಆ ಓಣಿಯು ಮತ್ತು ಅದೇ ಆ ಲಕ್ಷ್ಮೀಪತಿರಾಯನ ಮನೆಯು.

**ರಂಗರಾವ** –ನಡುಮನೆಯಲ್ಲಿ ಯಾರೋ ಕುಳಿತಿರುತ್ತಾರೆ. ಆ ಮುದುಕನೇ ಲಕ್ಷ್ಮೀಪತಿರಾಯನಿರಬಹುದು. ಅವನ ಹತ್ತರ ನಿಂತಿರುವವರು ಅವನ ಹೆಣ್ಣು ಮಕ್ಕಳೆಂದು ಕಾಣುತ್ತದೆ. ಅವರಲ್ಲಿ ಆ ದೊಡ್ಡಾಕೆಯನ್ನು ನೋಡು. ಅವಳು ಎಷ್ಟು ಸ್ಥೂಲಕಾಯಳು ಇರುತ್ತಾಳೆ ! ಆದರೆ ಆ ಚಿಕ್ಕಾಕೆಯು ಮಾತ್ರ ನಕ್ಷತ್ರದಂತೆ ಮಿಂಚುತ್ತಾಳೆ ! ಹಾಗೂ ಅಲ್ಲಿ ನೋಡು, ನಮಗೆ ಪ್ರಚಂಡಗಡದಲ್ಲಿ ಬೆಟ್ಟಿಯಾಗಿದ್ದಂಥ ಹುಚ್ಚ ಭೀಮರಾಯನು ಆ ಎಂದು ಬಾಯಿ ತೆರೆದುಕೊಂಡು ಕುಳಿತಿದ್ದಾನೆ !

**ವೆಂಕಣ್ಣನಾಯಕ**--ಹೌದು. ಅವರೆಲ್ಲರು ಗಟ್ಟಿಸಿ ಮಾತಾಡುತ್ತ ಕುಳಿತಿರುತ್ತಾರೆ. ಆ ಮೂಲೆಯಲ್ಲಿ ನಾವು ನಿಂತರೆ ಅವರ ಮಾತುಗಳೆಲ್ಲ ನಮಗೆ

ಕೇಳಿಸಬಹುದು. ಇದಲ್ಲದೆ ಅಲ್ಲಿ ನಿಂತುಕೊಂಡರೆ ನಾವು ಒಳಗಿನವರಿಗೆ ಕಾಣಿ ಸುವದಿಲ್ಲ. (ಇಬ್ಬರೂ ಮೂಲೆಯಲ್ಲಿ ಹೋಗಿ ಕಿವಿಗೊಟ್ಟು ಕೇಳುತ್ತ ನಿಂತುಕೊಳ್ಳುತ್ತಾರೆ.)

(ಇಷ್ಟರಲ್ಲಿ ನೇಪಥ್ಯವು ತೆರೆಯುತ್ತದೆ. ಒಳಗೆ ಲಕ್ಷ್ಮೀಪತಿರಾಯನೂ, ಬಾಪೂರಾಯನೂ, ಭೀಮರಾಯನೂ ಮಾತಾಡುತ್ತ ಕುಳಿತಿರುವರು. ತ್ರಾಟಿಕೆಯೂ ಕಮಲೆಯೂ ನಿಂತಿರುವರು.)

**ಲಕ್ಷ್ಮೀಪತಿರಾವ**— ನಾನು ಮಾಡಿದ ನಿಶ್ಚಯವಂತೂ ನಿಮಗೆ ಗೊತ್ತೇ ಅದೆ. ಆಡಿದ್ದೇ ಆಡಿ ನನ್ನ ತಲೆ ಎಬ್ಬಿಸಬೇಡಿರಿ. ಹಿರಿಯ ಮಗಳ ಲಗ್ನ ಮಾಡುವ ಮುಂಚೆ ನನಗೆ ಚಿಕ್ಕ ಮಗಳ ಲಗ್ನದ ಉಸಾಬರಿಯೇ ಬೇಡ. ನಿಮಗೆ ಬೇಕಾದರೆ ನನ್ನ ಮುದ್ದು ಮಗಳಾದ ರಂಗೆಯ ಬಗ್ಗೆ ಮಾತಾಡಿರಿ.

**ತ್ರಾಟಿಕಾ**—ಅಪ್ಪಾ ! ನನಗೆ ಈ ಸಪ್ಪಗಿನ ನಿಸ್ಸತ್ವವಾದ ಹೆಸರು ಸೇರು ವದಿಲ್ಲೆಂದು ನಿಮಗೆ ಸಾವಿರಸಾರೆ ಹೇಳಿರುತ್ತೇನೆ. ಆದರೂ ನೀವು ನಿಮ್ಮ ಕಾಡು ಗುಣವನ್ನು ಬಿಡಲೊಲ್ಲಿರಿ. ನನಗೆ ಮುದ್ದುಮಗಳೆಂದು ಅನ್ನುತ್ತ ಹೋಗಬೇಡಿರಿ. ಇಲ್ಲಿರುತ್ತಾಳೆ ನೋಡಿರಿ. ನಿಮ್ಮ ಮುದ್ದಿ—ಬಂಗಾರದ ಮುದ್ದಿ. (ಎಂದು ಕಮಲೆಯು ಬಗಲೊಳಗೆ ಬೊಟ್ಟು ಚುಚ್ಚುತ್ತಾಳೆ.)

**ಲಕ್ಷ್ಮೀಪತಿರಾವ**:—ಹೋಗಲಿ ಬಿಡು. ( ಭೀಮರಾಯನ ಕಡೆಗೂ ಬಾಪೂ ರಾಯನ ಕಡೆಗೂ ನೋಡಿ) ಇವಳನ್ನು ಯಾರಾದರೂ ಮದುವೆ ಮಾಡಿಕೊಳ್ಳತಕ್ಕವರಿ ದ್ದರೆ ಮಾತಾಡಿರಿ. ಆದರೆ ನೀವೇ ಬೇಕಾದ ರೀತಿಯಿಂದ ಆಕೆಯ ಮನಸ್ಸನ್ನು ಒಲಿಸಿಕೊಳ್ಳಬಹುದು. ಅವಳ ಮನಸ್ಸನ್ನು ಒಲಿಸಲಿಕ್ಕೆ ನಾನು ನಿಮಗೆ ಅತ್ಯಾ ನಂದದಿಂದ ಅಪ್ಪಣೆಯನ್ನು ಕೊಡುತ್ತೇನೆ.

**ಬಾಪೂರಾವ**:—(ಭೀಮರಾಯನನ್ನುದ್ದೇಶಿಸಿ ಒತ್ತಟ್ಟಿಗೆ) ಏಕೆ ಭೀಮರಾವ ? ಈ ರತ್ನವು ನಿಮ್ಮ ಮನಸ್ಸಿಗೆ ಬಂತಷ್ಟೇ ? ಇವಳು ಬಹಳ ಧಷ್ಟ ಪುಷ್ಟಳು ಇರು ತ್ತಾಳೆ. ಇವಳ ಲಗ್ನವನ್ನು ಮಾಡಿಕೊಂಡು ಬಿಟ್ಟರೆ ನಿಮಗೆ ಯಾತರದೂ ಚಿಂತೆ ಉಳಿಯುವದಿಲ್ಲ.

**ಭೀಮರಾವ**:— (ಬಾಪೂರಾಯನನ್ನುದ್ದೇಶಿಸಿ ಒತ್ತಟ್ಟಿಗೆ) ಹಾಗಾದರೆ ಅವ ಳನ್ನು ಘನವಂತರೇ ಗ್ರಹಣ ಮಾಡಲಿ. ಯೋಗ್ಯ ವಿಚಾರ ಮಾಡಿದಲ್ಲಿ ಅವಳ

ಮೇಲೆ ಘನವಂತರದೇ ಅಧಿಕಾರವಿರುವದು. ಏಕೆಂದರೆ ನಮ್ಮಿಬ್ಬರಲ್ಲಿ ಘನವಂತರೇ ಜ್ಯೇಷ್ಠರು. ಈ ಕನ್ಯಾಮಣಿಗಳಲ್ಲಿ ಇವಳೇ ಜ್ಯೇಷ್ಠಳು. ಅಂದಮೇಲೆ ನಿಮ್ಮಿಬ್ಬರ ಲಗ್ನವಾಗುವದೇ ಅತ್ಯಂತ ಯೋಗ್ಯವು.

**ಬಾಪೂರಾವ** —ವ್ಹಾಃ ನಿನ್ನ ಮಾತಿನ ಅರ್ಥಮಾಡಲಿಕ್ಕೆ ಕೇವಲ ಬ್ರಹಸ್ಪತಿಯೇ ಭೂಲೋಕದ ಮೇಲೆ ಅವತರಿಸಬೇಕು. ನೀನು "ಘನವಂತ"ಎಂಬ ಶಬ್ದವನ್ನು ಎಲ್ಲಿಂದ ಕಲಿಯೋಣವಾಯಿತು ? ಒಳ್ಳೇದು, ಅದೂ ಇರಲಿ. ಇವಳನ್ನು ಲಗ್ನ ಮಾಡಿಕೊಳ್ಳುವದು ಯೋಗ್ಯವೋ ಅಯೋಗ್ಯವೋ ಎಂಬುವದನ್ನು ಏನು ನೋಡುತ್ತ ಕುಳಿತಿರುವೆ ? ನೀನು ಹೇಗೂ ನನ್ನಕಿಂತಲು ತರುಣ ಬಂಟನು. ನೀನೇ ಒಂದು ವೇಳೆ ಈ ಪ್ರಕರಣವನ್ನು ನಿಸ್ತರಿಸಿದರೂ ನಿಸ್ತರಿಸಬಹುದು.

**ತ್ರಾಟಿಕಾ**—ನೋಡಿದಿರಾ, ಏನು ಕೈಸಾಗದ ಹೇಡಿಗಳಿವರು ? ತಮ್ಮ ತಮ್ಮೊಳಗೆ ಎಷ್ಟೊತ್ತು ಗುಜುಗುಜು ಮಾತಾಡುತ್ತಾರೆ ? ತಾತಾ, ನನ್ನ ಜನ್ಮದ ಗಂಟು ಇಂಥವರ ಕೂಡವೇ ? ನಾನು ಎಂದೆಂದಿಗೂ ಲಗ್ನ ಮಾಡಿಕೊಳ್ಳುವದಿಲ್ಲ. ಇವನ್ನು ಈಗ ನಿಮ್ಮ ಮುಂದೆ ಸ್ಪಷ್ಟವಾಗಿ ಹೇಳುತ್ತೇನೆ. ಲಗ್ನ ಮಾಡಿಕೊಂಡು ಪಂಜರದೊಳಗಿನ ಪಕ್ಷಿಯಂತೆ ಗಂಡನ ಆಧೀನವಾಗಿರುವವಕ್ಕಿಂತ ಸ್ವತಂತ್ರವಾಗಿದ್ದು ಸ್ವಂತ ದೇಹದ ಸ್ವಾಮಿನಿಯಾಗಿರುವದು ಲೇಸಲ್ಲವೇ ? ಇದಲ್ಲದೆ ಇಂಥ ಹೇಡಿ ಗಂಡಸರ ಕೂಡ ಲಗ್ನ ಮಾಡಿಕೊಂಡು ಮುಂದೆ ಯಾರು ಪೇಚಾಡಬೇಕು ?

**ಬಾಪೂರಾವ** —ಅಮ್ಮಾ, ನೀನು ಸ್ವಸ್ಥಚಿತ್ತದಿಂದಿರು. ನಿನ್ನ ಮನಸ್ಸಿನಲ್ಲಿದ್ದದ್ದೇ ನಮ್ಮ ಮನಸ್ಸಿನಲ್ಲೂ ಉಂಟು. ನಮ್ಮಗೋಸ್ಕರ ನೀನೇನೂ ಅಂಜುವ ಕಾರಣವಿಲ್ಲ. ನಾವು ನಿನ್ನಂಥವಳನ್ನು ಲಗ್ನ ಮಾಡಿಕೊಂಡು ಈಗಲೇ ನಮ್ಮ ಜೀವಕ್ಕೆ ಎರವಾಗಲಾರೆವು. ನಮಗೆ ಈ ಜಗತ್ತಿನಲ್ಲಿ ಇನ್ನೂ ನಾಲ್ಕೊಪ್ಪತ್ತು ಜೀವದಿಂದಿರಬೇಕಾಗಿರುತ್ತದೆ. ಆದುದರಿಂದ ಇಕೋ ನೋಡು ! ನಾನು ನಿನಗೆ ದೂರಿಂದಲೇ ದಂಡವತ್ ಪ್ರಣಾಮುಗಳನ್ನು ಮಾಡುತ್ತೇನೆ.

**ಭೀಮರಾವ**—ಬಾಪೂರಾವ ! ನಾನೂ ನಿನ್ನ ಹಸ್ತಕ್ಕೆ ಸ್ಪರ್ಶ ಮಾಡುತ್ತೇನೆ. ಜಗದಂಬೇ ಮಾತುಶ್ರೀ ! ನಮ್ಮ ಮೇಲೆ ಕ–ಕೃಪಾ ಮಾಡು. ನಾ–ನಾವು

ನಿ—ನಿನ್ನ ಉ—ಉಸಾಬರಿಗೆ ಬ—ಬರುವದಿಲ್ಲ. ನೀ—ನೀನು ದ-ದಯಮಾಡಿ ನ—ನನ್ನ ಜೀ—ಜೀವ ಉ—ಉಳಿಸಿದರೆ ನಾ—ನಾನು ನಿ—ನಿನಗೆ ನಾ—ನಾಲ್ಕು ಕೊ-ಕೋಳಿ ಬ—ಬಲಿ ಕೊ—ಕೊಡುತ್ತೇನೆ. ( ಎಲ್ಲರು ನಗುತ್ತಾರೆ. )

**ತ್ರಾಟಿಕಾ**—ಎಲೋ ಹೇಡಿ ! ಹೆಂಗಸು ಗಂಡನ ಕೈಮುಟ್ಟಿಕೊಂಡು ನಿಲ್ಲುವಂತೆ ಹೀಗೇಕೆ ಕೈಮುಟ್ಟಿಕೊಂಡು ನಿಂತಿರುತ್ತೀ ? ಅಳಬುರಕಾ! ನಿನ್ನ ಬಲಿ ತಕ್ಕೊಂಡು ನಾನೇನು ಮಾಡತಕ್ಕದ್ದದೆ ? ನಿನಗೆ ಬಲಿಯನ್ನು ಕೊಡಬೇಕಾಗಿದ್ದರೆ ಅದನ್ನು ತಿಪ್ಪಿಯ ಮೇಲೆ ನಾಯಿಯ ಮುಂದೆ ಒಯ್ದು ಚಲ್ಲು ! ಬಾಲಕರೇ ! ಶಾಂತರಾಗಿರಿ. ಸರ್ವಥಾ ಅಂಜಬೇಡಿರಿ. ಈ ತ್ರಾಟಿಕೆಯ ಮನಸ್ಸಿನಲ್ಲಿ ನಿಮ್ಮ ಜೀವವನ್ನು ಬಲಿ ತೆಗೆದುಕೊಳ್ಳುವದು ಯತ್ಕಿಂಚಿತವಾದರೂ ಇಲ್ಲ. ಇಲ್ಲದಿದ್ದರೆ ಈ ನನ್ನ ಹಣೆಗೆಯನ್ನು ನೋಡಿದಿರಾ ? ( ತನ್ನ ಚೂಪಾದ ಉಗುರುಗಳನ್ನು ತೋರಿಸುತ್ತಾಳೆ. ) ಇದರಿಂದ ನಿಮ್ಮ ಕೋಮಲವಾದ ಮುಖವನ್ನು ಚನ್ನಾಗಿ ಶೃಂಗರಿಸಿ ಬಿಡುತ್ತಿದ್ದೆನು. ಏಕೆ ಹಿಂದಕ್ಕೆ ಸರಿದುಕೊಳ್ಳುತ್ತೀರಿ ? ನಿಮಗೆ ಅಂಜಬೇಡಿರೆಂದು ನಾನು ಮೊದಲೇ ಹೇಳಿದೆನಲ್ಲ ! ಬಹಳ ಎಚ್ಚರಿಕೆಯಿಂದಿರ್ರಿ. ತಿರುಗಿ ನೀವು ನನ್ನ ಮನಸ್ಸು ಒಲಿಸುವ ಗೊಡವಿಗೆ ಬಂದರೆ ನಿಮಗೆ ಯಥೇಚ್ಛವಾಗಿ ಮುಷ್ಟಿಮೋದಕಗಳನ್ನು ಉಣ್ಣಿಸಿ ಅರ್ಧಚಂದ್ರ ಪ್ರಯೋಗ ಮಾಡೇನು !

**ಬಾಪೂರಾವ**—ಜಯಮಾತೇ ಭವಾನೀ ! ಜಯಮಾಲತೇಶಾ ! ಈ ರಾಕ್ಷಸಿಯಿಂದ ನಮ್ಮನ್ನು ರಕ್ಷಿಸು !

**ಭೀಮರಾವ**—ಪರಮೇಶ್ವರಾ ! ನಮ್ಮನ್ನು ಇಲ್ಲಿಂದ ಪಾರ ಮಾಡು ! ( ಇಬ್ಬರೂ ಒಬ್ಬರಿಗೊಬ್ಬರು ಗುಜುಗುಜು ಮಾತಾಡುತ್ತಾರೆ. )

**ವೆಂಕಣ್ಣನಾಯಕ**—(ರಂಗರಾಯನಿಗೆ) ರಾಯರೇ ! ಈ ಚಮತ್ಕಾರವನ್ನು ನೋಡಿದಿರಾ ? ಈ ಸ್ತ್ರೀಯು ಪೂರ್ಣವಾದ ಹುಚ್ಚಿಯಾಗಲಿ, ನಿರ್ಲಜ್ಜೆಯಾದ ತಾಟಗಿತ್ತಿಯಾಗಲಿ ಇರಬಹುದು. ಈ ಹುಚ್ಚ ಮನುಷ್ಯರಾದರೂ ಇವಳೊಡನೆ ಹಿಗೇಕೆ ಮಾತಾಡುತ್ತಿದ್ದಾರೆ ? ಏನಿವರ ವಿಚಿತ್ರ ವೇಷವು ? ಏನಿವರ ವಿಲಕ್ಷಣ ಸಂವಾದವು ?

**ರಂಗರಾವ**— ( ಕಮಲೆಯ ಕಡೆಗೆ ಒಂದೇ ಸವನೆ ದೃಷ್ಟಿಸಿ ನೋಡುತ್ತ ) ಇದಕ್ಕೆ ಚಮತ್ಕಾರವೇನನ್ನುತ್ತೀ ? ಇದು ಬರೀ ಚಮತ್ಕಾರವಲ್ಲ, ಕೇವಲ ಬ್ರಹ್ಮಾನಂದವು!

ನನ್ನ ಕಾಲುಗಳಂತೂ ಈ ಸ್ಥಳ ಬಿಟ್ಟು ಮೇಲಕ್ಕೇಳಲೊಲ್ಲವು. ಈ ಪುಷ್ಪಕಮಲವು ಎಷ್ಟು ಮೋಹಕವಾಗಿರುತ್ತದೆ!

**ವೆಂಕಣ್ಣನಾಯಕ**—(ತನ್ನಷ್ಟಕ್ಕೆ) ರಾಜಶ್ರೀಯ ಚಿತ್ತವು ಬೇರೇ ಕಡೆಗೆ ಹೋಗಿರುವಂತೆ ಕಾಣುತ್ತದೆ. ಇವನು ಈ ಚಿಕ್ಕವಳನ್ನು ನೋಡಿದಾಗಿನಿಂದ ಭ್ರಾಂತಿಷ್ಟನಾಗಿದ್ದು ತನ್ನ ಮೊದಲಿನ ನಿಶ್ಚಯವನ್ನು ಮತ್ತಷ್ಟು ದೃಢಮಾಡಿದಂತೆ ಕಾಣುತ್ತದೆ.

**ಲಕ್ಷ್ಮೀಪತಿರಾವ**—ಗೃಹಸ್ಥರೇ! ನಿಮ್ಮ ಅಭಿಪ್ರಾಯವು ಗೊತ್ತಾಯಿತು. ನೀವು ಇನ್ನೂ ಚೆನ್ನಾಗಿ ವಿಚಾರ ಮಾಡತಕ್ಕವರಾಗಬಹುದು. ಹಾಗೇ ಆಗಲಿ. ಸಾವಕಾಶದಿಂದ ವಿಚಾರ ಮಾಡಿರಿ. ನಾನು ನನ್ನ ನಿಶ್ಚಯವನ್ನು ನಿಮಗೆ ಮೊದಲೇ ತಿಳುಹಿಸಿರುತ್ತೇನೆ. ಅದನ್ನು ನಾನೆಂದೂ ತಿರುಗಿಸಲಾರೆನು. ಕಮಲೇ, ನೀನು ಇನ್ನು ಒಳಗೆ ಹೋಗು. ಏತಕ್ಕೂ ಖೇದಪಡಬೇಡ. ನಿನ್ನ ಮೇಲೆ ನನ್ನ ಪ್ರೇಮುವು ಯಥಾಪ್ರಕಾರವಿರುತ್ತದೆಂದು ನಂಬು.

**ತ್ರಾಟಿಕಾ**:—ನನ್ನ ಕಂದಮ್ಮಾ! ನನ್ನ ಬಂಗಾರದ ಕೂಸೇ! ಅಲಬೇಲಮ್ಮಾ ಅಲಬೇಲ! (**ಲಕ್ಷ್ಮೀಪತಿರಾಯನ ಕಡೆಗೆ ನೋಡಿ ತಿರುವಿ**) ಈಕೆಯಮೇಲೆ ನಿಮ್ಮ ಪ್ರೇಮುವು ಯಥಾಪ್ರಕಾರ ಇರುತ್ತದೆಂದು ಬಾಯಿಂದ ಉಪಚಾರವನ್ನು ಸುರಿಸುತ್ತೀರಿ. ಅರಿಯದವರು ನಿಜವೆಂತಲೇ ನಂಬಬೇಕು! ಆಹಹ! ಕಣ್ಣೊಳಗೆ ಬೆರಳು ಚುಚ್ಚುವವರೂ ನೀವೇ! ಅಳಬೇಡೆಂದು ಕಣ್ಣೀರು ಒರಸುವವರೂ ನೀವೇ! (**ಕಮಲೆಯ ಕಡೆಗೆ ಪುನಃ ನೋಡಿ ತಿರುವಿ**) ಅಮ್ಮಣ್ಣೀ, ನೀನು ಕಕ್ಕನ ಸಕ್ಕರಿಯಂಥ ಮಾತಿಗೆ ಮರುಳಾಗಬೇಡ, ಅಳಳು. ನೋಡೋಣ, ಅಳಳು. (**ಎಂದು ಕಮಲೆಯ ಗಲ್ಲವನ್ನು ಹಿಡಿಯುತ್ತಾಳೆ.**)

**ಕಮಲಾ**—ಅಪ್ಪನ ಪ್ರೀತಿಯು ನನ್ನ ಮೇಲೆ ಎಷ್ಟು ಇರುತ್ತದೆಂಬುವದು ನನಗೆ ಚೆನ್ನಾಗಿ ತಿಳಿಯುತ್ತದೆ, ಬಲ್ಲೆಯಾ! (**ಗಲ್ಲವು ಕೆಂಪಾದದ್ದನ್ನು ತೋರಿಸಿ**) ಇದು ಮಾತ್ರ ನಿನ್ನ ಪ್ರೀತಿಯ ಗುರುತು ನೋಡು! ಅಕ್ಕಾ, ನಿನ್ನ ಇಂಥ ಪ್ರೀತಿಯು ಮಾತ್ರ ಸಾಕು. (**ಲಕ್ಷ್ಮೀಪತಿರಾಯನ ಕಡೆಗೆ ತಿರುಗಿ**) ಅಪ್ಪಾ, ನಾನು ನಿನ್ನ ಆಜ್ಞೆಯನ್ನು ಮೀರಿ ಎಂದೂ ನಡೆಯಲಿಕ್ಕಿಲ್ಲ. ಇನ್ನು ಮೇಲೆ ನಾನು ನಡುಮನೆಯ ಹೊಸ್ತಿಲ ದಾಟಿ ಕಾಲು ಸಹ ಇಡಲಿಕ್ಕಿಲ್ಲ. (**ಒಳಗೆ ಹೋಗಲಾರಂಭಿಸುತ್ತಾಳೆ.**)

**ತ್ರಾಟಿಕಾ**— ಏಕೆ ಹೊಯ್ಮಾಲೀ ! ನಿನ್ನ ನಾಲಿಗೆಯನ್ನು ಬಹಳ ಉದ್ದ ಮಾಡಿದೆ ? ನನಗೆ ನಿನ್ನ ಮಾತಿನ ಅರ್ಥವು ಗೊತ್ತಾಗುವದಿಲ್ಲೆಂದು ತಿಳಿದು ಕೊಂಡೇನು ? ನಾನು ಅಪ್ಪನ ಆಜ್ಞೆಯನ್ನು ಮೀರಿ ನಡೆಯುವವಳೇನು ? ನನಗೆ ಮರ್ಯಾದೆಯನ್ನು ಕಲಿಸುವದಕ್ಕೆ ನೀನು ದೊಡ್ಡ ಪಂಡಿತಳು ಬಂದೆ ! ಇದು ನೋಡು, ನಿನ್ನ ಸಮಾಚಾರ ತೆಗೆದುಕೊಳ್ಳಲಿಕ್ಕೆ ಈಗಲೇ ಬರುತ್ತೇನೆ. ( ಅವಳ ಬೆನ್ನು ಹತ್ತಿ ಹೋಗಲಾರಂಭಿಸುತ್ತಾಳೆ. )

**ಲಕ್ಷ್ಮೀಪತಿರಾಯ**— ಹ್ಞ ರಂಗೂ ! ಇದೇನು ! ಈ ಪ್ರಕಾರ ಆಕೆಯ ಗೂಡ ಜಗಳಾಡಲಿಕ್ಕೆ ಹೋಗಬೇಡ. (ಎಂದು ಅಡ್ಡ ಗಟ್ಟುತ್ತಾನೆ. )

**ತ್ರಾಟಿಕಾ**— ಅಪ್ಪಾ ! ನನ್ನನ್ನು ಅಡ್ಡಗಟ್ಟಬೇಡ. ಯಾವಾಗ್ಗೆ ನೋಡಿದರೂ ಆಕೆಯ ಬಡಿವಾರದ ಮಾತೇ ಇಂಥವು. ನಾನು ಇಂಥ ಮಾತು ಆಡಿಸಿ ಕೊಳ್ಳಲಾರೆನು. ನಾನು ಒಳಗೆ ಹೋಗತಕ್ಕವಳೇ. ನಾನೇನೂ ನಿನ್ನ ಮಾತು ಕೇಳುವದಿಲ್ಲ. ನಾನು ಒಳಗೆ ಹೋಗಿ ಆಕೆಗೆ ಬೇಕಾದುದನ್ನು ಮಾಡುತ್ತೇನೆ. ನಿನಗೆ ಕಾಯುತಕ್ಕದ್ದಿದ್ದರೆ ಆ ಸುಂದರ ಮೋಹಗಾರತಿಯನ್ನು ಚೆನ್ನಾಗಿ ಕಾಯಿ. ಇಲ್ಲದಿದ್ದರೆ ನೋಡು, ಇಲ್ಲಿ ಎಷ್ಟು ಗೃಧ್ರ ಪಕ್ಷಿಗಳು ಅವಳ ಮೇಲೆ ಹೊಂಚು ಹಾಕಿಕೊಂಡು ಕುಳಿತಿರುತ್ತವೆ ! ಅವಳನ್ನು ನೀನು ಬಹು ಎಚ್ಚರಿಕೆಯಿಂದ ಕಾಯ ಬೇಕು ಕಂಡಿಯಾ ! ( ಎಂದು ಕಾಲು ಅಪ್ಪಳಿಸುತ್ತ ಒಳಗೆ ಹೋಗುತ್ತಾಳೆ. )

**ಬಾಪೂರಾವ**— (ಒತ್ತಟ್ಟಿಗೆ) ಅಮ್ಮನವರೇ, ಬೇಗನೆ ದಯಮಾಡಿಸಿರಿ. ನೀವು ಪ್ರತ್ಯಕ್ಷ ನರಕದ ದಾರಿಯನ್ನು ಹಿಡಿದಾಗ್ಯೂ ನಿಮಗೆ ಯಾರೂ ಅಡ್ಡ ಬರಲಾರರು. ನಿಮ್ಮ ಉಗ್ರ ಸ್ವಭಾವವನ್ನು ಸಹನ ಮಾಡಿಕೊಳ್ಳತಕ್ಕಂಥವರು ಈ ಜಗತ್ತಿನಲ್ಲಿ ಯಾರಾದರೂ ಇದ್ದಾರೆಂದು ನನಗಂತೂ ಕಾಣುವದಿಲ್ಲ.

**ಲಕ್ಷ್ಮೀಪತಿರಾವ**— ನಾನು ಇವಳ ಬೆನ್ನ ಹಿಂದೇ ಹೋಗುವದು ಯೋಗ್ಯವು. ಇಲ್ಲದಿದ್ದರೆ ಈ ರಾಕ್ಷಸಿಯು ಆ ಹುಡಿಗೆಯ ಗತಿಯನ್ನು ಏನು ಮಾಡುವಳೆಂಬ ನಂಬಿಗೆಯು ಹತ್ತುವದಿಲ್ಲ. ಈಶ್ವರನು ನನ್ನ ಪಾಲಿಗೆ ಇದೊಂದು ಶನಿಯನ್ನೇ ಗಂಟುಹಾಕಿರುತ್ತಾನೆ. ಹೇಗಾದರೂ ಮಾಡಿ ಒಮ್ಮೆ ಈಕೆಯ ಲಗ್ನ ಮಾಡಿ ಬಿಟ್ಟೆನೆಂದರೆ ನಾನು ದೊಡ್ಡ ಚಿಂತೆಯಿಂದ ಮುಕ್ತನಾಗುವೆನು. ಭೀಮು ರಾವ ಮತ್ತು ಬಾಪೂರಾವ ! ನನ್ನ ನಿಶ್ಚಯವು ನಿಮಗೆ ತಿಳಿದೇ ಇರುತ್ತದೆ.

ಹಿರಿಯಳ ಲಗ್ನಮಾಡದೆ ಚಿಕ್ಕವಳ ಲಗ್ನದ ಉಸಾಬರಿಗೆ ನಾನು ಬೀಳುವದಿಲ್ಲ. ಚಿಕ್ಕವಳಿಗೆ ನಾನು ಇನ್ನೂ ಯಾವನಾದರೊಬ್ಬ ವಿದ್ವಾಂಸನಿಂದ ಪುರಾಣೇತಿಹಾಸಗಳನ್ನು ಅಭ್ಯಾಸ ಮಾಡಿಸತಕ್ಕವನಿದ್ದೇನೆ. ಇದಲ್ಲದೆ ಅವಳಿಗೆ ಕಿಂಚಿತ್ತು ಗಾಯನದ ಅಭ್ಯಾಸವನ್ನು ಸಹ ಮಾಡಿಸಬೇಕೆಂದು ನನ್ನ ಯೋಚನೆಯುಂಟು. ನಿಮ್ಮ ಪರಿಚಯವುಳ್ಳಂಥ ಉತ್ತಮ ಪುರಾಣಿಕನು ಮತ್ತು ಗಾಯಕನು ಯಾರಾದರೂ ಇದ್ದರೆ ಅವರನ್ನು ನನ್ನ ಕಡೆಗೆ ಕರೆದುಕೊಂಡು ಬನ್ನಿರಿ. ಅವರಿಗೆ ನಾನು ಯೋಗ್ಯ ಮರ್ಯಾದೆಯನ್ನು ಮಾಡುವೆನು. ಒಳ್ಳೇದು. ನಾನು ಇನ್ನು ಬರುತ್ತೇನೆ. ನಮಸ್ಕಾರ. ( **ಒಳಗೆ ಹೋಗುತ್ತಾನೆ.** )

**ಬಾಪೂರಾವ**—ಜಗತ್ತಿನ ನ್ಯಾಯವು ಹೇಗದೆ ? ಹಿರಿಯಳ ಅಪರಾಧದ ಗೋಸ್ಕರ ಚಿಕ್ಕವಳು ಶಿಕ್ಷೆಯನ್ನು ಅನುಭೋಗಿಸಬೇಕಾಗಿರುವದು ! ಹಿರಿಯಳು ಅವಿನಯದಿಂದ ಮಾತಾಡುತ್ತಿರುವ ಕಾರಣ ಚಿಕ್ಕವಳು ಮೌನದಿಂದಿರಬೇಕೆಂತಲೂ, ಹಿರಿಯಳು ಅಮರ್ಯಾದೆಯಿಂದ ನಡೆಯುವ ಕಾರಣ ಚಿಕ್ಕವಳು ಪ್ರತಿಬಂಧನದಲ್ಲಿರಬೇಕೆಂತಲೂ ಇವರ ತಂದೆಯು ವಿಧಿಸಿದ್ದಾನೆ! ಎಷ್ಟು ಅಪ್ರತಿಮ ನ್ಯಾಯವಿದು?

**ಭೀಮರಾವ**— ಹೋಗಲಿ ಬಿಡು. ಆ ವಿಷಯವೇ ನಮಗೆ ಬೇಡ. ನಮ್ಮ ಉದ್ದೇಶವು ಸಾಧಿಸುವದಿಲ್ಲೆಂಬದು ಈಗ ಸ್ಪಷ್ಟವಾದಂತಾಯಿತು.

**ಬಾಪೂರಾವ**— ಹಾಗಾದಾಗ್ಯೂ ನಮಗೆ ಎಳ್ಳಷ್ಟು ಸಹ ಖೇದವಾಗಲಿಕ್ಕೆ ಕಾರಣವಿಲ್ಲ. ನಮಗೆ ನಿರಾಶೆಯಾದ ಮಾತ್ರದಿಂದ ಆಕಾಶದ ಕಡೆಗೆ ನೋಡುತ್ತ ಕಣ್ಣಿಂದಲೇ ಜೀವ ಬಿಡುವಷ್ಟು ನಾವು ಪ್ರೇಮಪಾಶದಲ್ಲಿ ಸಿಕ್ಕಿಲ್ಲ. ಪ್ರಯತ್ನಮಾಡಿ ನೋಡೋಣ. ಸಾಧಿಸಿದರೆ ಸಾಧಿಸಲಿ. ಇಲ್ಲದಿದ್ದರೆ (**ಮಾಶೆಯ ಮೇಲೆ ಕೈ ಹಾಕಿ** ) ಈ ಬಾಹದ್ದುರ ಬಾಪೂರಾಯನಿಗೆ ವಧುಗಳೇನು ಕಡಿಮೆ ಇರುತ್ತವೆ ? ಸಾವಿರಾರು ಸುಂದರ ಹುಡಿಗೆಯರು ತಮ್ಮನ್ನು ನಾನು ವರಿಸಬೇಕೆಂದು ಹಗಲಿರಳು ದೇವರಿಗೆ ಹರಿಕೆಯನ್ನು ಬೇಡಿಕೊಳ್ಳುತ್ತಿದ್ದಾರೆ. ಶ್ರಮನಾಡಿ ಈ ಶರೀರಕ್ಕೆ ಇಷ್ಟೊಂದು ಬಲವನ್ನೂ ತೇಜಸ್ಸನ್ನೂ ಉಂಟುಮಾಡಿದ್ದು ಎಂದಿಗೆ ವ್ಯರ್ಥವಾದೀತು ?

**ಭೀಮರಾವ** – ವ್ಹಾಃ ಬಾಪೂರಾವ, ಬಹಳ ಉತ್ತಮವು! ಆದರೆ ನೀನು ಅಷ್ಟು ಶಕ್ತಿವಂತನಿದ್ದರೆ ಆ ಜೇಷ್ಠ ಕನ್ಯಾಮಣಿಯನ್ನೇ ಏಕೆ ಮದುವೆ ಮಾಡಿಕೊಳ್ಳುವದಿಲ್ಲ ?

**ಬಾಪೂರಾವ**— ಛೇ, ಛೇ ! ಅವಳ ಹೆಸರು ಸಹಿತ ನನ್ನ ಮುಂದೆ ತೆಗೆಯಬೇಡ.

**ಭೀಮರಾವ**—ಬಾಪೂರಾವ ! ಸದ್ಯಕ್ಕಂತೂ ನಿನ್ನ ಹಂಬಲವು ಮುಗಿದಂತಾಯಿತು. ಇನ್ನಾದರೂ ಇಬ್ಬರೂ ಕೂಡಿ ಒಂದೇ ಮನಸ್ಸಿನಿಂದ ಮಾತಾಡೋಣ ಬಾ.

**ಬಾಪೂರಾವ**— ಒಳ್ಳೇದು, ಯಾವ ಸಂಗತಿಯನ್ನು ಕುರಿತು ನಾವಿಬ್ಬರೂ ಮಾತಾಡತಕ್ಕದ್ದು ?

**ಭೀಮರಾವ**— ಯಾವವೆಂದರೆ ? ಆ ತ್ರಾಟಿಕೆಗೆ ಯೋಗ್ಯ ಪತಿಯನ್ನು ಶೋಧಿಸುವದು ! ಹೇಗದೆ ನನ್ನ ಯುಕ್ತಿ ?

**ಬಾಪೂರಾವ** — ಯುಕ್ತಿಯು ಬಾಯಿಂದ ಹೇಳಲಿಕ್ಕೆ ನೆಟ್ಟಗಿದೆ. ಆದರೆ ಅದು ಸಾಧಿಸುವದು ಅಸಾಧ್ಯವದೆ. ಯಾಕಂದರೆ ತ್ರಾಟಿಕೆಯನ್ನು ಲಗ್ನ ಮಾಡಿಕೊಳ್ಳಲಿಕ್ಕೆ ಮನುಷ್ಯರಂತೂ ಯಾರೂ ಒಡಂಬಡಲಿಕ್ಕಿಲ್ಲ. ಒಂದು ವೇಳೆ ಯಾವನಾದರೂ ಬ್ರಹ್ಮರಾಕ್ಷಸನು ಒಡಂಬಟ್ಟರೆ ಒಡಂಬಡಬಹುದು.

**ಭೀಮರಾವ**— ತ್ರಾಟಿಕೆಗೆ ಯೋಗ್ಯ ವರನು ಮನುಷ್ಯ ಕೋಟಿಯಲ್ಲಿ ಸಿಗುವದು ಅಸಂಭವವೆಂದು ನನಗಂತೂ ಕಾಣುವದಿಲ್ಲ. ಸ್ತ್ರೀ ಜಾತಿಯಲ್ಲಿ ಇಂಥ ಭಯಂಕರ ಸ್ತ್ರೀಯು ಹುಟ್ಟಿರುವಂತೆ ಪುರುಷ ಜಾತಿಯಲ್ಲಿ ಆಕೆಗೆ ತಕ್ಕಂಥ ಭಯಂಕರ ಪುರುಷನು ಏಕೆ ಹುಟ್ಟಿರಬಾರದು? “**ಬಹುರತ್ನಾ ವಸುಂಧರಾ**” ಎಂಬಂತೆ ಈ ಜಗತ್ತಿನಲ್ಲಿ ನಾನಾತರದ ಅಮೌಲ್ಯ ರತ್ನಗಳು ಸಿಕ್ಕುತ್ತವೆ.

**ಬಾಪೂರಾವ**— ಭೀಮರಾವ ! ಆಕೆಯ ತಂದೆಯು ಶ್ರೀಮಂತನಿದ್ದು ಅವರ ಹೊಟ್ಟೆಯಿಂದ ಪುತ್ರ ಸಂತಾನವು ಇಲ್ಲ. ಆದುದರಿಂದ ಆಕೆಯನ್ನು ಲಗ್ನ ಮಾಡಿಕೊಳ್ಳುವವರಿಗೆ ಆತನ ಆಸ್ತಿಯ ಕೆಲವು ಭಾಗವು ದೊರಕುವ ಸಂಭವವಿರುತ್ತದೆ. ಒಂದು ವೇಳೆ ಇದೇ ಆಶೆಯಿಂದ ಯಾರಾದರೂ ಧೈರ್ಯಮಾಡಿ ಲಗ್ನ ಮಾಡಿಕೊಂಡರೆ ಮಾಡಿಕೊಳ್ಳಬಹುದು. ನನಗಂತೂ ಆಕೆಯು ನೆನಪಾದ ಕೂಡಲೆ ಮೈಮೇಲೆ ಮುಳ್ಳು ಏಳುತ್ತವೆ. ಇದರ ಮೇಲಿಂದ ನಾನು ಅವಳಿಗೆ ಅಂಜುತ್ತೇನೆಂದು ಮಾತ್ರ ತಿಳಿಯಬೇಡ. ಈ ಬಹಾದ್ದುರನು ಅವಳಿಗೇನೂ ಸೊಪ್ಪು

ಹಾಕುವದಿಲ್ಲ. ಆದರೆ ನನಗೆ ಇಂಥ ಹೆಂಡತಿಯು ಬೇಡೆಂಬುವದೇ ನನ್ನ ತಾತ್ಪ,ರ್ಯವು.

**ಭೀಮರಾವ**—ನಾನಾದರೂ ಅದನ್ನೇ ಅನ್ನುತ್ತೇನೆ. ಆಕೆಯ ಬಾಯಂತೂ ಕೇವಲ "ಮುಲುಖುಸ್ಮೈದಾನದ ತೋಫು" ಎಂದೆನ್ನಲಿಕ್ಕೆ ಅಡ್ಡಿಯಿಲ್ಲ. ಅವಳ ಮಾತಿನ ಮುಂದೆ ಯಾರದೂ ನಡೆಯುವದಿಲ್ಲ. ಆಕೆಯು ಮಾತಾಡುತ್ತ ಮಾತಾಡುತ್ತ ಘನವಂತನಾದ ನಿನಗೆ ಗರ್ದಭನೆಂದಳು. ಇದು ನಿನ್ನ ನೆನಪಿನಲ್ಲುಂಟೋ? ಆದರೂ ಅವಳ ತಂದೆಯ ಆಸ್ತಿಯು ಸಿಗುವದೆಂಬ ಆಶೆಯಿಂದ ಇಂಥ ಗುದ್ದಿಯನ್ನು ಕೊರಳೊಳಗೆ ಕಟ್ಟಿಕೊಳ್ಳಲು ಸಿದ್ಧನಾಗುವಂಥ ಯಾವನಾದರೂ ಅದ್ವಿತೀಯ ಮನುಷ್ಯನು ಜಗತ್ತಿನಲ್ಲಿ ಸಿಗಬಹುದು!

**ಬಾಪೂರಾವ**—ಬೇಕಾದವರು ಧೈರ್ಯ ಮಾಡಿಕೊಳ್ಳಲಿ. ನನಗಂತೂ ಸರ್ವಥಾ ಈ ಪ್ರಾಣಿಯು ಬೇಡ. ನನ್ನಕಿಂತಲು ಹತ್ತುಪಾಲು ಕಸವು ಇದ್ದವರ ಕೂಡ ಕುಸ್ತಿ ಹಿಡಿಯುವದನ್ನು ಸಂತೋಷದಿಂದ ಒಪ್ಪಿಕೊಂಡೇನು. ಆದರೆ ಈ ದೆವ್ವಿನ ಕೂಡ ನನ್ನ ಸಂಬಂಧವು ಎಂದೆಂದಿಗೂ ಬೇಡ.

**ಭೀಮರಾವ**—ನಡೆ. ಹಾಗಾದರೆ ಇನ್ನು ಮೇಲೆ ಅದೇ ಉದ್ಯೋಗಕ್ಕೆ ಹತ್ತೋಣ. ಈ ದೆವ್ವಿಗೆ ಚತುರ್ಭುಜ ಮಾಡಿದ ನಂತರ ನಮ್ಮ ಕೆಲಸವು ನಿರಾಯಾಸದಿಂದ ಆಗುವದು.

**ಬಾಪೂರಾವ**—ಹೋಗೋಣ. ಇನ್ನು ನಾನು ವ್ಯಾಯಾಮ ಮಾಡುವ ಹೊತ್ತಾಯಿತು. ಬೆಳಿಗ್ಗೆ ಮತ್ತು ಸಾಯಂಕಾಲಕ್ಕೆ ಶ್ರಮ ಮಾಡುವದರಿಂದಲೇ ಈ ಪ್ರಕಾರದ (**ತನ್ನ ಮೈ ತೋರಿಸಿ**) ಮೈಕಟ್ಟು ಆಗುತ್ತದೆ! ತಿಳಿಯಿತೇ? ನಡೆ, ನಿನಗೂ ಒಂದೆರಡು ಸಾಧಕಗಳನ್ನು ಕಲಿಸುತ್ತೇನೆ. (**ಇಬ್ಬರೂ ಹೋಗುತ್ತಾರೆ.**)

**ವೆಂಕಣ್ಣನಾಯಕ**— ರಂಗರಾವ! ಏನಿದು? ಬರೀ ಕಣ್ಣಿನಿಂದ ನೋಡಿದ ಮಾತ್ರದಿಂದ ಇಷ್ಟು ಭ್ರಾಂತಿಷ್ಟರಾದಿರಿ?

**ರಂಗರಾವ**— ಗಾಯ ಹೊಂದದಿರುವವನಿಗೆ ಗಾಯದ ನೋವು ಹೇಗೆ ಗೊತ್ತಾದೀತು? ನನಗೆ ಇಷ್ಟು ದಿವಸ ಸ್ತ್ರೀಯರ ವ್ಯಾಮೋಹವೂ ಮದನನ ತಾಪವೂ ಮಿಥ್ಯವೆಂದು ಕಾಣುತ್ತಿದ್ದವು. ಆದರೆ ಬರೀ ಆ ಸುಂದರಾಂಗಿಯ

ನೇತ್ರಕಟಾಕ್ಷದಿಂದ ನನ್ನ ತತ್ವಜ್ಞಾನವೆಲ್ಲ ಅಡವೀಪಾಲಾಯಿತು. ಅವಳ ವರ್ಣನವನ್ನು ಕೇಳಿದಾಗಿನಿಂದ ನನ್ನ ಮನಸ್ಸಿನಲ್ಲಿ ಅವಳನ್ನು ಯಾವಾಗ್ಗೆ ನೋಡೇನೆಂಬದಾಗಿ ಆತುರವು ಹುಟ್ಟಿತ್ತು. ಈಗಂತೂ ನಾನು ಅವಳ ದಾಸನಾಗಿ ಹೋಗಿರುತ್ತೇನೆ. ಅವಳನ್ನು ಸಾಧ್ಯ ಮಾಡಿಕೊಳ್ಳದೆ ನಾನು ಮನೆಗೆ ತಿರುಗಿ ಹೋಗಲಾರೆನು.

**ವೆಂಕಣ್ಣನಾಯಕ**—ಅಂತೂ ಮದನನು ನಿಮ್ಮನ್ನು ಪೂರ್ಣವಾಗಿ ಸ್ವಾಧೀನ ಮಾಡಿಕೊಂಡಿರುತ್ತಾನೆ. ಅವನನ್ನು ನಿಷೇಧಿಸಲಿಕ್ಕೆ ನಿಮಗೆ ಅವಕಾಶವೇ ಇಲ್ಲ. ಒಮ್ಮೆ ಹೃದಯದಲ್ಲಿ ಪ್ರೀತಿಯ ಅಂಕುರವು ಸೇರಿತೆಂದರೆ ಅದು ಹೃದಯವನ್ನು ಭೇದಿಸದೆ ಎಂದಿಗೂ ಬಿಡುವದಿಲ್ಲ.

**ರಂಗರಾವ**—ಈ ಎಲ್ಲ ಮೀಮಾಂಸವನ್ನು ಮುಗಿಸು ಹಾಗೂ ಮುಂದಿನ ಉಪಾಯವನ್ನು ನನಗೆ ಬೇಗನೆ ಹೇಳು. ರೋಗಿಯ ಪ್ರಾಣ ಹೋಗುವ ಹೊತ್ತಿಗೆ ವೈದ್ಯನು ವಾಗ್ಭಟವು ಶ್ರೇಷ್ಠವಾದುದೋ ಚರಕವು ಶ್ರೇಷ್ಠವಾದುದೋ ಎಂದು ವಿವಾದ ಮಾಡುವಂತೆ ನಿನ್ನ ಮೀಮಾಂಸವು ನಡೆದಿರುತ್ತದೆ.

**ವೆಂಕಣ್ಣನಾಯಕ**—ನೀವು ಅತ್ತಕಡೆಗೆ ಒಂದೇ ಸವನೆ ನೋಡುತ್ತ ನಿಂತಿದ್ದಿರಿ. ಆದರೆ ಆಕೆಯಲ್ಲಿ ನಿಜವಾದ ಚಮತ್ಕಾರವೇನಿತ್ತೆಂಬುವದನ್ನು ನೀವು ನೋಡಿದಿರಾ ?

**ರಂಗರಾವ**—ಎಲೋ ಬರೀ ನೋಡಿದ್ದೇನಂತಲ್ಲ. ಈ ಹೃದಯದಲ್ಲಿ ಅದನ್ನು ಪೂರ್ಣವಾಗಿ ಕಾಮು ಇಟ್ಟಿದ್ದೇನೆ. ಏನು ಆಕೆಯ ಮೋಹಕ ರೂಪವು! ಅವಳ ಮೋರೆಯ ಮೇಲೆ ವಿನಯ ಮತ್ತು ಸುವಿಚಾರಗಳಂತೂ ಎಷ್ಟು ಸುಂದರವಾಗಿ ರೇಖಿಸಲ್ಪಟ್ಟಿರುತ್ತವೆ ! ಮೇನಿಕಾದಿ ಅಪ್ಸರಾ ಸ್ತ್ರೀಯರ ವರ್ಣನವನ್ನು ಪುರಾಣಗಳಲ್ಲಿ ಮಾಡಿರುತ್ತಾರಷ್ಟೇ. ಆದರೆ ಈ ನನ್ನ ಸುಂದರಾಂಗಿಯಾದ ಕಮಲೆಯ ಸಾಮ್ಯವು ಮೇನಿಕೆಗೆ ಸಹ ಬರಲಾರದೆಂದು ನಾನು ಖಂಡಿತವಾಗಿ ಹೇಳುತ್ತೇನೆ. ತೀರಿತು. ಈ ನನ್ನ ಸ್ವಾತಂತ್ರ್ಯದ ಕಾಲವು ಮುಗಿಯಿತು. ನನ್ನ ಸ್ವಾಮಿನಿಯು ಇನ್ನು ಕಮಲೆಯೇ ಸರಿ. ಅವಳ ಆರಾಧನೆಯ ಹೊರತು ನನಗೆ ಎರಡನೇ ಉದ್ಯೋಗವೇ ಇಲ್ಲ.

**ವೆಂಕಣ್ಣನಾಯಕ**—ಆ ಚಮತ್ಕಾರದ ಕಡೆಗೆ ನಿಮ್ಮ ಲಕ್ಷ್ಯವೇ ಹೋಗಲಿಲ್ಲವೆಂದು ಕಾಣುತ್ತದೆ. ಆಕೆಯು ಮಾತಾಡುವಾಗ ಆಕೆಯ ಕರ್ಕಶ ಧ್ವನಿಯನ್ನೂ ಕರ್ಣಕಠೋರ ಶಬ್ದಗಳನ್ನೂ ಕೇಳಿ ನನ್ನ ಕಿವಿ ಗಡದುಹಾಕಿ ಬಿಟ್ಟಿ ದ್ದವು. ಯಾವಾಗ್ಗೆ ಆ ಸ್ಥಳ ಬಿಟ್ಟು ಬಂದೇನೆಂದು ನನಗೆ ಅನ್ನಿಸಿಹೋಗಿತ್ತು.

**ರಂಗರಾವ**—ವೆಂಕಣ್ಣಾ ! ನೀನು ಮೂರ್ಖನಿರುತ್ತೀ. ಆಕೆಯ ಧ್ವನಿಗೆ ಕರ್ಕಶವೆಂದು ಅನ್ನುತ್ತೀಯಾ ? ಎಲೋ, ಆಕೆಯು ಧ್ವನಿಯು ಕೋಕಿಲೆಯ ಧ್ವನಿ ಯಕಿಂತಲು ಮಂಜುಳವಾಗಿರುವದು. ಅದು ಇನ್ನೂ ನನ್ನ ಕಿವಿಯಲ್ಲಿ ಗುಣ ಗುಣವಾಗಹತ್ತಿರುತ್ತದೆ.

**ವೆಂಕಣ್ಣನಾಯಕ**—ಆಕೆಯು ಧ್ವನಿಗೆ ನೀವು ಇಷ್ಟೊಂದು ಮೋಹಿಸಿ ದ್ದರೆ ನೀವು ಒಮ್ಮೆಲೇ ಹೋಗಿ ಅವಳನ್ನು ಲಗ್ನಮಾಡಿಕೊಳ್ಳುತ್ತೇವೆಂದು ಏಕೆ ಹೇಳಬಾರದು ! ಹಾಗೆ ನೀವು ಮಾಡಿದಲ್ಲಿ ಅವಳ ಸಹೋದರಿಯ ಮೇಲೆ ಮೋಹಿ ತರಾಗಿರುವ ಆ ಇಬ್ಬರು ಗೃಹಸ್ಥರ ದಾರಿಯನ್ನಾದರೂ ಬೈಲು ಮಾಡಿಕೊಟ್ಟ ಪುಣ್ಯವು ನಿಮಗೆ ಬರುವದು.

**ರಂಗರಾವ**—ನಾನು ಹೋಗಿ ಹೇಳೇನು. ಆದರೆ ನನ್ನ ಮಾತಿಗೆ ಅವಳು ಒಡಂಬಡುವಳೇನು ?

**ವೆಂಕಣ್ಣನಾಯಕ**—ಅವಳ ತಂದೆಯು ನಿಮ್ಮ ಕೈಕಾಲು ಬಿದ್ದು ಅವ ಳನ್ನು ನಿಮಗೆ ಲಗ್ನ ಮಾಡಿಕೊಡುವನು.

**ರಂಗರಾವ**—ಹಾಗಾದರೆ ವಿಲಂಬವೇತಕ್ಕೆ ? ನಡೆ. ಹೋಗಿ ಹೇಳೋಣ.

**ವೆಂಕಣ್ಣನಾಯಕ**—ದೂರತನದ ವಿಚಾರ ಮಾಡಿ ನೋಡಿರಿ. ಆಕೆಯು ಸ್ವಭಾವವು ನಿಮಗೆ ಮನಸ್ಸಿಗೆ ಬರುತ್ತದೇನು ? ಅದರಲ್ಲಿ ನನ್ನದೇನೂ ಹೋಗ ತಕ್ಕದ್ದಿಲ್ಲ.

**ರಂಗರಾವ**—ಎಲೋ ವಿಚಾರ ಮಾಡುವದೇನದೆ! ಅವಳ ಆ ಮನೋಹರ ಮೂರ್ತಿಯು ನನ್ನ ಅಂತಃಕರಣದಲ್ಲಿ ಎಷ್ಟು ಬಿಂಬಿಸಿರುತ್ತದೆಂದು ಹೇಳಲಿ! ಅವಳ ಹೊರತು ನನಗೆ ಏನೂ ಕಾಣಿಸುವದಿಲ್ಲ. ಅವಳ ಮುದ್ರೆಯು ಎಷ್ಟು ಸಭ್ಯ ಮತ್ತು ಸೌಮ್ಯವಾದುದು! ಅವಳ ಗುಣವು ಎಷ್ಟು ವಿನಯಪೂರ್ಣವಾದುದು! ಅವಳ ಭಾಷ

ಣವು ಎಷ್ಟು ಮಧುರವಾದುದು ! ಮತ್ತು ಮಿತಿಯುಳ್ಳದು ! ಅಹಹ! ವೆಂಕಣ್ಣಾ ! ನನ್ನಿಂದಂತೂ ಒಂದು ಕ್ಷಣ ಸಹ ಅವಳನ್ನಗಲಿ ಇರುವದಾಗದು.

**ವೆಂಕಣ್ಣನಾಯಕ**—ರಂಗರಾವ, ನೀವು ಎಚ್ಚರಿಕೆಯಿಂದಿರುತ್ತೀರಷ್ಟೇ? ಇದೇನು ಆ ತ್ರಾಟಿಕೆಯ ವರ್ಣನವೋ ? ನೀವು ಅಲ್ಲಿ ಇದೇ ಚಮತ್ಕಾರವನ್ನು ನೋಡಿದಿರಾ ? ಹಾಗಾದರೆ ನಿಮಗೆ ದೂರಿಂದಲೇ ನಮಸ್ಕಾರ. ನಾನು ಈಗಲೇ ನಿಮ್ಮ ತೀರ್ಥರೂಪರ ಬಳಿಗೆ ಹೋಗಿ– "ನಿಮ್ಮ ಚಿರಂಜೀವರು ಹುಚ್ಚರಾದರು. ನನ್ನಿಂದಂತೂ ಅವರನ್ನು ಮಾರ್ಗಕ್ಕೆ ತರುವದು ಅಶಕ್ಯವಿರುತ್ತದೆ. ಬೇರೆ ಯಾರನ್ನಾದರೂ ಅವರ ಸಮಾಚಾರಕ್ಕೆ ಕಳುಹಿಸರಿ" ಎಂದು ತಿಳಿಸುತ್ತೇನೆ.

**ರಂಗರಾವ**— ವೆಂಕಣ್ಣಾ, ನೀನು ನನ್ನನ್ನು ಹುಚ್ಚನೆಂದು ತಿಳಿದುಕೊಂಡಿಯಾ? ನಾನು ಹುಚ್ಚನಾಗಿರುವದು ನಿಜವು. ಆದರೆ ಆ ತ್ರಾಟಿಕೆಯ ಗೋಸ್ಕರವಲ್ಲ; ಕಮಲೆಯಗೋಸ್ಕರ.

**ವೆಂಕಣ್ಣನಾಯಕ**—ಹಾಗಾದರೆ ಆಕೆಯನ್ನು ಸಾಧ್ಯಮಾಡಿಕೊಳ್ಳುವ ಯತ್ನಕ್ಕೆ ಆರಂಭಿಸೋಣ !

**ರಂಗರಾವ**—ನನ್ನ ಮನಸ್ಸಿನಲ್ಲೂ ಅದೇ ಇರುತ್ತದೆ. ಆದರೆ ವೆಂಕಣ್ಣಾ, ಆಕೆಗೆ ಪುರಾಣ ಹೇಳಲಿಕ್ಕೆ ಆಕೆಯ ತಂದೆಯು ಒಬ್ಬ ಪುರಾಣಿಕನನ್ನು ಇಡತಕ್ಕವನಿದ್ದಾನಷ್ಟೇ ?

**ವೆಂಕಣ್ಣನಾಯಕ**—ಹೌದೌದು. ಆದರೆ ಅದರ ವಿಚಾರವು ನಿಮಗೇತಕ್ಕೆ ? (ಧ್ಯಾನಿಸಿದಂತೆ ಮಾಡಿ) ಹ ! ನನ್ನ ಲಕ್ಷ್ಯಕ್ಕೆ ಬಂದಿತು. ಒಳ್ಳೇ ಹಂಚಿಕೆಯನ್ನು ತೆಗೆದಿರಿ !

**ರಂಗರಾವ**—ಅದೇನು ?

**ವೆಂಕಣ್ಣನಾಯಕ**— ಎರಡನೇದ್ದೇನು ? ಪುರಾಣಿಕನನ್ನು ಹುಡುಕಲಿಕ್ಕೆ ಎರಡನೇ ಕಡೆಗೆ ಹೋಗುವ ಕಾರಣವಿಲ್ಲ.

**ರಂಗರಾವ**—ನೀನು ಕೊರವಂಜಿಯಂತೆ ಎರಡನೇಯವರ ಮನಸ್ಸಿನೊಳಗಿನ ಆಲೋಚನೆಯನ್ನು ಚೆನ್ನಾಗಿ ಹೇಳುತ್ತೀ ! ಶಹಬಾಸ ! ಶಹಬಾಸ ! ಆದರೆ ಅದರಿಂದ ನನ್ನ ಕೆಲಸವು ಸಾಧಿಸೀತೇನು ?

**ವೆಂಕಣ್ಣನಾಯಕ**— ಹೇಗೆ ಸಾಧಿಸಬೇಕು ? ನೀವು ಪುರಾಣಿಕರಾಗಿ ಅವಳ ಮನಸ್ಸನ್ನು ಒಲಿಸಲಿಕ್ಕೆ ಪ್ರಯತ್ನ ಮಾಡುವಷ್ಟರಲ್ಲಿ ಅವಳ ತಂದೆಯು ಅವಳನ್ನು ಈಗ ಬೇಡಲಿಕ್ಕೆ ಬಂದವರಲ್ಲೊಬ್ಬನಿಗೆ ಲಗ್ನ ಮಾಡಿಕೊಟ್ಟರೆ ನೀವು ಮಾಡುವದೇನು ?

**ರಂಗರಾವ**— ಅದನ್ನೆಲ್ಲ ನಾನು ನೋಡಿಕೊಳ್ಳುತ್ತೇನೆ. ಅದರ ಬಗ್ಗೆ ನೀನು ಚಿಂತೆ ಮಾಡುವ ಕಾರಣವಿಲ್ಲ. ಆದರೆ ನನ್ನ ಕೆಲಸಕ್ಕೆ ನಿನ್ನ ಸಹಾಯವು ಮಾತ್ರ ಅವಶ್ಯವಾಗಿ ಬೇಕು. ಯಾಕಂದರೆ ಆ ಮುದುಕನಂತೂ ಹಿರಿಯಳ ಲಗ್ನ ಮಾಡಿಕೊಡದೆ ಚಿಕ್ಕವಳ ಲಗ್ನ ಮಾಡಿಕೊಡುವದಿಲ್ಲೆಂದು ಹಟ ಹಿಡಿದಿರುತ್ತಾನೆ. ಹಿರಿಯಳನ್ನು ಲಗ್ನ ಮಾಡಿಕೊಳ್ಳಲಿಕ್ಕೆ ಇಷ್ಟರಲ್ಲಿ ಯಾರಾದರೂ ಒಡಂಬಟ್ಟಾರೆಂದು ನನಗಂತೂ ತೋರುವದಿಲ್ಲ. ಈ ಊರಲ್ಲಿ ನಮ್ಮ ತಂದೆಯನ್ನೂ, ನಮ್ಮ ಮನೆತನವನ್ನೂ ಬಲ್ಲವರು ಅನೇಕರುಂಟು. ಆದರೆ ನನ್ನನ್ನು ಪ್ರತ್ಯಕ್ಷವಾಗಿ ಯಾರೂ ನೋಡಿಲ್ಲ. ಆದುದರಿಂದ ನೀನೇ ನನ್ನ ಬದಲಾಗಿ ಆಕೆಯ ತಂದೆಯ ಕಡೆಗೆ ಹೋಗಿ ನನ್ನ ಹೆಸರು ಹೇಳಿ ಆಕೆಯನ್ನು ಲಗ್ನಮಾಡಿಕೊಡಲಿಕ್ಕೆ ಕೇಳು. ಇತ್ತ ನಾನು ಪುರಾಣಿಕನ ವೇಷದಿಂದ ಆಕೆಯ ಅಂತಃಪುರವನ್ನು ಪ್ರವೇಶಮಾಡಿ ಆಕೆಯ ಮನಸ್ಸನ್ನು ಒಲಿಸಲಿಕ್ಕೆ ಪ್ರಯತ್ನಮಾಡುವೆನು. ಈ ಪ್ರಕಾರ ಒಳಗೂ ಹೊರಗೂ ನಾವಿಬ್ಬರೂ ಕೂಡಿ ಮದ್ದಿನ ಗುಂಡುಗಳನ್ನು ಪ್ರಯೋಗಮಾಡಿದ ತರುವಾಯ ಕೋಟೆಯು ಹಸ್ತಗತವಾಗದೆ ಹೇಗೆ ಉಳಿಯುವದೋ ನೋಡೋಣ. ಆದುದರಿಂದ ನನ್ನ ವಸ್ತ್ರಗಳನ್ನು ನೀನು ತೆಗೆದುಕೋ. ನಿನ್ನ ವಸ್ತ್ರಗಳನ್ನು ನನಗೆ ಕೊಡು. ಹೂ ಅನ್ನು. ಅನುಮಾನ ಮಾಡಬೇಡ.

**ವೆಂಕಣ್ಣನಾಯಕ**—ರಾಯರೇ, ಸ್ವಲ್ಪ ಸಮಾಧಾನ ಮಾಡಿರಿ. ನನಗೆ ಒಂದು ಎಳ್ಳಷ್ಟು ಸಹ ಸುಳ್ಳು ಸೇರುವದಿಲ್ಲ. ಆದುದರಿಂದ ನೀವು ಹೇಳುವ ಪ್ರಕಾರ ವೇಷಾಂತರಮಾಡುವದರಿಂದ ಮೋಸಗಾರಿಕೆಯು ಆಗುವದಿಲ್ಲೆಂದು ನಾನು ಮೊದಲಿಗೆ ನನ್ನ ಮನವರಿಕೆ ಮಾಡಿಕೊಳ್ಳುತ್ತೇನೆ. ನಾವಿಬ್ಬರೂ ಪ್ರವಾಸಕ್ಕೆ ಹೊರಟಾಗ್ಗೆ ನಿಮ್ಮ ತಂದೆಯು ನನಗೆ– "ವೆಂಕಟೇಶಾ, ನೀನು ವ್ಯವಹಾರಚತುರನೂ ಅನುಭವಿಕನೂ ಇರುತ್ತೀ. ನೀನು ರಂಗರಾಯನನ್ನು ಚೆನ್ನಾಗಿ ಕಾಯಿ. ಅವನಿಗೆ ಯಾವ ದುರ್ವ್ಯಸನಕ್ಕೂ ಹಚ್ಚಿಗೊಡಬೇಡ. ಹಾಗೂ ಅವನಿಗೆ ಯಾತರಿಂದಲೂ

ಕೊರತೆಯಾಗಗೊಡಬೇಡ" ಎಂದು ಕೇಳಿರುತ್ತಾನೆ. ಆದುದರಿಂದ ನಾನು ಈ ಬಗ್ಗೆ ಚೆನ್ನಾಗಿ ವಿಚಾರಮಾಡಬೇಕಾಗಿದೆ.

**ರಂಗರಾವ** – ( ಬೇಸರಿಕೆಯಿಂದ ) ವೆಂಕಣ್ಣನಾಯಕಾ, ನೀನು ಎಷ್ಟು ಅನುಮಾನಮಾಡುತ್ತೀ ? ನಿನ್ನಂಥ ವಿಕ್ಷಿಪ್ತನನ್ನು ನಾನೆಲ್ಲಿಯೂ ಕಾಣಲಿಲ್ಲ.

**ವೆಂಕಣ್ಣನಾಯಕ**—(ತನ್ನಷ್ಟಕ್ಕೆ) ಗಂಡಸರು ತಮಗೆ ಯೋಗ್ಯ ಸತಿಯರನ್ನು ಹುಡುಕಿಕೊಳ್ಳುವದು ಕೆಟ್ಟ ವ್ಯಸನವೇ? ಅಲ್ಲ. ಅಂದಮೇಲೆ ನಾನು ಈ ಕೆಲಸದಲ್ಲಿ ಸಹಾಯಮಾಡಲಿಕ್ಕೆ ಅಡ್ಡಿಯೇನಿದೆ ? ಏನೂ ಇಲ್ಲ. " ( ಬಹಿರಂಗವಾಗಿ ) ತೀರಿತು. ನಿಮ್ಮ ಮಾತಿಗೆ ನನ್ನ ಪೂರ್ಣ ಅನುಮತಿಯುಂಟು. ನಿಮ್ಮ ವಸ್ತ್ರಗಳನ್ನು ನನಗೆ ಬೇಗನೆ ತೆಗೆದು ಕೊಡಿರಿ. ನನ್ನ ವಸ್ತ್ರಗಳನ್ನು ನಿಮಗೆ ಕೊಡುತ್ತೇನೆ. ಆಹಹ! ಇನ್ನು ಸ್ವಲ್ಪ ಹೊತ್ತಿನಲ್ಲಿ ಈ ರಂಗರಾಯನ ಶೃಂಗಾರವು ಎಷ್ಟಾಗುವದು ! ರಾಯರೇ, ಸಭ್ಯಗೃಹಸ್ಥರು ಹೇಗೆ ನಡೆಯಬೇಕು ಮತ್ತು ಹೇಗೆ ಶೃಂಗಾರವಾಗಬೇಕು ಎಂಬುವನ್ನು ನನ್ನಿಂದ ಕಲಿತುಕೊಳ್ಳುವ ಪ್ರಸಂಗವು ನಿಮಗೆ ಬೇಗನೆ ಒದಗುವದು ಬಲ್ಲಿರಾ !

**ರಂಗರಾವ**— ಎಲೋ, ನಾನು ಪುರಾಣಿಕನ ವೇಷವನ್ನು ಧರಿಸಿ ಅವಳ ಮನಸ್ಸನ್ನು ಒಲಿಸಲಿಕ್ಕೆ ಪ್ರಯತ್ನ ಮಾಡುವ ಉದ್ದೇಶವು ನಿನಗೆ ತಿಳಿದಿರಲಿಕ್ಕಿಲ್ಲ. ಅಂಥಾ ಸ್ಥಿತಿಯಲ್ಲಿ ನನಗೆ ಅವಳ ನಿಜವಾದ ಸ್ವಭಾವವನ್ನೂ, ರೀತಿ ನಡತೆಗಳನ್ನೂ ಚೆನ್ನಾಗಿ ನೋಡಿಕೊಳ್ಳಲಿಕ್ಕೆ ಅನುಕೂಲವಾಗುವದು. ಬೇಗ ನಡೆ, ಅತ್ತಕಡೆಗೆ ಹೋಗಿ ನಮ್ಮ ನಮ್ಮ ವೇಷಗಳನ್ನು ಬದಲಿಸೋಣ. ( ಒಳಗೆ ಹೋಗುತ್ತಾನೆ )

( ರಂಗರಾಯನ ಸೇವಕನಾದ 'ತಮ್ಮ'ನು ಬರುತ್ತಾನೆ. )

**ತಮ್ಮ**— ನಾನು ನನ್ನ ಕೆಲಸದ ಮೇಲೆ ಹೋಗಿ ಬಹಳ ಹೊತ್ತು ಆಯಿತೆಂದು ನನ್ನ ಒಡೆಯನು ಸಿಟ್ಟಿಗೆದ್ದಿರಬಹುದು. ನಾನು ಎಲೆ ತಂಬಾಕು ಕೊಂಡು ತರುವದಕ್ಕಾಗಿ ಪೇಟೆಗೆ ಹೋಗಿ ನನ್ನ ಬೇಸರಿಕೆಯನ್ನು ಕಳೆದುಕೊಳ್ಳುವದಕ್ಕೋಸ್ಕರ ಎಲೆ ತಂಬಾಕದ ಅಂಗಡಿಯಲ್ಲಿ ತುಸು ಹೊತ್ತು ಮಾತಾಡುತ್ತ ಕುಳಿತುಕೊಂಡಿದ್ದೆನು. ಇದರಿಂದ ನನಗೆ ಹೊತ್ತು ಗೊತ್ತಾಗಲಿಲ್ಲ. ಅಂತೇ ನನಗೆ ಬರಲಿಕ್ಕೆ ತಡವಾಯಿತು. ಇದಕ್ಕಾಗಿ ನನ್ನ ಒಡೆಯನು ನನಗೆ ಏನು

ಮಾಡುವನೋ ತಿಳಿಯದು. ( ಮಗ್ಗಲಿಗೆ ನೋಡಿ ) ಓಹೋ ! ನನ್ನ ಒಡೆಯನು ಇಲ್ಲಿಯೇ ಬಂದು ಬಿಟ್ಟನು. ( ರಂಗರಾಯನೂ ವೆಂಕಣ್ಣನಾಯಕನೂ ವೇಷಾಂತರ ಮಾಡಿಕೊಂಡು ಬರುತ್ತಾರೆ. )

**ರಂಗರಾವ**— ಏ ಲಂಬಕರ್ಣ ತಮ್ಮಾ, ಇಷ್ಟೊತ್ತಿನತನಕ ಎಲ್ಲಿದ್ದಿಯೋ?

**ತಮ್ಮಾ** - ಒಡೆಯರೇ, (ಇಬ್ಬರ ಕಡೆಗೂ ಮಿಕಿ ಮಿಕಿ ನೋಡಿ) ನನ್ನ ಒಡೆಯನು ಯಾವನಪ್ಪಾ ? ಇವನೋ ಅವನೋ ? ಇದೇನು ಕಣ್ಣುಕಟ್ಟು ಆಯಿತಪ್ಪಾ! ನನ್ನ ಬುದ್ಧಿಯೇ ಹೋಯಿತು! ನನ್ನ ಒಡೆಯನ ಗುರುತು ಸಹ ನನಗೆ ಹತ್ತಲೊಲ್ಲದು! ( ವೆಂಕಣ್ಣನಾಯಕನ ಕಡೆಗೆ ನೋಡಿ) ಇವನು ವೆಂಕಣ್ಣ ಹಿರಿಯನು! (ರಂಗರಾಯನ ಕಡೆಗೆ ನೋಡಿ) ಸ್ವಾಮೀ, ಹೇಗಾದರೂಮಾಡಿ ನನ್ನ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ ! ನಿಮ್ಮ ಅರಿವೆಗಳನ್ನು ವೆಂಕಣ್ಣ ಹಿರಿಯನು ಕದ್ದಿರುತ್ತಾನೋ ? ವೆಂಕಣ್ಣ ಹಿರಿಯನ ಅರಿವೆಗಳನ್ನು ನೀವು ಕದ್ದಿರುತ್ತೀರೋ ? ಇದೇನು ದೆವ್ವಿನ ಆಟವಾಗಿರುತ್ತದಲ್ಲ !

**ರಂಗರಾವ**— ಎಲೋ ಬಾಯಿ ಮುಚ್ಚು. ಇಲ್ಲಿ ಬಾ, ಒದರಿ ಮಾತಾಡಬೇಡ. ಕಳ್ಳಾ! ನೀನು ಇಷ್ಟೊತ್ತು ಎಲ್ಲಿ ಇದ್ದೆ ? ನಾನು ಕೇಳಿದ್ದಕ್ಕೆ ಉತ್ತರ ಕೊಡುವದನ್ನು ತಪ್ಪಿಸಿಕೊಳ್ಳುವದಕ್ಕಾಗಿ ಈ ಪ್ರಕಾರ ಎಡ್ಡು ಮಾಡುತ್ತಿಯಾ ? ಹೇಳು. ನಾನು ಈ ಹೊತ್ತಿನಿಂದ ರಂಗರಾಯನಲ್ಲ. ಈ ವೆಂಕಣ್ಣನಾಯಕನು ನಿನ್ನ ಯಜಮಾನನಾದ ರಂಗರಾಯನೆಂದು ತಿಳಿದುಕೋ. ನೀನು ಇನ್ನು ಮುಂದೆ ನನ್ನಂತೆಯೇ ಅವನಿಗೆ ಯೋಗ್ಯ ಮಾನವನ್ನು ಕೊಡುತ್ತ ಹೋಗು. ಇದಕ್ಕೆ ತಪ್ಪಿದೆಂದರೆ ನೋಡು. ಬಹಳ ಎಚ್ಚರಿಕೆಯಿಂದಿರು. ಇದರ ಕಾರಣವು ನಿನಗೆ ಹಿಂದುಗಡೆ ಗೊತ್ತಾದೀತು.

**ತಮ್ಮಾ**— ನನಗಂತೂ ನಿಮ್ಮ ಕಾರಣವನ್ನು ಕೇಳುವದು ಬೇಡ. ನಾನು ಇನ್ನು ಮುಂದೆ ವೆಂಕಣ್ಣ ಹಿರಿಯನಿಗೆ ನಿಮ್ಮ ಹೆಸರಿನಿಂದ ಕರೆಯಬೇಕಾಯಿತೇ ! ಏನು ದೈವವಪ್ಪಾ ವೆಂಕಣ್ಣ ಹಿರಿಯನದು ! ಒಡೆಯರೇ, ವೆಂಕಣ್ಣ ಹಿರಿಯನು ರಂಗರಾವ ಆದನೇ ? ಅಂದ ಮೇಲೆ ನನ್ನನ್ನು ಏಕೆ ಈ ರೀತಿ ಮಾಡುವದಿಲ್ಲ ? ನಾನೇನು ಅವನಿಗಿಂತ ಕಡಿಮೆ ಚೆಲುವನೇ ? ನನಗೆ ಅವನಂತೆ ಶೃಂಗಾರ ಆಗಲಿಕ್ಕೆ ಬರುವದಿಲ್ಲೇನು ? ನೀವು ನನಗೆ ಅಪ್ಪಣೆಮಾಡಿದರೆ ನಾನು ಈಗಲೇ ಅವನಗಿಂತ

ಹೆಚ್ಚು ಶ್ರಿಂಗಾರವಾದೇನು. ಆ ಪ್ರಕಾರ ಶ್ರಿಂಗಾರವಾಗಲಿಕ್ಕೆ ನಾನು ತಪ್ಪಿದರೆ (ಮೀಸೆಯ ಮೇಲೆ ಕೈಹಾಕಿ) ಈ ನನ್ನ ಮೀಸೆಯನ್ನು ಬೋಳಿಸಿ ಹಾಕೇನು. (ಸ್ವಲ್ಪಹೊತ್ತಿನ ತರುವಾಯ) ಹ. ನನ್ನ ಹಣೇಬರಹಕ್ಕೆ ನನಗೆ ಮೀಸೆಯೂ ಇಲ್ಲ ಇದೂ ನಿಜ. ( ಎಂದು ನಗುತ್ತಾನೆ. )

**ರಂಗರಾವ**—ಸಾಕಿನ್ನು. ಈ ಬಾಷ್ಕಳತನವು.

**ವೆಂಕಣ್ಣನಾಯಕ**—ಎಲಾ ತಮ್ಮಾ! ನಾನು ಇನ್ನು ಮುಂದೆ ರಂಗರಾಯನು. ನಾಲ್ಕು ಮಂದಿಯೊಳಗೆ ನೀನು ನನಗೆ ವೆಂಕಣ್ಣಾ ಎಂದು ಕರೆದರೆ ನಿನಗೆ ಏಟುಗಳು ಚೆನ್ನಾಗಿ ಸಿಕ್ಕಾವು. ಗೊತ್ತಿರಲಿ. ನಾವಿಬ್ಬರೇ ಇದ್ದಾಗ ನಾನು ವೆಂಕಣ್ಣನೇ ಹೌದು. (ರಂಗರಾಯನನ್ನುದ್ದೇಶಿಸಿ) ಆದರೆ ರಂಗರಾಯರೇ, ಒಂದು ಮಾತಿನಗೋಸ್ಕರ ನನಗೆ ಬಹಳ ಸಂಕಟ ಬಂದಿರುತ್ತದೆ. ಅದೇನಂದರೆ, ನಾನು ನಿಮ್ಮ ಹೆಸರು ಹೇಳಿ ನಾನೇ ನೀವೆಂದು ಕಮಲಾಬಾಯಿಯನ್ನು ಲಗ್ನದ ದೆಸೆಯಿಂದ ವಿಚಾರಿಸಬೇಕು. ಆಮೇಲೆ ನೀವು ಅವಳನ್ನು ಲಗ್ನಮಾಡಿಕೊಂಡು ಸುಖವನ್ನು ಅನುಭವಿಸಬೇಕು. ಇದು ಎಷ್ಟು ಆಶ್ಚರ್ಯವು!

**ರಂಗರಾವ**—ಎಲೋ, ಮೊದಲಿಗೆ ಇತ್ತ ಲಕ್ಷ್ಯಕೊಡು. ನನ್ನನ್ನು ಇನ್ನು ಮೇಲೆ ರಂಗರಾವ ಎಂದು ಕರೆಯುತ್ತ ಹೋಗಬೇಡ. ಇನ್ನೂ ಅವಳ ದೆಸೆಯಿಂದ ನಾನೂ ನೀನೂ ಸ್ವಲ್ಪ ಮಾತಾಡುವದದೆ. ಅವನ್ನೆಲ್ಲ ಮನೆಯೊಳಗೆ ಮಾತಾಡೋಣ. ಹೊಟ್ಟೆ ಹಸಿವೆಯಾಗಿರುತ್ತದೆ. ಬೇಗನೆ ಒಳಗೆ ಹೋಗೋಣ ನಡೆ. ( ಇಬ್ಬರೂ ಒಳಗೆ ಹೋಗುತ್ತಾರೆ. )

**ತಮ್ಮಾ**—ಇದೇನೋ ಹಂಚಿಕೆಯು ಬೇರೆ ಕಾಣಿಸುತ್ತದೆ. ( ಒಳಗಿಂದ 'ತಮ್ಮಾ' ಎಂದು ಕೂಗುವ ಧ್ವನಿಯು ಕೇಳಿಸುತ್ತದೆ. ) ಬಂದೆನೆರೆಪ್ಪಾ ಬಂದೆ. ಅದೇನಾದರೂ ಇರಲಿ. ಅವರಿಬ್ಬರೂ ಬೇಕಾದ್ದು ಮಾಡಿಕೊಳ್ಳಲಿ. ಎಷ್ಟಾದರೂ ಅವರು ಒಡೆಯರು. ನಾನು ನನ್ನ ಕೆಲಸವನ್ನು ಮಾಡಿಕೊಂಡು ಸುಮ್ಮನೆ ಇದ್ದರಾಯಿತು. ನನಗೆ ಇಲ್ಲದ ಉಸಾಬರಿ ಏತಕ್ಕೆ ಬೇಕು? (ಒಳಗೆ ಪುನಃ 'ತಮ್ಮಾ' ಎಂದು ಕೂಗುವ ಧ್ವನಿಯು ಕೇಳಿಸುತ್ತದೆ. ) ಬಂದೆನೆರೆಪ್ಪಾ ಬಂದೆ. ನನ್ನ ಒಡೆಯನು ನನಗೆ ಸ್ವಲ್ಪಾದರೂ ವಿರಾಮವನ್ನು ತೆಗೆದುಕೊಳ್ಳುವದಕ್ಕೆ ಕೊಡುವದಿಲ್ಲ. ( ಒಳಗೆ ಹೋಗುತ್ತಾನೆ.)

———

## ೨ನೇ ಪ್ರವೇಶ.

### ಕುಸುಮಪುರ—ಭೀಮರಾಯನ ಮನೆಯ ಮುಂದೆ.

( ಪ್ರತಾಪರಾಯನೂ ನೀಲನೂ ಬರುತ್ತಾರೆ. )

**ಪ್ರತಾಪರಾವ**— ನಾನು ಮೊದಲಿಗೆ ನಿಶ್ಚಯ ಮಾಡಿದಂತೆ ವಿಜಯಪುರ ದಿಂದ ಹೊರಟು ಕುಸುಮಪುರಕ್ಕೆ ಬಂದು ಮುಟ್ಟಿದೆನು. ಇಲ್ಲಿ ನಾನು ಮುಂಚೆ ಭೀಮರಾಯನನ್ನು ಅವಶ್ಯವಾಗಿ ಕಂಡು ಹೋಗತಕ್ಕದ್ದು. ನಾನು ಅವನನ್ನು ಕಾಣದೆ ಅನೇಕ ದಿವಸಗಳು ಆಗಿ ಹೋದವು. ಓಹೋ! ಇದೇ ಅವನ ಮನೆ ಯೆಂದು ತೋರುತ್ತದೆ. ಹೌದು! ಇದರಲ್ಲಿ ಸಂಶಯವಿಲ್ಲ (ನೀಲನಿಗೆ ಉದ್ದೇಶಿಸಿ) ಕತ್ತೇ! ಮುಂದೆಲ್ಲಿ ಹೊರಟೆ! ಹೂ. ಏನು ನೋಡುತ್ತೀ ? ಓಡಿ. ಬಡಿ. ತಡ ಮಾಡಬೇಡ.

**ನೀಲಾ**— ಏನು ಬಡಿಯಲಿ ಒಡೆಯಾ ! ಬಾಯಿಗೆ ಕೈ ಬಡಿಯಲೋ ? ಕೈಗೆ ಬಾಯಿ ಬಡಿಯಲೋ ! ಯಾವನನ್ನಾದರೂ ಬಡಿಯಬೇಕೆಂದರೆ ಇಲ್ಲಿ ನನಗೆ ಯಾವನೂ ಕಾಣಿಸುವದಿಲ್ಲ. ನಿಮಗೆ ಯಾವನಾದರೂ ಬೈದು ಇಲ್ಲವೆ ಬಡಿದು ಓಡಿಹೋದನೋ ?

**ಪ್ರತಾಪರಾವ**—ಕತ್ತೆಯ ಮಗನೇ—

**ನೀಲಾ**—ಒಡೆಯರೇ, ಅದನ್ನು ಮಾತ್ರ ದಯಮಾಡಿ ಅನ್ನಬೇಡಿರಿ. ನನಗೆ ಬೇಕಾದರೆ ನೀವು ಕತ್ತೆಯೆಂದರೆ ತಡೆದುಕೊಂಡೇನು. ನಮ್ಮ ಅಪ್ಪನಿಗೆ ನೀವು ಕತ್ತೆಯೆಂದರೆ ನಾನು ಎಷ್ಟುಮಾತ್ರ ತಡೆದುಕೊಳ್ಳಲಿಕ್ಕಿಲ್ಲ. ನಮ್ಮ ಅಪ್ಪನು ನಿಮ್ಮದೇನು ಗಂಟು ತಿಂದಿರುತ್ತಾನೆ ? ಅವನೇನೂ ನಿಮ್ಮ ಹತ್ತರ ದುಡಿಯಲಿಕ್ಕೆ ಬಂದಿಲ್ಲ ಮತ್ತು ದಿನಾಲು ನಿಮ್ಮ ಬಾರಕೋಲಿನ ಏಟು ತಿನ್ನುವದಿಲ್ಲ. ಅಂದ ಮೇಲೆ ಅವನು ಕತ್ತೆಯಾಗಲಿಕ್ಕೆ ಕಾರಣವೇನು !

**ಪ್ರತಾಪ**—ಈ ಉಡಾಳನ ಬಾಯಿಯು ಇನ್ನು ಆರಂಭವಾಯಿತು. ಈ ಕಳ್ಳನಿಗೆ ಎದ್ದಾಗ್ಗೆ ಒಮ್ಮೆ ಒದೆಯಬೇಕು, ಕುಳಿತಾಗ್ಗೆ ಒಮ್ಮೆ ಗುದ್ದಬೇಕು; ಅಂದರೆ ಇವನು ನೆಟ್ಟಗೆ ಇರುತ್ತಾನೆ. ಸ್ವಲ್ಪ ಹೊತ್ತು ಬಿಟ್ಟುಕೊಟ್ಟರೆ ಇವನು ಎಲ್ಲ ಮರೆತು ತನ್ನ ಪೂರ್ವದ ಸ್ಥಿತಿಗೆ ಬರುತ್ತಾನೆ. ( ಚಾಬೂಕು ಎಳೆದು ) ಎಲಾ ನೀಲಾ ! ಎಚ್ಚರಿಕೆಯಿಂದ ನಡೆ. ನಾನು ಹೇಳಿದ್ದನ್ನು ಈಗಿಂದೀಗಲೇ ಮಾಡು.

ಬಡಿ. ನೂಕಿಸು. ಗಟ್ಟಿಯಾಗಿ ಬಡಿ. **ಲಗಾವ ಠೋಸೆ, ಆಬ್ಬೀಕೆ ಅಬ್ಬೀ, ಖೂಪ ಜೋರಸೇ.**

**ನೀಲಾ**—ಹೂ. ಹಾಗಾದರೆ ಯಾರಿಗೆ ಬಡಿಯಲಿ? ಹೇಳಿರಿ. ಇಲ್ಲಿ ಯಂತೂ ಯಾವನೂ ನನ್ನ ಕಣ್ಣಿಗೆ ಕಾಣಿಸಲೊಲ್ಲನು. ಸ್ವಲ್ಪ ಅವನನ್ನು ತೋರಿಸಿ ಮಗ್ಗಲಿಗೆ ಸರಿದುಕೊಳ್ಳಿರಿ. ಅಂದರೆ ನಿಮ್ಮ ಮನಸ್ಸು ಹಿರಿಹಿರಿ ಹಿಗ್ಗು ವಂತೆ ಅವನ ಸಮಾಚಾರ ತೆಗೆದುಕೊಂಡೇ ಬಿಡುವೆನು.

**ಪ್ರತಾಪ**—ಎಲೋ ಗರ್ದಭಾ, ನೀನು ಈ ಹೊತ್ತು ಮೈಮುರಿ ಹೊಡತ ತಿನ್ನಲಿಕ್ಕೆ ಬಂದಿರುತ್ತೀ. ಒಳ್ಳೇದು, ನಿನಗೆ ಮತ್ತೊಮ್ಮೆ ಹೇಳುತ್ತೇನೆ ಕೇಳು. ಗಟ್ಟಿಯಾಗಿ ಕೂಗು. ಕಿವಿ ಗಡಚು ಹಾಕುವಂತೆ ಹೊಯ್ಯಿಕೋ. ಸಪ್ಪಗೆ ಹೊಯ್ಯಿ ಕೊಂಡರೆ ನನ್ನ ಮನಸ್ಸಿಗೆ ಎಳ್ಳಷ್ಟು ಸಹ ಬರಲಿಕ್ಕಿಲ್ಲ. ಹೂ. ಏನು ವಿಚಾರ ಮಾಡುತ್ತೀ? ಬೇಗನೆ ಧ್ವನಿ ಮಾಡು. ಇಲ್ಲದಿದ್ದರೆ ನಿನ್ನ ತಲೆಯ ಬುರಡಿಯನ್ನು ಒಡೆದು ಧ್ವನಿಯನ್ನು ಹೊರಡಿಸಬೇಕಾದೀತು!

**ನೀಲಾ**—ಅದೇಕೆ ನಮ್ಮಪ್ಪಾ! ನಾನು ಅದೇ ಸಿದ್ಧತೆಯನ್ನು ನಡೆಸಿರು ತ್ತೇನೆ. ( **ಅಂಗಿಯ ಮುಂದೋಳು ಸರಿಸಿ ಮೈ ಮೇಲಿನ ಕಂಬಳಿಯನ್ನು ಟೊಂಕಕ್ಕೆ ಸುತ್ತಿ ಕೊಂಡು ತನ್ನಷ್ಟಕ್ಕೆ** ) ನಮ್ಮ ಯಜಮಾನನು ಈ ಹೊತ್ತು ಅಫೂ ಅಥವಾ ಭಂಗೀ ಸೇವನಮಾಡಿದಂತೆ ಕಾಣುತ್ತದೆ. ಅದಕ್ಕಾಗಿಯೇ ಅವನು ಏನಾದರೊಂದು ನಿಮಿತ್ಯವನ್ನು ತೆಗೆದು ಜಗಳಾಡಲಿಕ್ಕೆ ನಿಂತಿರುತ್ತಾನೆ. ನೋಡು ಒಡೆಯನೇ, ಈಗ ನೆಲವು ಗದಗದ ನಡುಗುವಂತೆ ಮತ್ತು ಮುಗಿಲು ಹರಕೊಂಡು ಬೀಳು ವಂತೆ ಹೊಯಿಕೊಳ್ಳುತ್ತೇನೆ. ಇದರಿಂದ ಇಲ್ಲಿ ಏನಾದರೂ ಗದ್ದಲವು ಕೂಡಿ ಆಗಬಾರದ ಕೆಲಸವು ಆದರೆ ನೀನೇ ಅದನ್ನು ನಿಸ್ತರಿಸಿಕೋ. ಅದರ ಹೊಣೆಯು ನನ್ನ ಮೇಲೆ ಇಲ್ಲ ನೋಡು. ಎಚ್ಚರಿಕೆ.

**ಪ್ರತಾಪರಾವ**—ಎಲಾ, ಹೀಗೇಕೆ ಈವೊತ್ತು ನೀನು ಮೈಮರೆತು ಮಾತಾಡುತ್ತೀ? ಚಿಲಮಿಗಿಲಮೀ ಹೊಡದು ಬಂದಿರುವಿಯೆಂದು ಕಾಣುತ್ತದೆ. ನಿಲ್ಲು, ನಿನ್ನ ಗುಂಗು ಇಳಿಸುತ್ತೇನೆ. ( **ಅವನ ಕಿವಿ ಹಿಂಡುತ್ತಾನೆ** ) ಹೇಗದೆ? ನನ್ನ ಮಾತ್ರ! ಎಚ್ಚರಿಕೆಯು ಮೇಲೆ ಬಂದೆಯಾ? ಅಥವಾ ಇನ್ನೊಂದೆರಡು ಸುತ್ತು ಮಾತ್ರೆಯನ್ನು ತಿರುವಬೇಕೋ? ಲತ್ತೆಯನ್ನು ತಿಂದಹೊರತಾಗಿ ಕತ್ತೆಯು ಹೇಗೆ ದಾರೀ ನಡೆದೀತು?

**ನೀಲಾ** – (ನೆಲದಮೇಲೆ ಉರುಳಾಡುತ್ತ ಮತ್ತು ಕೂಗುತ್ತ) ಸತ್ತೆ ! ಸತ್ತೆ ! ಓಡಿ ಬನ್ನಿರಿ ! ನನ್ನ ಒಡೆಯನಿಗೆ ಹುಚ್ಚು ಹತ್ತಿನ್ದು ಅವನು ಸುಮ್ಮ ಸುಮ್ಮನೆ ನನ್ನ ಜೀವವನ್ನು ತಗೊಳ್ಳಲಿಕ್ಕೆ ಹತ್ತಿದ್ದಾನೆ. ಬೇಗ ಬನ್ನಿರಿ ! ನನ್ನ ಜೀವವನ್ನು ಬದುಕಿಸಿಕೊಳ್ಳಿರಿ !

**ಪ್ರತಾಪರಾವ** – ಇವನೆಷ್ಟು ಮೋಂಡನಿರುತ್ತಾನೆ ! ಇವನು ಎಷ್ಟು ಹೊಡತಗಳನ್ನು ತಿಂದಾಗ್ಯೂ ಕತ್ತೆಯಂತೆ ಬಾಯಿಗೆ ಬಂದ ಪ್ರಕಾರ ಒದರುತ್ತಾನೆ. ನೀಲಾ, ಸುಮ್ಮನೆ ಎಷ್ಟು ಚೆನ್ನಾಗಿ ಕೂಗುತ್ತೀಯಾ ? ಇಲ್ಲವೆ ಮತ್ತೆರಡು ಕಡಬು ಕೊಡಲೋ ?

**ನೀಲಾ** ಒಲ್ಲೆರೆಪ್ಪಾ ಒಲ್ಲೆ. ನನಗೇನೂ ಅಷ್ಟು ಹಸಿವೆಯಾಗಿಲ್ಲ.

( ಭೀಮರಾಯನು ಹೊರಗೆ ಬರುತ್ತಾನೆ. )

**ಭೀಮರಾವ**—ಏನು ಗದ್ದಲವಿದು ? ಯಾವನು ಒದರಾಡುತ್ತಾನೆ ? ಎಲಾ, ಇಲ್ಲಿ ಒದರಾಡುತ್ತ ಬಿದ್ದಿರುವವನು ನೀಲನು ! ಮತ್ತು ಇಲ್ಲಿ ನಿಂತಿರುವವನು ಯಾರು ? ನನ್ನ ಮಿತ್ರ ಪ್ರತಾಪರಾಯನು ! ವ್ಹಾಃ ಪ್ರತಾಪರಾವ, ಯಾವಾಗ ಬಂದೆ ? ಒಳ್ಳೇದು. ಊರ ಕಡೆಗೆ ಯಾವತ್ತೂ ಕ್ಷೇಮವಷ್ಟೇ ? (ಒಬ್ಬರಿಗೊಬ್ಬರು ಆಲಿಂಗನ ಕೊಡುತ್ತಾರೆ.)

**ಪ್ರತಾಪರಾವ**—ಅಂಜಿ ಹೊರಗೆ ಬಂದೇನು ? ನಿನಗೆ ಆ ನೀಲನ ಸ್ವಭಾವವು ಗೊತ್ತಿಲ್ಲೇನು ? ಅವನು ಮಹಾ ತರ್ಕನು. ಒಂದು ಪಟ್ಟು ಇರುವದನ್ನು ಹತ್ತು ಪಟ್ಟು ಮಾಡಿ ತೋರಿಸುತ್ತಾನೆ. ನನ್ನದೂ ಅವನದೂ ಈ ಪ್ರಕಾರದ ವಿನೋದವು ಯಾವಾಗಲು ನಡೆಯುತ್ತದೆ. ಅವನಿಗೆ ನಡನಡುವೆ ಕೆಲಸದ ನೆನಪು ಹಾರುತ್ತದೆ. ಆದುದರಿಂದ ಈ ಪ್ರಕಾರ ಅವನಿಗೆ ನೆನಪು ಕೊಡಬೇಕಾಗುತ್ತದೆ. ಅದಿರಲಿ ಬಿಡು. ನೀನು ನನ್ನ ಜೀವದ ಗೆಳೆಯನಿರುವ ಕಾರಣ ಈವೊತ್ತು ನಿನ್ನನ್ನು ಕಂಡದ್ದಕ್ಕಾಗಿ ನನಗೆಷ್ಟು ಆನಂದವಾಗಿರುತ್ತದೆಂದು ಹೇಳಲಿ ?

**ಭೀಮರಾವ**—ಹೌದು. ಈ ಪ್ರಕಾರ ಆಗುವದು ಸ್ವಾಭಾವಿಕವದೆ. ಇದು ನಿನಗೊಬ್ಬನಿಗೇ ಆಗಿರುವದೇನು ? ಸ್ನೇಹದ ಚಮತ್ಕಾರವು ಯಾವಾಗಲು ಇದೇ ! ಒಬ್ಬನಿಗೆ ಆನಂದವಾದರೆ ಇನ್ನೊಬ್ಬನಿಗೆ ಅತ್ಯಾನಂದ ! ಒಬ್ಬನಿಗೆ ಅತ್ಯಾನಂದವಾದರೆ ಇನ್ನೊಬ್ಬನಿಗೆ ಬ್ರಹ್ಮಾನಂದ ! ಒಬ್ಬನಿಗೆ ಉಲ್ಲಾಸವಾದರೆ ಇನ್ನೊಬ್ಬನಿಗೆ ಶ್ವಾಸೋಚ್ಛ್ವಾಸ ! ಇದು ಅದ್ವಿತೀಯ ಚಮತ್ಕಾರವಲ್ಲೇ ? ಪ್ರತಾಪರಾವ, ಏಕೆ ನಗುತ್ತೀ ?

**ಪ್ರತಾಪರಾವ**—ನಗುವವನ್ನು ಬಿಟ್ಟು ಅಳವೇಕೇನು ? ಎಲಾ ಹುಚ್ಚಾ, ನಿನ್ನ ಮಾತು ಕೇಳಿದರೆ ಬುದ್ಧಿವಂತನು ಸಹ ಮೂರ್ಖನಾದಾನು. ಈ ಹೊಸ ಅಲಂಕಾರಿಕ ಭಾಷಣಪದ್ಧತಿಯನ್ನು ಎಲ್ಲಿಂದ ಕಲಿತುಕೊಂಡೆ ?

**ಭೀಮರಾವ**—ಪ್ರತಾಪರಾವ, ನಾನು ನಿನ್ನನ್ನು ಬಹಳ ಧೂರ್ತನೆಂದು ತಿಳಿದಿದ್ದೆನು ! ಆದರೆ ಅದೇನೂ ನಿನ್ನಲ್ಲಿ ಕಾಣಿಸುವದಿಲ್ಲ. ನನ್ನ ಮಾರ್ಮಿಕ ಭಾಷಣದೊಳಗಿನ ಇಂಗಿತವು ನಿನಗೆ ತಿಳಿಯಬಾರದು ! ಎಲೋ, ಸ್ತ್ರೀವಶೀಕರಣಕ್ಕೆ ಈ ಅಲಂಕಾರಿಕ ಭಾಷಣಪದ್ಧತಿಯು ಬಹಳ ಉತ್ಕೃಷ್ಟವಾದ ಸಾಧನವೆಂದು ನಾನು ಇದನ್ನು ಆರಂಭಮಾಡಿರುತ್ತೇನೆ. ಈಗಾದರೂ ತಿಳಿಯಿತೋ ? ನೀಲಾ, ಏಕೆ ಉರು ಳಾಡುತ್ತೀ ? ಏಳು. ಪ್ರತಾಪರಾವ, ಒಳಗೆ ನಡೆ.

**ನೀಲಾ**—ನೋಡಿರೆಪ್ಪಾ ಎದ್ದೆ. ( ಮೂರುಮಂದಿ ಒಳಗೆ ಹೋಗುತ್ತಾರೆ. ಆ ಬಳಿಕ ಭೀಮರಾಯನನ್ನುದ್ದೇಶಿಸಿ ) ನಮ್ಮ ಧನಿಯರು ನಿಮ್ಮ ಮುಂದೆ ನಾನು ಸಿದ್ಧ ಹತ್ತಿ ಸೇದಿರುತ್ತೇನೆಂದು ಹೇಳಿದರೇನು ? ನಾನು ಅದನ್ನು ಮುಟ್ಟಿದ್ದರೆ ನಿಮ್ಮ ಕೊರಳಾಣೆ. ಹೆಚ್ಚಿನ ಸಂಗತಿಯನ್ನು ನಿಮ್ಮ ಕಿವಿಯಲ್ಲಿ ಹೇಳುತ್ತೇನೆ. ( ಅವನ ಕಿವಿಯ ಹತ್ತರ ಹೋಗಿ ಗಟ್ಟಿಸಿ ) ನಮ್ಮ ಧನಿಯರು ಇವತ್ತು ತಾವೇ ಏನೋ ಸೇವನ ಮಾಡಿ ಬಂದಿರುತ್ತಾರೆ. ಅದಕ್ಕಾಗಿಯೇ ಅವರು ಸುಮ್ಮಸುಮ್ಮನೆ ನನ್ನ ಮೈ ಮೇಲೆ ಏರಿ ಬರುತ್ತಿದ್ದಾರೆ. ಮುಂಜಾನೆಯಿಂದ ಸಂಜೆಯವರೆಗೆ ಇದೇ ಹಾಡು ನಮ್ಮ ಅಪ್ಪನವರದು! ನಮ್ಮ ಅಪ್ಪನವರಿಗೆ ಒಬ್ಬ ಗಟ್ಟಿಮುಟ್ಟ ಹರೆಯದ ಹೆಂಡ ತಿಯು ಸಿಕ್ಕಳೆಂದರೆ ನಮ್ಮ ಅಪ್ಪನವರು ತಣ್ಣಗೆ ಆಗಿ ಹೋದಾರು. ಇವರ ಮದುವೆಯಾಗುವ ತನಕ ಇವರ ಹತ್ತರ ಕೆಲಸಮಾಡುವದು ಬಹಳ ಬಿಗಿಯಾಗಿ ರುತ್ತದೆ. ಅದಕ್ಕಾಗಿಯೇ ಇವರ ಕೆಲಸಬಿಟ್ಟು ಮನೆಗೆ ತಣ್ಣಗೆ ಹೋಗಬೇ ಕೆಂದು ಚಡಪಡಿಸುತ್ತೇನೆ.

**ಭೀಮರಾವ**—ನೀಲಾ, ಈ ಮಾತು ಎಂದಿಗೂ ಆಗದು. ನನ್ನ ಮಿತ್ರನು ನಿನ್ನ ಬಹಳ ದಿವಸದ ಯಜಮಾನನು. ನೀವಿಬ್ಬರೂ ಚಿಕ್ಕಂದಿನಿಂದ ಕೂಡಿ ಇರುತ್ತೀರಿ. ಇವನ ಕೆಲಸವನ್ನು ನೀನು ಬಿಡತಕ್ಕವನೇನು ?

**ಪ್ರತಾಪರಾವ**—ಅವನೇನು ನನ್ನ ಕೆಲಸವನ್ನು ಬಿಡುತ್ತಾನೆ ? ಅವನಿಗೆ ನಾನು. ನನಗೆ ಅವನು. ಎರಡನೆಯವರಿಗೂ ಅವನಿಗೂ ಅರಗಳಿಗೆ ಸಹ ತಾಳ ಬೀಳಲಿಕ್ಕಿಲ್ಲ. ಹೌದಲ್ಲೋ ನೀಲಾ ?

( ಚಾಬೂಕು ಹಾರಿಸುತ್ತಾನೆ )

**ನೀಲಾ**— ( ದೂರ ಸರಿದು ) ಹೌದೌದು. ಧನಿಯರೇ, ನಿಮ್ಮ ಪ್ರೀತಿಯು ನನ್ನ ಮೇಲೆ ಬಹಳ ಇರುತ್ತದೆಂಬುದು ನನಗೆ ಪೂರಾ ಗೊತ್ತುಂಟು. ಭೀಮಪ್ಪನವರೇ, ನಮ್ಮ ಧನಿಯರ ಪ್ರೀತಿಯ ಮಾಪರಿಯನ್ನು ನೀವು ಕಣ್ಣು ತುಂಬ ನೋಡಿದಿರಾ ? ಅಂದಮೇಲೆ ನಾನು ಇವರ ಕೆಲಸವನ್ನು ಬಿಡದೆ ಏನು ಮಾಡಬೇಕು ? ನೀವೇ ಹೇಳಿರಿ. ನಾನು ಸಣ್ಣ ಹುಡುಗನಿದ್ದಾಗಿನಿಂದ ಇವರ ಕೆಲಸದಲ್ಲಿರುವದು ನಿಜವು. ಒಂದು ದಿನಕ್ಕೆ ಹತ್ತು ಹನ್ನೆರಡೇ ಬಾಂಕೋಲಿನ ಏಟುಗಳು ಬಿದ್ದಿದ್ದರೆ ನಾನು ಮಿಸುಕಾಡುತ್ತಿದ್ದಿಲ್ಲ. ಆದರೆ ನಾನು ಮುಂಜಾನೆ ಎದ್ದ ಕೂಡಲೆ ಹತ್ತು ಹನ್ನೆರಡು ಏಟುಗಳು ನನ್ನ ಅಲ್ಪಾಹಾರವಾಗಿ ದೊರೆಯುತ್ತವೆ. ಮುಂದೆ ರಾತ್ರಿ ಮಲಗಿಕೊಳ್ಳುವ ತನಕ ನನಗೆ ಎಷ್ಟು ದೊರೆಯುತ್ತವೆಂಬುದರ ಎಣಿಕೆಯೇ ಇಲ್ಲ. ನಾನೇನು ಮನುಷ್ಯನೋ ? ದನವೋ ? ಇಷ್ಟು ಹೊಡತಗಳನ್ನು ಯಾವನಾದರೂ ಮನುಷ್ಯನು ತಡಕೊಂಡಾನೋ? ನೀವಾದರೂ ತಡಕೊಂಡೀರಾ ?

**ಭೀಮರಾವ**— ( ನಕ್ಕು ) ನನಗೆ ಇಂಥ ಅನುಭವವು ಎಂದೂ ಬಂದಿಲ್ಲ ಆದುದರಿಂದ ನಾನೇನೂ ಇದಕ್ಕೆ ಉತ್ತರ ಕೊಡಲಾರೆನು.

**ನೀಲಾ**—ಇದೇ ಈಗ ನಾನೂ ನಮ್ಮ ಧನಿಯರೂ ಏಕೆ ಜಗಳಾಡಿದೆವೆಂಬುದರ ಮೋಜು ಹೇಳುತ್ತೇನೆ, ಕೇಳಿರಿ. ಇವರು ನಿಮ್ಮ ಮನೆಯ ಹತ್ತರ ಬಂದವರೇ ನನಗೆ "ಹೊ ಬಡಿ. ಬಡಿ. ತಡಮಾಡಬೇಡ" ಎಂದು ಒತ್ತಾಯಮಾಡಿದರು. ಅಲ್ಲಿ ನೋಡಿದರೆ ನನ್ನನ್ನೂ ಇವರನ್ನೂ ಬಿಟ್ಟು ಒಂದು ಹುಳ ಸಹ ಇದ್ದಿಲ್ಲ. ನಾನು ಯಾರನ್ನು ಬಡಿಯಬೇಕು ? ಇವರ ಮಾತು ಕೇಳಿಕೊಂಡು ನಾನು ಇವರನ್ನೇ ಬಡಿದಿದ್ದರೆ ನೀವಾದರೂ ನನಗೆ ಏನು ಅನ್ನುತ್ತಿದ್ದಿರಿ ? ನೀವು ನನ್ನ ಮೋರೆಯ ಮೇಲೆ ಉಗುಳದೆ ಬಿಡುತ್ತಿದ್ದಿರಾ!

**ಪ್ರತಾಪರಾವ**—ಇವನು ಎಂಥಾ ಕತ್ತೆಯು ! ನಾನು ಇವನಿಗೆ ಹತ್ತು ಸಾರೆ " ಬಡಿ. ಬಾಗಿಲ ಬಡಿ " ಎಂದು ಹೇಳಿದೆ. ಆದರೆ ಇವನು ನನ್ನ ಮಾತೇ ಲಕ್ಷಿಸಲಿಲ್ಲ. ಆ ಮೇಲೆ ಅವನಿಗೆ ಸ್ವಲ್ಪ ಕಿವಿಯನ್ನು ತಿರುವಿದೆ.

**ನೀಲಾ**— ಹಾ. ಹಾ. ಧನಿಯರೇ, ಸುಳ್ಳು ಮಾತಾಡುವದು ಘಾಡಲ್ಲ. ಜೀವಹೋದರೂ ಚಿಂತಿಲ್ಲ, ನಿಮ್ಮಂಥ ದೊಡ್ಡ ಮನುಷ್ಯರು ಸುಳ್ಳಾಡಬಾರದು. " ಬಾಗಿಲ ಬಡಿ " ಅನ್ನುವ ಮಾತು ನಿಮ್ಮ ಬಾಯಿಂದ ಬಂದಿದ್ದರೆ ನನ್ನಾಣೆ. " ಬಡಿ. ಬಡಿ. ತಡಮಾಡಬೇಡ " ಎಂದು ಮಾತ್ರ ಹೇಳಿದಿರಿ. ಇದರಿಂದ ಬಾಗಿಲ

ಬಡಿಯೆಂದು ನೀವು ಅನ್ನುವದು ನನಗೆ ಹೇಗೆ ತಿಳಿಯಬೇಕು ? ನಿಮ್ಮ ಹೊಟ್ಟೆ ಯೊಳಗೆ ಇದ್ದುದನ್ನು ತಿಳಕೊಳ್ಳುವದಕ್ಕೆ ನಾನೇನು ದೇವರ ಮೊಮ್ಮಗನೇ? (ಭೀಮರಾಯನನ್ನುದ್ದೇಶಿಸಿ) ಇವರ ಮೈ ನೋಯುತ್ತಿದ್ದೀತೆಂದು ನಾನು ತಿಳಕೊಂಡು ನನ್ನ ಅಂಗೀ ತೋಳು ಹಿಂದಕ್ಕೆ ಸರಿಸಿಕೊಳ್ಳಲಿಕ್ಕೆ ಹತ್ತಿದ್ದೆನು. ಆಗ ಇವರು ಒಮ್ಮೆಲೆ ನನ್ನ ಮೈಮೇಲೆ ಹುಲಿಯಂತೆ ಆಡರಿ ಬಂದು ನನ್ನನ್ನು ಬಾರಕೋಲಿನಿಂದ ಬಡಕೊಂಡರು. ಸ್ವಲ್ಪದರಲ್ಲಿಯೇ ನನ್ನ ಬುದ್ಧಿ ಹೋಯಿತು ! ಆಗ ಹೋದ್ದಕ್ಕೆ ಇನ್ನು ಮಿಡಕಿ ಉಪಯೋಗವೇನು ?

**ಪ್ರತಾಪರಾವ** ನೀಲಾ, ಬಾಯಿ ಮುಚ್ಚುತ್ತಿಯೋ ಇಲ್ಲೋ ?

**ಭೀಮರಾವ**— ನಿಲ್ಲೋ ಪ್ರತಾಪರಾಯಾ, ಅವನ ವಿಜ್ಞನೆಯನ್ನು ಒಮ್ಮೆ ಪೂರ್ಣವಾಗಿ ಕೇಳಿಕೊಳ್ಳೋಣ (ನೀಲನಿಗೆ) ನಿನ್ನ ಬುದ್ಧಿಯು ಹೇಗೆ ಹೋಯಿತು ಹೇಳು.

**ನೀಲಾ**— ಹೇಗೆ ಹೋಯಿತು ಹೇಳಲಿರಾ ! ನಮ್ಮ ಧನಿಯರು ನನಗೆ ಅಪ್ಪಣೆ ಮಾಡಿದ ಕೂಡಲೆ ನಾನು ಅವರನ್ನು ನೆಲಕ್ಕೆ ಕೆಡವಿ ಅವರ ಮೈನುಗ್ಗು ಮಾಡಿದ್ದರೆ ನನ್ನ ಅವಸ್ಥೆಯು ಈ ರೀತಿ ಏಕೆ ಆಗುತ್ತಿತ್ತು ?

**ಪ್ರತಾಪರಾವ**— ಒಳ್ಳೇದು. ಬಾಯಿ ಮುಚ್ಚು. ಅಧಿಕಪ್ರಸಂಗಿಯಂತೆ ಜೊಳ್ಳು ಕೊಚ್ಚಬೇಡ. ಇಲ್ಲದಿದ್ದರೆ ನೋಡು. (ಕೈ ಮೇಲಕ್ಕೆ ಎತ್ತುತ್ತಾನೆ.)

**ನೀಲಾ**— ಭೀಮಪ್ಪನವರೇ, ನೋಡಿದಿರಾ ? ನಮ್ಮ ಧನಿಯರು ಹುಚ್ಚು ಹಿಡಿದವರಂತೆ ಹೇಗೆ ಮೈಮೇಲೆ ಬರುತ್ತಾರೆ ? ಯಾವನಾದರೂ ಋಷಿಯ ಕಡೆಯಿಂದ ನೀರು ಮಂತ್ರಿಸಿಕೊಂಡು ಬಂದು ಇವರ ಮೈಮೇಲೆ ಸುರುವಿದರೆ ಇವರು ನೆಟ್ಟಗಾದಾರು !

**ಪ್ರತಾಪರಾವ**— ಎಲೋ ಅಧಮಾ ! (ಒಮ್ಮೆಲೇ ಚಾಬೂಕು ಹಾರಿಸುತ್ತಾನೆ. ನೀಲನೂ ದೂರ ಸರಿಯುತ್ತಾನೆ. ಭೀಮರಾಯನು ನಡುವೆ ಬಿಡಿಸಲಿಕ್ಕೆ ಬರುತ್ತಾನೆ. ಆಗ ಅವನಿಗೆ ಚಾಬೂಕು ತಾಕುತ್ತದೆ.)

**ಭೀಮರಾವ**— ಇದು ನೋಡಿರಿ. "**ಗಂಡಹೆಂಡರ ಜಗಳದಲ್ಲಿ ಕೂಸು ನುಗ್ಗಾಯಿತ**" ಎಂಬಂತೆ ನಿಮ್ಮಿಬ್ಬರ ಜಗಳದಲ್ಲಿ ನನಗೆ ಹೇಗೆ ಇನಾಮ ದೊರಕಿತು ! ನೀಲಾ, ಸುಮ್ಮನಾಗು. ಪ್ರತಾಪರಾವ, ನೀನು ನಿಜವಾಗಿಯೂ ಬಹಳ ಉಗ್ರನಿರುತ್ತೀ. ನಿನ್ನ ಸ್ವಾಭಿಮಾನಿಯಾದ ಮತ್ತು ವಿನೋದಗಾರನಾದ ಸೇವಕನನ್ನು ಚಾಬೂಕಿನಿಂದ ಹೊಡೆಯುವದು ಎಂದಿಗೂ ಸರಿಯಾದ್ದಲ್ಲ. ಮಿತ್ರಾ !

ಯಾವ ಭಾಗ್ಯದ ತೆರೆಯು ನಿನ್ನನ್ನು ಇವತ್ತಿನ ದಿವಸ ಇಲ್ಲಿಗೆ ಕುಣಿಸುತ್ತ ತೆಗೆದು ಕೊಂಡು ಬಂದಿತು ?

**ಪ್ರತಾಪರಾವ**—( ನಗುತ್ತ ) ಎಲಾ, ಯಾವದೆಂದು ಏನು ಕೇಳುತ್ತೀ ? ತರುಣ ಜನರು ತಮ್ಮ ಊರಿಗೆ ಬೇಸತ್ತು ವಿಶ್ರಾಂತಿ ಸುಖವನ್ನು ಪಡೆಯುವದಕ್ಕಾಗಿಯೂ ದ್ರವ್ಯ ಮತ್ತು ಅನುಭವಗಳನ್ನು ದೊರಕಿಸುವದಕ್ಕಾಗಿಯೂ ಪ್ರವಾಸಕ್ಕೆ ಹೊರಡುವಂತೆ ನಾನೂ ಹೊರಟಿದ್ದೇನೆ. ನನ್ನ ತೀರ್ಥರೂಪರು ತೀರಿಕೊಂಡದ್ದು ನಿನಗೆ ಮೊದಲೇ ನನ್ನ ಪತ್ರದಿಂದ ತಿಳಿದಿರಬಹುದು. ಅವರು ತೀರಿಕೊಂಡ ನಂತರ ಮನೆಯೊಳಗಿನ ಯಾವತ್ತು ವ್ಯವಸ್ಥೆಯನ್ನು ಸರಿಪಡಿಸಿ ನಾಲ್ಕುದುಡ್ಡು ನನ್ನ ಕೈಯಲ್ಲಿ ತೆಗೆದುಕೊಂಡು ಯಾತ್ರಿಕನಾಗಿ ಹೊರಟು ಬಂದಿರುವೆನು. ಈ ಯಾತ್ರೆಯನ್ನು ಮಾಡುವ ಉದ್ದೇಶವು ಇನ್ನೊಂದು ಇರುತ್ತದೆ.

**ನೀಲಾ**—ಅದು ಯಾವದೆಂಬುದನ್ನು ನಾನು ಹೇಳಲಿರಾ ? ( **ಪ್ರತಾಪರಾಯನು ಅವನ ಕಡೆಗೆ ಸಿಟ್ಟಿನಿಂದ ನೋಡುತ್ತಾನೆ.** ) ಬಿಟ್ಟೆ. ನನ್ನ ಬಾಯಿಗೆ ಗಟ್ಟಿಯಾಗಿ ಬೀಗವನ್ನು ಹಾಕುತ್ತೇನೆ.

**ಪ್ರತಾಪರಾವ**—ಅದೇನು ನಿನ್ನ ಉದ್ದೇಶವು ?

**ಭೀಮರಾವ**—ಸಾಧ್ಯವಾದಲ್ಲಿ ನನ್ನ ಸೌಭಾಗ್ಯಲಕ್ಷ್ಮಿಯನ್ನು ಹುಡುಕಿ ಕೊಳ್ಳಬೇಕೆಂದು ಆಲೋಚಿಸಿರುತ್ತೇನೆ.

**ಭೀಮರಾವ**—( **ತನ್ನಷ್ಟಕ್ಕೆ** ) ಈ ಮೂರ್ತಿಯು ನೆಟ್ಟಗೆ ಅದೆ. ಆ ಹಿಡಂಬಿಗೂ ಈ ಭೀಮಸೇನನಿಗೂ ಗಂಟುಹಾಕಿಕೊಟ್ಟರೆ ಅನಾಯಾಸದಿಂದ ನನ್ನ ಕೆಲಸವಾಗುವದು. ( ಬಹಿರಂಗವಾಗಿ ) ಪ್ರತಾಪರಾವ ! ನಿನ್ನಂಥ ತಾರುಣ್ಯದ ಭರದಲ್ಲಿರುವವನು ಹಾಗೂ ಕೈಯಲ್ಲಿ ನಾಲ್ಕು ದುಡ್ಡು ಇರುವವನು, ಮೇಲಾಗಿ ಜನರಲ್ಲಿ ಮಾನಮರ್ಯಾದೆಯುಳ್ಳವನು, ಆದಷ್ಟುಬೇಗನೆ ಮದುವೆಮಾಡಿಕೊಳ್ಳುವದುಬಹಳ ಯೋಗ್ಯವು.(**ಧ್ಯಾನಿಸಿದಂತೆಮಾಡಿ**)ನೆನಪಾಯಿತು. ಒಂದುಕಡೆಗೆ ಒಬ್ಬಲಾವಣ್ಯವತಿಯು ಇದ್ದಾಳೆ. ಆದರೆ ಬೇಡ, ಆಕೆಯ ಹೆಸರು ಸಹ ಬೇಡ. ನೀನು ನನ್ನ ಪ್ರಾಣಮಿತ್ರನು. ಆದುದರಿಂದ ನಿನಗೆ ಅವಳ ಗಂಟು ಹಾಕಿಕೊಡುವದು ಬೇಡ. ಆದರೆ ಆಕೆಯನ್ನು ಮದುವೆ ಮಾಡಿಕೊಳ್ಳುವವರಿಗೆ ಆಕೆಯ ತಂದೆಯ ಗಂಟು ಸಿಗುತ್ತದೆಂಬ ವಿಷಯದಲ್ಲಿ ಏನೂ ಸಂಶಯವಿಲ್ಲ.

**ಪ್ರತಾಪರಾವ**—ಎಲೋ ಭೀಮರಾಯಾ! ನಿನ್ನ ಸಂದಿಗ್ಧ ಭಾಷಣವೂ ನಿನ್ನ ಪ್ರೌಢ ಮತ್ತು ಅಲಂಕಾರಿಕ ಭಾಷಣವೂ ನನಗೆ ಬೇಡ. ಸುಲಭಶಬ್ದಗಳಿಂದ ಸರಳ ಉತ್ತರ ಕೊಡು.

**ಭೀಮರಾವ**– ಮಿತ್ರಾ, ನಿನ್ನ ಮುಂದೆ ನಾನು ಯಾವದನ್ನೂ ಬಚ್ಚಿಡುವದಿಲ್ಲ. ನನ್ನ ಒಬ್ಬ ಪರಿಚಯಸ್ಥನ ಮನೆಯಲ್ಲಿ ಮದುವೆಯಾಗತಕ್ಕ ಒಬ್ಬ ಹುಡಿಗೆಯು ಇರುತ್ತಾಳೆ. ಅವಳ ತಂದೆಗೆ ಗಂಡಸುಮಕ್ಕಳು ಯಾರೂ ಇಲ್ಲ. ಆದುದರಿಂದ ಅವಳ ತಂದೆಯು ಅವಳನ್ನು ಮದುವೆ ಮಾಡಿಕೊಳ್ಳುವವನಿಗೆ ತನ್ನ ಅರ್ಧ ಆಸ್ತಿಯನ್ನು ಕೊಡತಕ್ಕವನಿದ್ದಾನೆ. ಆದರೆ—

**ಪ್ರತಾಪ**—"ಆದರೆ" "ತಥಾಪಿ" ಎಂಬ ಅನುಮಾನದ ಮಾತುಗಳನ್ನು ಬಿಟ್ಟುಬಿಡು. ಹೇಳತಕ್ಕ ಮನಸ್ಸಿದ್ದರೆ ಚೆನ್ನಾಗಿ ಹೇಳು. ಇಲ್ಲದಿದ್ದರೆ ಆ ಮಾತಿನ ಪ್ರಸ್ತಾಪವನ್ನು ನನ್ನ ಮುಂದೆ ತೆಗೆಯಬೇಡ,

**ಭೀಮರಾವ**— ಮಿತ್ರಾ! ಸಿಟ್ಟಿಗೇಳಬೇಡ. ನಿನ್ನ ಮುಂದೆ ಹೇಳಿದರೆ ನೀನು ಅವಳನ್ನು ಮದುವೆಮಾಡಿಕೊಳ್ಳದೆ ಎಂದಿಗೂ ಬಿಡುವದಿಲ್ಲ. ಆದರೆ ಮುಂದೆ ನೀನು ಅವಳೊಡನೆ ಪೇಚಾಡಬೇಕಾದೀತೆಂದು ನನಗೆ ಭಯವು ಹುಟ್ಟುತ್ತದೆ.

**ಪ್ರತಾಪರಾವ**—ಅವಳು ಬೇಕಾದಂಥ ಪ್ರಚಂಡ ಹೆಂಗಸಿರಲಿ. ನನಗೆ ದುಡ್ಡು ಸಿಗುವಂತಿದ್ದರೆ ಅವಳನ್ನು ಮದುವೆ ಮಾಡಿಕೊಳ್ಳಲಿಕ್ಕೆ ನನ್ನದೇನೂ ಅಡ್ಡಿಯಿಲ್ಲ. ಆದುದರಿಂದ ಆ ಮನಮೋಹಿನಿಯು ಎಲ್ಲಿ ಇರುತ್ತಾಳೆ? ಬೇಗ ಹೇಳು.

**ಭೀಮರಾವ**– ಆದರೆ ನಾನು ಅವಳನ್ನು ನಿನಗೆ ಗಂಟು ಹಾಕಿಕೊಟ್ಟಲ್ಲಿ ಜನರು ನನಗೆ ಏನಂದಾರೆಂದು ನಾನು ಬಹು ಹೆದರುತ್ತೇನೆ.

**ನೀಲಾ**— (ಒತ್ತಟ್ಟಿಗೆ) ನಮ್ಮ ಧನಿಯು ಹೇಗೆ ಮಾತಾಡುತ್ತಾನೆ ನೋಡಿರಿ. ಅವನಿಗೆ ದುಡ್ಡು ಸಿಕ್ಕರೆ ತೀರಿತು. ಬಾಯಲ್ಲಿ ಹಲ್ಲು ಇರಲಿ, ಇಲ್ಲದಿರಲಿ; ತಲೆಯಲ್ಲಿ ಕರೆ ಕೂದಲು ಇರಲಿ, ನರೆ ಗೂದಲು ಇರಲಿ; ಮೈಯಿಂದ ಸಶಕ್ತ ಇರಲಿ, ವರ್ಷಾನುವರ್ಷ ಬೇನೆಯಲ್ಲಿ ನವಕೊಳ್ಳುವ ರೋಗಿಷ್ಠ ಇರಲಿ; ಇವನು ಯಾವ ಹೆಂಗಸನ್ನಾದರೂ ಅವಳ ದುಡ್ಡಿನ ಸಲುವಾಗಿ ಮದುವೆಮಾಡಿಕೊಳ್ಳಲಿಕ್ಕೆ ಅನುಮಾನ ಮಾಡಲಾರನು.

**ಪ್ರತಾಪರಾವ** –ಭೀಮರಾವ, ಏನು ವಿಚಾರವನ್ನು ನಡೆಸಿರುತ್ತೀ ? ನೀನು ನನಗೆ ಆ ಮೋಹಗಾರತಿಯು ಯಾವ ಊರವಳು. ಮತ್ತು ಎಲ್ಲಿರುತ್ತಾಳೆ ಎಂಬುವದನ್ನು ತಿಳಿಸದಿದ್ದರೆ ನಿನ್ನ ಪ್ರೇಮವು ನನ್ನ ಮೇಲೆ ಇಲ್ಲೆಂದು ತಿಳಿಯುವೆನು.

**ಭೀಮರಾವ** – ಹಾಗಾದರೆ ಹೇಳುತ್ತೇನೆ. ಕಿವಿತುಂಬ ಕೇಳಿಕೋ. ನಾನು ಈ ವಿಷಯುವನ್ನು ನಿನ್ನ ಮುಂದೆ ಚೇಷ್ಟೆಯಿಂದ ತೆಗೆದಿದ್ದೆನು. ಆದರೆ ಅದನ್ನು ಪೂರ್ಣವಾಗಿ ಕೇಳಬೇಕೆಂದು ನಿನ್ನ ಅತ್ಯಂತ ಆಗ್ರಹವಿರುವದರಿಂದ ಅದನ್ನು ಹೇಳಿ ಬಿಡುತ್ತೇನೆ. ಲಕ್ಷ್ಯಕೊಟ್ಟು ಕೇಳು. ಅವಳು ಚಿಕ್ಕವಳೂ, ಸರ್ವಾಂಗಸುಂದರಿಯೂ ಇರುತ್ತಾಳೆ. ಇದರಲ್ಲಿ ಏನೂ ಸಂಶಯವಿಲ್ಲ ಇದಲ್ಲದೆ ಅವಳು ಒಳ್ಳೇ ಪ್ರತಿಷ್ಠಿತ ಮತ್ತು ಶ್ರೀಮಂತ ಮನೆತನದವಳು ಇರುತ್ತಾಳೆ. ಅವಳ ಗುಣಗಳಾದರೂ ನೆಟ್ಟಗಿರುತ್ತವೆ. ಆದರೆ ಅವಳು ಬಹಳ ಮಾತಾಡುವವಳೂ ಜಗಳಗಂಟಿಯೂ ಇರುತ್ತಾಳೆ. ನನಗೆ ಮಾತ್ರ ಅವಳ ಮಾತು ಕೇಳಿದ ಕೂಡಲೆ ಹೆದರಿಕೆಯು ಬರುತ್ತದೆ. ನಾನು ಉಪವಾಸ ಸತ್ತರೂ ಚಿಂತೆಯಿಲ್ಲ, ನನಗೆ ಅವಳ ತೂಕದಷ್ಟು ಬಂಗಾರವನ್ನು ಕೊಟ್ಟಾಗ್ಯೂ ಅವಳನ್ನು ಎಂದಿಗೂ ಮದುವೆ ಮಾಡಿಕೊಳ್ಳಲಾರೆನು.

**ಪ್ರತಾಪರಾವ**—ಭೀಮರಾವ ! ಬಂಗಾರದಲ್ಲಿ ಏನು ಮೋಹವು ತುಂಬಿರುತ್ತದೆಂಬುದು ನಿನಗೆ ಗೊತ್ತಿಲ್ಲ. ಅವಳು ಎಲ್ಲಿ ಇರುತ್ತಾಳೆ ಹಾಗೂ ಅವಳ ಹೆಸರೇನು ಹೇಳು. ಬೇಗ ಹೇಳು.

**ಭೀಮರಾವ**—ಈ ಊರಲ್ಲಿ ಲಕ್ಷ್ಮೀಪತಿರಾಯನೆಂಬ ಒಬ್ಬ ಮುದುಕನೂ ಸಾತ್ವಿಕನೂ ಆದ ಸಾವುಕಾರನಿರುತ್ತಾನೆ. ಅವನಿಗೆ ಒಬ್ಬ ಪ್ರೀತಿಯ ಮಗಳು ಇರುತ್ತಾಳೆ. ಆಕೆಗೆ ತೊಟ್ಟಿಲದಲ್ಲಿ ಇಟ್ಟ ಹೆಸರು ರಂಗೂ ಇದ್ದು ಆಕೆಯು ಸ್ವತಃ ಪ್ರೀತಿಯಿಂದ ಕರೆದುಕೊಳ್ಳುವ ಹೆಸರು ಮತ್ತು ಜನರು ಆಕೆಯನ್ನು ಕರೆಯುವ ಹೆಸರು ತ್ರಾಟಿಕಾ ಎಂದು ಇರುತ್ತದೆ.

**ನೀಲಾ**—(**ಒತ್ತಟ್ಟಿಗೆ**) ಈ ತ್ರಾಟಿಕಮ್ಮನನ್ನು ನಮ್ಮ ಅಪ್ಪನವರು ಮದುವೆ ಮಾಡಿಕೊಳ್ಳುವರೇನು ? ಅಂದ ಮೇಲೆ ನಮ್ಮ ಬಾಳುವೆಯು ಇನ್ನುಮೇಲೆ ಚೆನ್ನಾಗಿಯೇ ಆಗುವದು ! ಇವನು ರಾಣಿಗ ! ಆಕೆ ದುರ್ಗವ್ವ ! ಮುಂದೆ ಕೇಳುವದೇನು? ನಮ್ಮ ಹಲಿಗಿ ಹೊಡೆಯುವ ವೇಳೆಯು ಸಮಿಪಿಸಿತೆಂದು ಅನ್ನಲಿಕ್ಕೆ ಏನೇನೂ ಅಡ್ಡಿ ಇಲ್ಲ.

**ಪ್ರತಾಪರಾವ**—ಒಳ್ಳೇದಾಯಿತು. ಆಕೆಯ ತಂದೆಯ ಹೆಸರನ್ನು ನಾನು ಕೇಳಬಲ್ಲೆ. ನಮ್ಮ ತಂದೆಯುದೂ ಆವನವೂ ಬಹಳ ಋಣಾನುಬಂಧವಿತ್ತು. ಆದುದರಿಂದ ನನಗೆ ಅವಳನ್ನು ಮದುವೆ ಮಾಡಿಕೊಳ್ಳಲಿಕ್ಕೆ ಅವನ ಕಡೆಯಿಂದ ಏನೂ ಅಡ್ಡಿಯು ಬರಲಿಕ್ಕಿಲ್ಲೆಂದು ಕಾಣುತ್ತದೆ. ಈಗಿಂದೀಗಲೇ ಅವನ ಕಡೆಗೆ ಹೋಗಿ ಅವನಿಗೆ ನನ್ನ ನಿಶ್ಚಯವನ್ನುತಿಳಿಸುವೆನು. ಹಾಗೂ ನನ್ನ ಮೋಹನಾಂಗಿಯ ಮೋರೆಯನ್ನು ನೋಡಿ ಬರುವೆನು. ನೀನೂ ನನ್ನ ಸಂಗಡ ನಡೆ.

**ಭೀಮರಾವ**—ಒಳ್ಳೇದು. ನಿನ್ನ ಮನಸ್ಸು ಬಂದಂತೆ ಮಾಡು. ಆದರೆ ನನಗೆ ಮಾತ್ರ ಆಕೆಯ ಮುಂದೆ ಹೋಗಿ ನಿಲ್ಲುವ ಪ್ರಸಂಗವನ್ನು ತರಬೇಡ.

**ನೀಲಾ**—ಭೀಮಪ್ಪನವರೇ, ನೀವೇಕೆ ಈ ಪ್ರಕಾರ ಅನುಮಾನ ಮಾಡುತ್ತೀರಿ? ನಮ್ಮ ಧನಿಯ ಮನಸ್ಸಿಗೆ ಬಂದ ಮೇಲೆ ಬೇಗನೆ ಹೋಳಿಗೆ ಎಬ್ಬಿಸಿ ಬಿಡಿರಿ. ನನ್ನಂತೆ ಅಪ್ಪನವರು ಮನಗಂಡರೆಂದರೆ ಅಪ್ಪನವರು ಎಷ್ಟು ಗಟ್ಟಿಯುಳ್ಳವರಿದ್ದರೂ ಮೆತ್ತಗೆ ಮೇಣದಂತೆ ಆಗಿಹೋಗುತ್ತಾರೆ. ಅವರು ಮನೆಯಲ್ಲಿ ಎಷ್ಟು ಕೀಸರುಬಾಸರು ಹಿಡಿಯುವಂತೆ ಒದರಿದರೂ ನಮ್ಮ ಅಪ್ಪನವರು ಮೊದಲಿಗೆ ಬಾಯಿ ಹಾಕುವದಿಲ್ಲ. ಒಮ್ಮೆ ಅಪ್ಪನವರು ಒದರಾಡಿ ಚೀರಾಡಿ ದಣಿದು ಕೂತರೆಂದರೆ ಇವರು ತಮ್ಮ ಬಾಯಿ ಸುರುವು ಹಚ್ಚುತ್ತಾರೆ. ಇವರ ಬಾಯಿ ಒಮ್ಮೆ ಸುರುವು ಆಯಿತೆಂದರೆ ವಿಜಾಪುರದ ಮುಲುಖಮೈದಾನ ತೋಫು ಸುರುವಾಯಿತೆಂತಲೇ ತಿಳಿಯಬೇಕು. ಇವರು ಬೈಯ್ಯಲಿಕ್ಕೆ ಹತ್ತಿದರೆ ಎರಡೆರಡು ತಾಸು ಆದರೂ ಮುಗಿಯುವದಿಲ್ಲ. ಅದರೊಳಗೂ ಒಮ್ಮೆ ಬೈದ ಬೈಗಳನ್ನು ಎರಡನೇ ಸಾರೆ ಬೈಯ್ಯುವದಿಲ್ಲ. ಆಕೆಯು ಬಹಳ ಜಂಭ ತೋರಿಸಲಿಕ್ಕೆ ಹತ್ತಿದಳೆಂದರೆ ಅವಳ ಕಪಾಳ ಬಾಯುವಂತೆ ಅವಳ ಕಪಾಳಕ್ಕೆ ಕುಟ್ಟುತ್ತಾರೆ. ನಮ್ಮ ಅಪ್ಪನವರ ಗುಣವು ಇನ್ನೂ ನಿಮಗೆ ಗೊತ್ತಾದಂತೆ ಕಾಣುವದಿಲ್ಲ.

**ಪ್ರತಾಪರಾವ**--ಶಹಬಾಸ ನೀಲಾ! ನನ್ನ ವರ್ಣನವನ್ನು ಬಹಳ ಉತ್ಕೃಷ್ಟವಾಗಿ ಮಾಡಿದೆ. ಅದಕ್ಕಾಗಿ ತಕ್ಕೊ ಈ ಬಕ್ಷೀಸು. (ಚಾಬೂಕು ಹಾರಿಸುತ್ತಾನೆ)

**ಭೀಮರಾವ.**— ಪ್ರತಾಪರಾವ, ಹಾಗಾದರೆ ನಡೆ. (ಮೂವ್ವರೂ ಮನೆಯೊಳಗಿಂದ ಹೊರಗೆ ಬರುತ್ತಾರೆ.) ನಿನ್ನ ಮನಸ್ಸಿಗೆ ಬಂದರೆ ನಾನೇಕೆ ಅಡ್ಡ ಬರಲಿ? ಅದರಲ್ಲಿ ನನ್ನ ಹಿತವೇ ಇರುತ್ತದೆ. ಲಕ್ಷ್ಮೀಪತಿರಾಯನ ಮನೆಯೊಳಗೆ ನನ್ನ ಮನಸ್ಸನ್ನು ಹರಣ ಮಾಡಿಕೊಂಡಂಥ ನನ್ನೊಬ್ಬ ಪ್ರಾಣಮಿತ್ರೆಯು ಇರುವಳು.

ಅವಳು ಲಕ್ಷ್ಮೀಪತಿರಾಯನ ಕನಿಷ್ಠಪುತ್ರಿಯು. ಅವಳ ಹೆಸರು ಕಮಲೆ. ಜ್ಯೇಷ್ಠ ಪುತ್ರಿಯ ಮದುವೆಯಾಗುವ ಮುಂಚೆ ಕನಿಷ್ಠಪುತ್ರಿಯನ್ನು ಮದುವೆಮಾಡಿಕೊಡುವ ದಿಲ್ಲೆಂದು ಆ ಮುದುಕನು ನಿಶ್ಚಯಮಾಡಿರುತ್ತಾನೆ. ಆದುದರಿಂದ ನಾನು ನಿರಾಶೆಯಿಂದ ಸುಮ್ಮನೆ ಕುಳಿತಿದ್ದೆನು. ಆದರೆ ಈಗ ನೀನಾಗಿ ಬಂದುದರಿಂದ ನನ್ನ ಭಾಗ್ಯರವಿಯು ಉದಯವಾದನೆಂದು ತಿಳಿಯಲಿಕ್ಕೆ ಅಡ್ಡಿ ಇಲ್ಲ.

**ನೀಲಾ**—(ಬತ್ತಿಟ್ಟಿಗೆ) ಇವನು ಪ್ರತಾಪನ ಹೆಸರು ನಮ್ಮ ಧನಿಗೆ ಏಕೆ ತಿಳಿಸಿದ್ದಾನೆಂದು ನನಗೆ ಮೊದಲಿನಿಂದಲೇ ಸಂಶಯವಿತ್ತು. ಎಲ್ಲರು ತಮ್ಮ ರೊಟ್ಟಿಯ ಮೇಲೆ ತುಪ್ಪ ಎಳಕೊಳ್ಳುವವರೇ! ಎರಡನೆಯವರದು ಬೇಕಾದ್ದು ಆಗಲಿ, ಅದರ ಚಿಂತೆಯನ್ನು ಯಾರು ಮಾಡುತ್ತಾರೆ ?

**ಭೀಮರಾವ**—ಪ್ರತಾಪರಾವ, ನನ್ನ ಹೃದ್ಗತವು ನಿನಗೆ ಹೊಳಿಯಿತೇನು ? ಯಾಕೋ, ಬಹಳ ನಗಲಿಕ್ಕೆ ಹತ್ತಿರುವೆ !

**ಪ್ರತಾಪರಾವ**—(ನಗುತ್ತ) ಅಪ್ಪಾ! ನಿನ್ನ ಭಾಷೆಯ ವೈಯ್ಯಾರವು ಮತ್ತು ನಿನ್ನ ಮಾತಿನ ಒನಪು ನನಗೆ ಬಹಳೇ ಬೇಸರಿಕೆ ಕೊಟ್ಟವು ! ಒಮ್ಮೆ ಅಲ್ಲಿಗೆ ಬೇಗನೆ ಕರೆದುಕೊಂಡು ನಡೆ.

**ಭೀಮರಾವ**— "**ಅವಸರದ ಗಂಡನು ಮೊಳಕಾಲಿಗೆ ಬಾಸಿಂಗ ಕಟ್ಟಿಕೊಂಡನು**" ಎಂಬಂತೆ ನೀನು ಬಹಳ ಅವಸರವನ್ನು ನಡೆಸಿರುವೆ.

**ಪ್ರತಾಪರಾವ**—ಬೇಕಾದುದು ಅಂದುಕೋ. ಆದರೆ ಆ ಸ್ಥಳಕ್ಕೆ ನನ್ನನ್ನು ಬೇಗನೆ ಕರೆದುಕೊಂಡು ಹೋಗು.

**ಭೀಮರಾವ**— ಹಾಗಾದರೆ ನೀನು ನನ್ನದೊಂದು ಕೆಲಸವನ್ನು ಮಾಡತಕ್ಕದ್ದದೆ. ಕಮಲೆಗೆ ಗಾಯನ ಕಲಿಸುವದಕ್ಕಾಗಿ ಒಬ್ಬ ಗಾಯಕನನ್ನು ನೇಮಿಸಬೇಕೆಂದು ಅವಳ ತಂದೆಯ ಮನಸ್ಸಿನಲ್ಲಿರುವದು. ನನಗೆ ಸ್ವಲ್ಪ ಗಾಯನವು ಬರುತ್ತದೆ. ಆದುದರಿಂದ ನಾನು ಈಗೊಬ್ಬ ತಂಜಾವರದ ಗಾಯಕನ ವೇಷವನ್ನು ತೆಗೆದುಕೊಳ್ಳುತ್ತೇನೆ. ನನ್ನ ಹೆಸರು ವೆಂಕಟಸ್ವಾಮಿ ಎಂದು ಇಟ್ಟುಕೊಳ್ಳುವೆನು ನೀನು ಲಕ್ಷ್ಮೀಪತಿರಾಯನ ಮುಂದೆ ನನ್ನ ಬಗ್ಗೆ ವರ್ಣಿಸಿ ಹೇಳತಕ್ಕದ್ದು. ನಾನೊಮ್ಮೆ ಅಂತಃಪುರದಲ್ಲಿ ಪ್ರವೇಶಿಸಿದರೆ ಸಾಕು. ಆ ಕಮಲೆಗೆ ಬೇಗನೆ ದಿವ್ಯವಾದ ಗಾಯನವನ್ನು ಕಲಿಸುತ್ತೇನೆ.

**ಪ್ರತಾಪರಾವ**—ಒಳ್ಳೇದು. ಅದರದೂ ಬೆಳಕು ಬೀಳಲಿ. (ತನ್ನಷ್ಟಕ್ಕೆ). ಈ ಮೂರ್ಖನು ಇನ್ನು ಗಾಯಕನಾಗುತ್ತಾನೆ! ಇವನಿಗೆ ಸಪ್ತ ಸ್ವರಗಳು ಚೆನ್ನಾಗಿ ಬಾರದಿದ್ದರೂ ಇವನು ಗಾಯಕನಾಗಬೇಕೆಂಬ ಹಂಬಲವನ್ನು ನಡೆಸಿರುತ್ತಾನೆ. ಇದೆಲ್ಲ ಹುಚ್ಚು ಆ ಕವುಶಿಯದೆಸೆಯಿಂದ! ಇಂಥವನಿಗೆ ಅನುಭವದ ಹೊರತು ಎರಡನೇ ಔಷಧವಿಲ್ಲ. ಹಿತೋಪದೇಶವಂತೂ ಇವನಿಗೆ ವಿಷದಂತೆ ಭಾಸವಾಗುವದು. ಒಮ್ಮೆ ಇವನ ತಲೆಗೆ ಬಡೆದಬಳಿಕ ಇವನು ತನ್ನಿಂದ ತಾನೇ ಎಚ್ಚರಿಕೆಯ ಮೇಲೆ ಬರುವನು. ಅದಂತೂ ಇರಲಿ ತ್ರಾಟಿಕೆಯ ವರ್ಣನವನ್ನು ಕೇಳಿದಾರಭ್ಯ ಅವಳನ್ನು ಯಾವಾಗ್ಗೆ ನೋಡೇನೆಂದು ನನ್ನ ಮನಸ್ಸು ಹಾತೊರೆಯುತ್ತದೆ. ಮದುವೆ ಮಾಡಿಕೊಂಡರೆ ಇಂಥ ಹೆಂಡತಿಯನ್ನೇ ಮಾಡಿಕೊಂಡೇನು! ಗಂಧದ ಕಟ್ಟಿಗೆಯು ನೋಡಲಿಕ್ಕೆ ಸುಂದವು ಇರದಿದ್ದರೂ ಅದರೊಳಗಿನ ಪರಿಮಳವು ಹೇಗೆ ಕಡಿಮೆಯಾಗಿರುವದಿಲ್ಲವೋ? ಹಾಗೆ ಈ ತ್ರಾಟಿಕೆಯು ಅಂತರಂಗದ ಗುಣಗಳು ಇರಬಹುದು. ಇದರಲ್ಲಿ ಎಳ್ಳಷ್ಟು ಸಹ ಸಂಶಯವಿಲ್ಲ. ಏನಾಗುವದು ಆಗಲಿ. ನನ್ನ ದೈವಪರೀಕ್ಷೆಯನ್ನು ಮಾಡಿಬಿಡುತ್ತೇನೆ. ಆಕೆಯು ಎಂಥವಳಿದ್ದರೂ ನನ್ನ ಮುಂದೆ ಅವಳ ಆಟವು ಏನು ನಡೆದೀತು?

**ಭೀಮರಾವ** – ಇಷ್ಟೇನು ವಿಚಾರವನ್ನು ನಡೆಸಿರುತ್ತೀ? ನಿನಗೆ ನನ್ನ ಗೋಸ್ಕರ ಇಷ್ಟೊಂದು ಕೆಲಸವನ್ನು ಮಾಡಲಿಕ್ಕೆ ಆಗದಿದ್ದರೆ "**ಪುನರಾಗಮನಾಯಚ**" ಮಾಡು. ನಿನ್ನಂಥ ಅಳಬುರುಕನನ್ನು ನನ್ನ ರಾಹುತನಾಗಿ ನೇಮಿಸಲಿಕ್ಕೆ ನನ್ನ ಅಪೇಕ್ಷೆಯಿಲ್ಲ.

**ಪ್ರತಾಪರಾವ**—ನೀನು ಮೂರ್ಖನಂತೆ ಏಕೆ ತಿಳಿದುಕೊಳ್ಳುತ್ತೀ? ನಿನ್ನ ಕೆಲಸಕ್ಕೆ ಸಹಾಯ ಮಾಡಲು ನಾನೆಂದಾದರೂ ತಪ್ಪಬಹುದೇ?

**ನೀಲಾ**—(ಒತ್ತಟ್ಟಿಗೆ) ಯಾರಿಗಾದರೂ ಸಾತ್ವಿಕತನವನ್ನು ಕಲಿಯುವದಿದ್ದರೆ ಅವರು ಈ ನಮ್ಮಪ್ಪನ ಹತ್ತರ ಬಂದು ಬೇಕಾದಷ್ಟು ಕಲಿತುಕೊಂಡು ಹೋಗಬೇಕು! ಆ ಮುದುಕನನ್ನು ಠಕ್ಕಿಸಲಿಕ್ಕೆ ಇವರಿಬ್ಬರೂ ಹೇಗೆ ಹಂಚಿಕೆಯನ್ನು ಹಾಕಹತ್ತಿರುತ್ತಾರೆ! ಅದೂ ಏತರ ದೆಸೆಯಿಂದ? ಇಬ್ಬರಿಗೂ ಒಬ್ಬೊಬ್ಬ ಅಪ್ಪನವರು ಬೇಕೆಂಬುವ ದೆಸೆಯಿಂದ! ಅಪ್ಪನವರ ದೆಸೆಯಿಂದ ದೊಡ್ಡ ದೊಡ್ಡ ಗಂಡಸರು ಇದೇ ರೀತಿ ಸತ್ತು ಸುಣ್ಣಾಗುತ್ತಾರೆ. ಈ ಕೆಲಸದಲ್ಲಿ ಮುದುಕ ಭೀಮಪ್ಪನಿಗೆ ಪೂರಾ ಮಾನನಷ್ಟವಾಗದೆ

ಎಂದಿಗೂ ಉಳಿಯದು. ಆ ಚಿಕ್ಕ ಹುಡುಗಿಯು ಇವನನ್ನು ಎಂದೂ ಕಣ್ಣೆತ್ತಿ ಸಹ ನೋಡಲಿಕ್ಕಿಲ್ಲ. ಆಕೆಯು ಇವನಿಗೆ ಮೆಚ್ಚುವದಾದರೆ ನನಗೇಕೆ ಮೆಚ್ಚಲಿಕ್ಕಿಲ್ಲ ? ನಾನೇನು ಕೆಡಕಿದ್ದೇನೆ ? ( ಮೀಸಿಯ ಮೇಲೆ ಕೈ ಹಾಕುತ್ತಾನೆ. )

( ಬಾಪೂರಾಯನೂ ಪುರಾಣಿಕನ ವೇಷ ಧರಿಸಿದ ರಂಗರಾಯನೂ ಮಾತಾಡುತ್ತ ಬರುತ್ತಾರೆ. )

ಎಲೇ ಅಪ್ಪಾ, ಇವರು ಯಾರಿರಬಹುದು? ಧನಿಯರೇ ! ಇತ್ತಲಾಗಷ್ಟು ನೋಡಿರಿ. ಎಲೇ ನೀವು ಯಾರಿರೋ ? ಏಕೆ ಉತ್ತರ ಕೊಡುವದಿಲ್ಲ ? ನಿಮ್ಮ ಮೈಯೊಳಗೆ ಸೊಕ್ಕು ಬಂದಿರುತ್ತದೇನು ?

**ಭೀಮರಾವ**— ನೀಲಾ, ಸುಮ್ಮನಿರು ! ಅತ್ತ ಕಡೆಗೆ ನಿಂತಿರುವವನು ಕಮಲೆಯನ್ನು ನನಗೆ ಬಿಡಿಸಿ ತನಗೆ ಮದುವೆ ಮಾಡಿಕೊಳ್ಳಲಿಕ್ಕೆ ಓಡಾಡುವ ನನ್ನ ಪ್ರತಿಸ್ಪರ್ಧಿಯು ! ಪ್ರತಾಪರಾಯರೇ, ನಾವು ಒಂದು ಮಗ್ಗಲಿಗೆ ನಿಂತುಕೊಂಡು ಇವರು ಏನು ಆಲೋಚನೆಯನ್ನು ಮಾಡುತ್ತಾರೋ ಕೇಳೋಣ.

**ನೀಲಾ**—ಅಬಬ ! ಏನು ಇವನ ಪ್ರಾಯವು ತಿರುಗಿದ್ದೀತಪ್ಪಾ ? ಬಾಯೊಳಗೆ ನೋಡಿದರೆ ಒಂದೂ ಹಲ್ಲು ಕಾಣಿಸುವದಿಲ್ಲ. ಆದರೂ ಇವನ ಜಂಭ ನೋಡಿರಿ. ಪಾರಿವಾಳದಂತೆ ಎದೆ ಸೆಟಿಸಿಕೊಂಡು ಹೇಗೆ ನಡೆಯುತ್ತಾನೆ !

( ಮೂರೂ ಮಂದಿ ಒಂದು ಮಗ್ಗಲಿಗೆ ಹೋಗಿ ನಿಲ್ಲುತ್ತಾರೆ. )

**ಬಾಪೂರಾವ**—ಏನು ಯೋಗಾಯೋಗವು ಕೂಡಿತು ನೋಡಿರಿ! ನನಗೆ ನಿಮ್ಮದೇ ಅಗತ್ಯವಿತ್ತು. ಒಳ್ಳೇದು, ನಿಮ್ಮ ಹೆಸರೇನು ?

**ರಂಗರಾವ**—ನನಗೆ ಶಂಕರಶಾಸ್ತ್ರಿ ಪುರಾಣಿಕನೆನ್ನುತ್ತಾರೆ. ಕಾಶೀಕ್ಷೇತ್ರದಲ್ಲಿ ವಾಸಮಾಡುವ ಸುಪ್ರಸಿದ್ಧ ವಿದ್ಯಾಧರ ಶಾಸ್ತ್ರಿ ಮಹಾಮಹೋಪಾಧ್ಯಾಯರ ಬಳಿಯಲ್ಲಿ ಒಂದು ತಪದ ಮಟ್ಟಿಗೆ ಅಭ್ಯಾಸ ಮಾಡಿ ಅವರ ಆಶೀರ್ವಾದದಿಂದ " ನ್ಯಾಯತರ್ಕಾಲಂಕಾರ ಚೂಡಾಮಣಿ " ಎಂಬ ಬಿರುದು ಸಂಪಾದಿಸಿಕೊಂಡು ಬಂದಿರುತ್ತೇನೆ. ಉಳಿದ ಸಂಗತಿಗಳನ್ನು ನಿಮಗೆ ರಾಮಶಾಸ್ತ್ರಿಗಳು ತಮ್ಮ ಪತ್ರದಲ್ಲಿ ಬರೆದಿರಬಹುದು.

**ಬಾಪೂರಾವ —** ರಾಮಶಾಸ್ತ್ರಿಗಳ ಸಂಬಂಧವು ನಮ್ಮ ಮನೆತನಕ್ಕೆ ತಲತಲಾಂತರದಿಂದ ನಡೆದು ಬಂದಿರುತ್ತದೆ. ಇದು ನೋಡಿರಿ ! ನಾನು ನಿಮಗೆ ಕೇಶರ ಕಸ್ತೂರಿಗಳ ಸುಗಂಧವನ್ನು ಲೇಪನ ಮಾಡಿದಂಥ ಈ ಸಣ್ಣಪುಟ್ಟ ಪುರಾಣಗಳನ್ನು ಕೊಡುತ್ತೇನೆ. ಇವುಗಳ ಸುಗಂಧವು ನನ್ನ ಪ್ರಿಯಳ ಶ್ವಾಸೋಚ್ಛ್ವಾಸಗಳ ಸುಗಂಧಕ್ಕೆ ಎಷ್ಟು ಮಾತ್ರಕ್ಕೂ ಸರಿ ಬಾರವು. ಆದಾಗ್ಯೂ ಈ ಪುರಾಣಗಳಿಗೆ ನನ್ನ ಪ್ರಿಯಳ ಹಸ್ತಸ್ಪರ್ಶವಾದರೆ ಸಾಕು. ನಾನು ಧನ್ಯನಾಗುವೆನು. ಅವಳಿಗೆ ನೀವು ಪುರಾಣಶ್ರವಣ ಮಾಡಿಸುವಾಗ್ಗೆ ಮದನತಾಪದ ಗೌರವವನ್ನು ಮಾತ್ರ ಹೇಳುತ್ತಿರಬೇಕು. ನೀವು ರಾಧಾಕೃಷ್ಣನ ಮನೋಹರ ಚರಿತ್ರವನ್ನು ಅವಳ ಮನಸ್ಸಿನ ಮೇಲೆ ಚೆನ್ನಾಗಿ ಬಿಂಬಿಸಿರಿ. ಅದನ್ನು ಶ್ರವಣಮಾಡಿದ ಮಾತ್ರದಿಂದ ಅವಳು ಈ ಬಾಪೂರಾಯನ ಸಹವಾಸವನ್ನೇ ಬಯಸಿರಬೇಕು. ಹೀಗೆ ದಯಮಾಡಿ ಅವಳಿಗೆ ಆ ಚರಿತ್ರದ ಮರ್ಮವನ್ನು ಉತ್ತಮ ರೀತಿಯಿಂದ ತಿಳಿಸಿಕೊಡತಕ್ಕದ್ದು. ನೀವು ಅವಳಿಗೆ ಯಾವ ಯಾವ ಆಖ್ಯಾನಗಳನ್ನು ಕಲಿಸಬೇಕೆಂದು ಅಪೇಕ್ಷಿಸಿರುವಿರಿ ? ಹೇಳಿರಿ. ನೋಡೋಣ.

**ಭೀಮರಾವ—** ಪ್ರತಾಪರಾವ, ಈ ಚಮತ್ಕಾರದ ಯುಕ್ತಿಯನ್ನು ನೋಡಿದೇನು? ಈ ಬುದ್ಧಿವಂತನು ಎರಡನೆಯವರ ಮಧ್ಯಸ್ಥಿಕೆಯಿಂದ ತನ್ನ ಕೆಲಸವನ್ನು ಸಾಧಿಸಿಕೊಳ್ಳಬೇಕೆನ್ನುತ್ತಾನೆ. ಆದರೆ ಇಂಥ ಸೂಕ್ಷ್ಮ ಕೆಲಸವನ್ನು ನಾನು ಮಾತ್ರ ಎರಡನೆಯವರಿಗೆ ಎಂದೂ ಒಪ್ಪಿಸಲಿಕ್ಕಿಲ್ಲ.

**ನೀಲಾ—**(ತನ್ನಷ್ಟಕ್ಕೆ) ಈ ಮುದುಕನು ತೀರಾ ಹುಚ್ಚನಾಗಿ ಹೋಗಿರುತ್ತಾನೆ. ಈ ಹರೆಯದ ಪುರಾಣಿಕನು ಇವನ ಸಲುವಾಗಿ ಎಂದಿಗೆ ಮಧ್ಯಸ್ಥಿಕೆ ಮಾಡಿಯಾನು? ಅವನು ನಡುವಿಂದ ನಡುವೆ ತಾನೇ ತನ್ನ ಕಾರ್ಯ ಸಾಧಿಸಿಕೊಳ್ಳದೆ ಹೋದರೆ ನನ್ನ ಹೆಸರು 'ನೀಲ' ಎಂದು ಕರೆಯಬೇಡಿರಿ.

**ರಂಗರಾವ—**ರಾಯರೇ ! ನೀವು ಅದರ ಬಗ್ಗೆ ಎಳ್ಳಷ್ಟು ಸಹ ಚಿಂತೆ ಮಾಡಬೇಡಿರಿ. ನಿಮ್ಮ ಕೆಲಸವು ನನ್ನದೇ ಎಂದು ತಿಳಿದು ನಾನು ಅದನ್ನು ಮನಃಪೂರ್ವಕವಾಗಿ ಮಾಡುತ್ತೇನೆ. ನೀವು ಸ್ವತಃ ಆ ಕೆಲಸವನ್ನು ಮಾಡಲಿಕ್ಕೆ ಹೋದರೂ ಅದು ನಿಮ್ಮಿಂದ ಅಷ್ಟು ನೆಟ್ಟಗೆ ಆಗಲಿಕ್ಕಿಲ್ಲ.

**ಬಾಪೂರಾವ—** ಹೌದು, ನಿಮ್ಮ ಮಾತು ಯೋಗ್ಯವಿರುತ್ತದೆ. ನನ್ನಲ್ಲಿ ನಿಮ್ಮಷ್ಟು ಬುದ್ಧಿಚಾತುರ್ಯವು ಎಲ್ಲಿಂದ ಬರಬೇಕು ?

**ನೀಲಾ**—ಮತ್ತೆ ನಿನಗೆ ಕತ್ತೆಯಷ್ಟಾದರೂ ಬುದ್ಧಿ ಇರುತ್ತದೇನು ?

**ಪ್ರತಾಪರಾವ**—ನೀಲಾ, ಬಾಯಿ ಮುಚ್ಚು.

**ಭೀಮರಾವ** —( ಮುಂದಕ್ಕೆ ಬಂದು ) ನಮಸ್ಕಾರ ಬಾಪೂರಾಯರೇ.

**ಬಾಪೂರಾವ** — ನಮಸ್ಕಾರ. ಒಳ್ಳೇ ಹೊತ್ತಿಗೆ ಬಂದಿರಿ. ನನಗೆ ಈಗ ಏಕೆ ಅತ್ಯಾನಂದವಾಗಿರುತ್ತದೆಂಬುದು ನಿಮ್ಮ ಲಕ್ಷ್ಯಕ್ಕೆ ಬಂದಿತೇನು? ಹೇಳಿರಿ, ನೋಡೋಣ. ಬಹಳ ಮಾಡಿ ಬಂದಿರಲಿಕ್ಕಿಲ್ಲ. ಇದು ನೋಡಿರಿ. ನನ್ನ ಸುಂದರಾಂಗಿಗೆ ಪುರಾಣವನ್ನು ಹೇಳಲಿಕ್ಕೆ ಈ ಪುರಾಣಿಕನನ್ನು ದೊರಕಿಸಿರುತ್ತೇನೆ. ಇವನು ನೋಡಲಿಕ್ಕೆ ಚಿಕ್ಕವನು ಕಂಡಾಗ್ಯೂ ಬಹಳ ಪಂಡಿತನಿರುತ್ತಾನೆ.

**ಭೀಮರಾವ** ಅಂತೂ ನೀವು ನಿಮ್ಮ ಕುದುರೆಯನ್ನು ನನ್ನಕಿಂತ ಬಹು ವೇಗದಿಂದ ಓಡಿಸುತ್ತಿದ್ದೀರಿ ! ಅಂದಮೇಲೆ ನಾನಂತೂ ಹಿಂದೇ ಉಳಿಯ ಬೇಕಾದೀತು ! ಅದಿರಲಿ. ನನ್ನ ಹತ್ತಿರ ಇವರು ಯಾರಿರುತ್ತಾರೆಂಬುದನ್ನು ಮೊದಲಿಗೆ ಚೆನ್ನಾಗಿ ಪರೀಕ್ಷಿಸಿ ನೋಡಿರಿ.

**ಬಾಪೂರಾವ**—ಉಃ. ನಮ್ಮಂತೆಯೇ ಕಮಲೆಯ ದೆಸೆಯಿಂದ ನಿಶ್ಚಯ ಮಾಡಿಕೊಳ್ಳಲಿಕ್ಕೆ ಯಾರಾದರೂ ಬಂದಿರಬಹುದು. ನನಗೆ ಇನ್ನುಮೇಲೆ ಇಂಥವರ ದೆಸೆಯಿಂದ ಅಂಜಿಕೆಯೇ ಉಳಿದಿಲ್ಲ. ಇನ್ನೂ ನೂರಾರು ಮಂದಿ ಬಂದು ಪ್ರಯತ್ನ ಮಾಡಲಿ.

**ಭೀಮರಾವ**—ನಿಮ್ಮ ತರ್ಕವು ಪೂರ್ಣವಾಗಿ ತಪ್ಪಿತು. ನಾನೇನೂ ನನ್ನ ಕಾಲ ಮೇಲೆ ಕಲ್ಲು ಚೆಲ್ಲಿಕೊಳ್ಳುವಂಥ ಮೂರ್ಖಚಿಂತಾಮಣಿಯಲ್ಲ. ಇವರು ತ್ರಾಟಿಕಮ್ಮನವರಿಗೋಸ್ಕರ ಬಂದಿರುತ್ತಾರೆ. ತಿಳಿಯಿತೇನು ?

**ಬಾಪೂರಾವ**—ನಿಜವಾಗಿ ಇವರು ಆ ತ್ರಾಟಿಕೆಯನ್ನು ಲಗ್ನ ಮಾಡಿಕೊಳ್ಳಲಿಕ್ಕೆ ಬಂದಿರುತ್ತಾರೋ ? ನನಗಂತೂ ನಿಜವೆಂದು ತೋರುವದಿಲ್ಲ !

**ನೀಲಾ**—(ತನ್ನಷ್ಟಕ್ಕೆ) ಈ ಮುದುಕನಿಗೆ ಆ ಹರೆಯದ ಹುಡುಗಿಯು ತನ್ನನ್ನು ಮದುವೆ ಮಾಡಿಕೊಳ್ಳುತ್ತಾಳೆಂಬುದು ಮಾತ್ರ ನಿಜವಾಗಿ ಕಂಡಿದ್ದೀತಷ್ಟೇ ?

**ಪ್ರತಾಪರಾವ**—ನಿಮಗೆ ಹೀಗೇಕೆ ಸಂಶಯವು ಬಂದಿತು ? ಅವಳು ಜಗಳಗಂಟೆಯು, ಹಟಮಾರಿಯು ಎಂಬದಿಷ್ಟೇ ಕಾರಣವು ಹೌದಲ್ಲೋ ? ಉಃ. ಅದರಲೇನದೆ ?

**ಬಾಪೂರಾವ**—(ನಕ್ಕು) ಛೆ. ಛೆ. ಅದರಲ್ಲೇನೂ ಇಲ್ಲ. ಒಂದು ಸ್ವಲ್ಪೇ ಅಂಜಿಕೆಯದೆ ! ರಾಯರೇ, ನೀವು ಎಲ್ಲಿಯವರು ?

**ಭೀಮರಾವ**—ಇವರ ವೃತ್ತಾಂತವನ್ನು ನಾನು ನಿಮಗೆ ಹಿಂದುಗಡೆ ತಿಳಿಸುವೆನು.

**ಪ್ರತಾಪರಾವ**—ನನ್ನ ಊರು ತೆಗೆದುಕೊಂಡು ನೀವು ಏನುಮಾಡುತ್ತೀರಿ? ನನ್ನ ಮನಸ್ಸಿನಲ್ಲಿ ಅವಳ ಕೂಡ ಲಗ್ನ ಮಾಡಿಕೊಂಡು ದೇವರ ಆಶೀರ್ವಾದದಿಂದ ದೀರ್ಘಾಯುಷ್ಯವನ್ನೂ ಯಥೇಚ್ಛ ಸುಖವನ್ನೂ ಭೋಗಿಸಬೇಕೆಂದಿರುತ್ತದೆ.

**ಬಾಪೂರಾವ**—ದೇವರು ನಿಮ್ಮ ಇಚ್ಛೆಯನ್ನು ತೃಪ್ತಬಡಿಸಲಿ. ಅದರಿಂದ ನನಗೆ ಸಂತೋಷವೇ ಆಗುವದು. ಆದರೆ ಆ ದೆವ್ವನ್ನು ನೀವು ಲಗ್ನ ಮಾಡಿಕೊಂಡರ ನಿಮಗೆ ಸೌಖ್ಯವು ದೊರಕುವ ಮಾತು ಒಂದು ಬದಿಗೆ ಉಳಿದು, ನಿಮಗೆ ಬೇಗನೆ ಹೊಟ್ಟೆ ಬೇನೆಯು ಹತ್ತಿ, ನಿಮ್ಮ ಆಯುಷ್ಯವು ಕ್ಷೀಣವಾದೀತೆಂದು ನನಗೆ ಭಯವು ಹುಟ್ಟುತ್ತದೆ.

**ಪ್ರತಾಪರಾವ**—ನೀವಂತೂ ಬಹಳ ಸಂಶಯದವರು ಕಾಣುತ್ತೀರಿ. ನನಗೆ ನನ್ನ ಜೀವ ಬೇಡಾಗಿರುತ್ತದೇನು ? ನನ್ನಲ್ಲಿ ಅಷ್ಟೊಂದು ಧೈರ್ಯವೂ ಶಕ್ತಿಯೂ ಇಲ್ಲದಿದ್ದರೆ ನಾನೇಕೆ ಈ ಸಾಹಸಕಾರ್ಯವನ್ನು ಮಾಡಲಿ ? ಸಿಂಹನ ಭಯಂಕರ ಗರ್ಜನೆಗಾಗಲಿ, ಸಮುದ್ರದ ತುಫಾನಿನ ಸಪ್ಪಳಕ್ಕಾಗಲಿ, ರಣಯಜ್ಞದಲ್ಲಿ ಸೈನಿಕರು ಮಾಡುವ ಭಯಂಕರ ಕೂಗುಗಳಿಗಾಗಲಿ, ನೂರಾರು ಜನರ ಪ್ರಾಣಗಳ ಆಹುತಿಯನ್ನು ತೆಗೆದುಕೊಳ್ಳುವ ತೋಫುಗಳಿಗಾಗಲಿ, ಅಂಜದೆ ಇರುವ ಈ ವೀರನು ಸ್ತ್ರೀಯಳ ಒದರಾಟಕ್ಕೆ ಅಥವಾ ಜಗಳಕ್ಕೆ ಹೆದರುವನೇ !

**ನೀಲಾ**—( ಒತ್ತಟ್ಟಿಗೆ ) ನಮ್ಮ ಧನಿಯು ಆಡಿದ ಜಂಭದ ಮಾತು ಕೇಳಿ ಈ ಮುದುಕನು ಅಂಜಿ ನಡುಗಲಿಕ್ಕೆ ಹತ್ತಿರುತ್ತಾನೆ.

**ಬಾಪೂರಾವ**—ನೀವು ಮಾತಿನಲ್ಲಿ ಮಾತ್ರ ಬಹಳ ಧೈರ್ಯವಂತರು ಕಾಣಿಸುತ್ತೀರಿ. ಮಾತಿನಂತೆ ನಿಮ್ಮ ಕೃತಿಯಲ್ಲಿ ಧೈರ್ಯವಿರುವದು ಅಗತ್ಯವಾದದ್ದು. ನೀವು ಈಗ ಎಷ್ಟು ಪೌರುಷ ಹೇಳಿದಾಗ್ಯೂ ನಿಮಗೆ ತ್ರಾಟಿಕವ್ವನ

ಗಂಟುಬಿದ್ದ ತರುವಾಯ ನಿಮ್ಮ ಎದೆಯು ಒಡಿದು ನೀರಾಗದೆ ಎಂದಿಗೂ ಉಳಿಯು ಲಿಕ್ಕಿಲ್ಲವೆಂದು ನಾನು ನಿಶ್ಚಯವಾಗಿ ಹೇಳುತ್ತೇನೆ.

**ಭೀಮರಾವ**— (ಅಂಜಿ) ಆ—ಆಕೆಯು ಇಲ್ಲಿಯೇ ಬರುತ್ತಾಳೋ ? ಪ್ರತಾಪರಾವ, ಬಹಳ ಎಚ್ಚರಿಕೆಯಿಂದಿರು. ( ಅವನ ಹಿಂದೆ ಹೋಗಿ ಅಡಗಿಕೊಳ್ಳುತ್ತಾನೆ. )

**ಪ್ರತಾಪರಾವ**— (ನಕ್ಕು) ಎಲೋ ಹುಚ್ಚಾ, ಇಷ್ಟೇಕೆ ಅಂಜುತ್ತೀ? ಶಹಬಾಸ ತ್ರಾಟಿಕೇ ! ಇದರಮೇಲಿಂದ ನಿನ್ನಲ್ಲಿ ನಿಜವಾಗಿಯೇ ನೀರು ಇರುತ್ತದೆಂದು ಕಾಣುತ್ತದೆ. ಒಳ್ಳೇದು. ( ಬಾಪೂರಾಯನಿಗೆ ) ನಮ್ಮ ನಿಮ್ಮ ಒಣ ಮಾತಿನಿಂದ ಪ್ರಯೋಜನವೇನು ? ಬೇಕಾದರೆ (೫೦೦) ರೂಪಾಯಿ ಜಿದ್ದು ಕಟ್ಟೋಣ.

**ಬಾಪೂರಾವ**— ಒಡಂಬಟ್ಟೆ. ನೀವು ಗೆದ್ದರೆ ನಾನು ಐದು ನೂರು ರೂಪಾಯಿ ಬಿಟ್ಟು ಐದು ಸಾವಿರ ರೂಪಾಯಿ ಕೊಡುತ್ತೇನೆ.

**ನೀಲಾ** (ಒತ್ತಟ್ಟಿಗೆ) ಈ ಹುಚ್ಚನು ಸುಮ್ಮನೆ ರೂಪಾಯಿ ಕಳಕೊಳ್ಳುತ್ತಾನೆ. ಇಷ್ಟು ರೂಪಾಯಿ ಇವನು ನನಗಾದರೂ ಕೈ ಎತ್ತಿ ಕೊಡಬಾರದೇ ?

( ಉತ್ತಮವಾದ ಉಡುಪು ಹಾಕಿದಂಥ ವೆಂಕಣ್ಣನಾಯಕನೂ 'ತಮ್ಮ'ನೂ ಬರುತ್ತಾರೆ. )

**ವೆಂಕಣ್ಣನಾಯಕ**— ದಾರಿಯೊಳಗೆ ನಿಂತಿರುವ ಸಭ್ಯಗೃಹಸ್ಥರೇ ! ನೀವು ಯಾರಾದರೂ ನನಗೆ ಲಕ್ಷ್ಮೀಪತಿರಾಯನ ಮನೆಗೆ ಹೋಗುವ ಸಮೀಪದ ದಾರಿಯನ್ನು ತೋರಿಸಿದರೆ ನಿಮ್ಮ ಉಪಕಾರವು ನನ್ನ ಮೇಲೆ ಬಹಳವಾಗುವದು.

**ಬಾಪೂರಾವ**—ನಿಮಗೆ ಆ ಮನೆಯ ದಾರಿಯು ಏಕೆ ಬೇಕಾಗಿರುತ್ತದೆ? ನೀವು ಒಂದು ವೇಳೆ ಆಕೆಯಗೋಸ್ಕರ—

**ವೆಂಕಣ್ಣನಾಯಕ**—ಆಕೆಯಗೋಸ್ಕರ ಇರಲಿ; ಅಥವಾ ಅವನಿಗೋಸ್ಕರ ಇರಲಿ. ನಿಮಗೆ ಏಕೆ ಅದರ ಉಸಾಬರಿ ? (ತುಸುಹೊತ್ತು ನಿಂತು) ಇದೇ ದಾರೀ ಹಿಡಿದು ಮುಂದೆ ಹೋಗೋಣ. ಊರ ಉಸಾಬರಿ ಬಡೆಯುವ ಈ ನಿರುದ್ಯೋಗೀ ಜನರ ಸಂಗಡ ಮಾತಾಡುತ್ತ ನಿಂತುಕೊಳ್ಳಲಿಕ್ಕೆ ನನಗಂತೂ ಅವಕಾಶವಿಲ್ಲ.

**ರಂಗರಾವ**—( ಒತ್ತಟ್ಟಿಗೆ ) ಶಹಬಾಸ ವೆಂಕಣ್ಣನಾಯಕಾ ! ಆರಂಭವನ್ನಂತೂ ನೆಟ್ಟಗೆ ಮಾಡಿದೆ.

**ಬಾಪೂರಾವ**— ಎಲೋ ರಾಜಶ್ರೀಯೇ ! ಆ ಲಕ್ಷ್ಮೀಪತಿರಾಯನ ಚಿಕ್ಕ ಮಗಳ ಮೇಲೆ ನಿನ್ನ ಕಣ್ಣಿರುತ್ತದೆಂದು ಕಾಣುತ್ತದೆ !

**ವೆಂಕಣ್ಣನಾಯಕ**—ಇದ್ದರೆ ಮುಂದೇನು ?

**ಬಾಪೂರಾವ**—ನೀವು ಬಂದ ದಾರಿಯಿಂದ ಸುಮ್ಮನೆ ತಿರುಗಿ ಹೋದರೆ ತೀರಿತು. ಮುಂದೇನೂ ಇಲ್ಲ. (ಅಂಗಿಯ ತೋಳು ಹಿಂದಕ್ಕೆ ಸರಿಸಿ ಮೀಶಿಯನ್ನು ಹುರಿ ಮಾಡುತ್ತಾನೆ.)

**ವೆಂಕಣ್ಣನಾಯಕ**—ನೀವು ವಿಕ್ಷಿಪ್ತರೆಂಬುವಂತೆ ಕಾಣುತ್ತದೆ. ಈ ದಾರಿಯು ನಿಮ್ಮ ಉಪಯೋಗದ ಸಲುವಾಗಿಯೇ ಇರುತ್ತದೆಂದು ನಿಮಗೆ ಯಾರಾದರೂ ಬರಕೊಟ್ಟಿರುತ್ತಾರೋ ?

**ಬಾಪೂರಾವ** - (ಕಣ್ಣು ಹಿಗ್ಗಿಸಿ ಮತ್ತು ಒದರಿ ) ಈ ದಾರಿಯು ನಿಮಗೆ ತೆರವಿರುತ್ತದೆ. ಆದರೆ ಆಕೆಯು ಮಾತ್ರ ನಿಮಗೆ ತೆರವಿಲ್ಲ.

**ನೀಲಾ**—(ಒತ್ತಟ್ಟಿಗೆ) ಈ ಮುಮುಕನ ಧೈರ್ಯ ಎಷ್ಟಿರುತ್ತದೆ! ನೋಡಿರಿ. ಇವನು ಹರೆಯದವನು ಆಗಿದ್ದರೆ ಎಲ್ಲರನ್ನೂ ನುಂಗಿ ನೀರು ಕುಡಿಯುತ್ತಿದ್ದನು.

**ವೆಂಕಣ್ಣನಾಯಕ**— ಏಕೆ ? ಆಕೆಯ ಲಗ್ನವಾಯಿತೇನು ?

**ಬಾಪೂರಾವ**— ಇನ್ನೂ ಲಗ್ನವಾಗಿಲ್ಲ. ಆದರೆ ಆಕೆಯು ನನ್ನ ಪ್ರೀತಿ ಪಾತ್ರಳು. ನಾನೇ ಆಕೆಯನ್ನು ಲಗ್ನ ಮಾಡಿಕೊಳ್ಳುವವನು. ನಿಮಗೆ ಪ್ರಾಯದ ಗರ್ವವು ಇರಬಹುದು. ಆದರೆ ನಾನು ಇಷ್ಟು ದಿವಸ ಗರಡೀಸಾಧಕ ಮಾಡಿದ್ದೇನೂ ಹುಡುಗಾಟಿಕೆಯಲ್ಲ. ನಿಮ್ಮಂಥವರಿಗೆ ನಾನು ಕೈ ಹಿಡಿದರೆ ಕೈ ಬಿಡಿಸಿಕೊಳ್ಳುವದು ಆಗಲಿಕ್ಕಿಲ್ಲ. ಧೈರ್ಯವಿದ್ದರೆ ನನ್ನ ಮುಂದೆ ಬನ್ನಿರಿ. ಒಂದು ಸಾರೆ ನನ್ನ ಸಂಗಡ ಕುಸ್ತಿಯಾಡಿರಿ. ಈ ಕ್ಷಣವೇ ಬನ್ನಿರಿ. (ಎಂದು ತೊಡೆಯನ್ನು ಚಪ್ಪರಿಸಿಕೊಳ್ಳುತ್ತಾನೆ.) ಗೆದ್ದವರು ಕಮಲೆಯನ್ನು ಲಗ್ನಮಾಡಿಕೊಳ್ಳಬೇಕು.

**ವೆಂಕಣ್ಣನಾಯಕ**—(ನಗುತ್ತ) ಅಬಬ, ಎಷ್ಟಾರೆ ಜಂಭ! ನಿಮ್ಮ ಬಾಯಿ ಹೆದರಿಕೆಗೆ ನಾನು ಅಂಜುವ ಮನುಷ್ಯನಲ್ಲ. ನಿಮ್ಮಂಥವರು ನೂರು ಜನರು ಬಂದು ನನ್ನ ದಾರಿಯನ್ನು ಕಟ್ಟಿದರೂ ನಿಮ್ಮನ್ನೆಲ್ಲ ಮೊಳಕೈಯಿಂದ ಸರಿಸಿ ಹೋಗುವಷ್ಟು ಸಾಮರ್ಥ್ಯವನ್ನು ನನಗೆ ದೇವರು ಕೊಟ್ಟಿದ್ದಾನೆ. (ಎಂದು ಬಾಪೂರಾಯನನ್ನು ಸರಿಸಿ ಮುಂದಕ್ಕೆ ಹೋಗುತ್ತಾನೆ.)

**ರಂಗರಾವ**—ಬಾಪೂರಾವ, ಹೋಗಲಿ ಬಿಡಿರಿ. ಈ ಹರೆಯದ ಜನರು ಹಟಮಾರಿಗಳು. ಅವರು ಹಿಂದೆಮುಂದೆ ಏನೂ ನೋಡುವವರಲ್ಲ. ಅವರು

ಮುಂದೆ ಹೋಗಿ ಯಾತಕ್ಕಾದರೂ ಬಡಿಸಿಕೊಂಡು ಕಪಾಳ ಮೋಕ್ಷ ಮಾಡಿಕೊಂಡರೂ ಹೆದರುವವರಲ್ಲ. ಸುಮ್ಮನೆ ದಾರಿ ಬಿಟ್ಟು ಬಿಡಿರಿ.

**ಪ್ರತಾಪರಾವ**-(ವೆಂಕಣ್ಣನಾಯಕನಿಗೆ) ಏನಿರಿ, ಸ್ವಲ್ಪ ತಡೆಯಿರಿ. ಆ ಲಕ್ಷ್ಮೀಪತಿರಾಯನ ಹಿರಿಯಮಗಳ ಲಗ್ನವು ಆಗುವ ಮುಂಚೆ ಚಿಕ್ಕವಳ ಲಗ್ನವು ಆಗುವದಿಲ್ಲೆಂಬದನ್ನು ನೀವು ಕೇಳಿರಬಹುದು.

**ವೆಂಕಣ್ಣನಾಯಕ**—ಹೌದು. ಆದರೆ ಆ ಹಿರಿಯಳನ್ನು ಯಾರು ಲಗ್ನ ಮಾಡಿಕೊಳ್ಳುವವರಿದ್ದಾರೆ ?

**ಬಾಪೂರಾವ**—ಆ ಹಿಡಂಬಿಯನ್ನು ಲಗ್ನ ಮಾಡಿಕೊಳ್ಳಲಿಕ್ಕೆ ಭೀಮಸೇನನೇ ಬೇಕು. ಈ ಪ್ರತಾಪರಾಯನು ಆ ಸಾಹಸದ ಕೆಲಸವನ್ನು ಮಾಡುತ್ತೇನೆಂದು ಅನ್ನುತ್ತಾನೆ.

**ವೆಂಕಣ್ಣನಾಯಕ**—ಹಾಗಾದರೆ ನಮ್ಮೆಲ್ಲರ ದೈವವು ನಿಮ್ಮ ಕೈಯಲ್ಲಿಯೇ ಉಂಟು.

**ಭೀಮರಾವ**—ಅದುದರಿಂದ ನಾವೆಲ್ಲರೂ ಕೂಡಿ ಇವರ ಅಭೀಷ್ಟ ಚಿಂತನ ಮಾಡೋಣ.

**ವೆಂಕಣ್ಣ**—ವ್ಹಾಃ ಬಹಳ ಉತ್ತಮವು. ನನಗೆ ನಿಮ್ಮ ಗುರತು ಆದದ್ದು ಅಲಭ್ಯ ಲಾಭವಾದಂತಾಯಿತು. ಹಾಗಾದರೆ ಈ ಹೊತ್ತು ಸಾಯಂಕಾಲಕ್ಕೆ ನಮ್ಮ ಮನೆಗೆ ಚಹಾಪಾನಕ್ಕೆ ಬನ್ನಿರಿ.

**ಪ್ರತಾಪರಾವ**—ಮೊದಲಿಗೆ ಇಲ್ಲೇ ಒಳಗೆ ಬನ್ನಿರಿ. ಭೀಮರಾವ, ಇವರೆಲ್ಲರನ್ನು ಒಳಗೆ ಕರೆದುಕೊಂಡು ನಡೆ. ಎಲ್ಲರದೂ ಗುರುತು ಆಯಿತು. ಆದುದರಿಂದ ಎಲ್ಲರು ಚಹಾ ಕುಡಿದು ಹೋಗಲಿ.

( ಎಲ್ಲರೂ ಒಳಗೆ ಹೋಗುತ್ತಾರೆ. )

---

# ಅಂಕ ೨ನೇದ್ದು.

## ೧ನೇ ಪ್ರವೇಶ—ಲಕ್ಷ್ಮೀಪತಿರಾಯನ ಮನೆ.

( ತ್ರಾಟಿಕೆಯೂ ಕಮಲೆಯೂ ಬರುತ್ತಾರೆ. )

**ಕಮಲೆ**—ಅಕ್ಕಾ, ನನ್ನ ಕೈ ಬಿಡು. ಈ ಪ್ರಕಾರ ನನಗೆ ಏಕೆ ಪೀಡಿಸುವೆ ? ನಾನು ನಿನಗೇನು ಕೇಡು ಮಾಡಿರುತ್ತೇನೆ ? ಸೊಂಡ ಮೂಗಿನವಳಾಗಿ ಇದ್ದರೂ ಚಿಂತಿಲ್ಲ, ಸಣ್ಣ ಮಗಳಾಗಿ ಮಾತ್ರ ಎಂದಿಗೂ ಇರಲಾಗದು, ಕಂಡಿಯಾ?

**ತ್ರಾಟಿಕಾ**—ಹ. ಹ. ನನಗೆ ಸೊಂಡ ಮೂಗಿನವಳೆಂದು ಚೇಷ್ಟೆ ಮಾಡುತ್ತೀಯಾ ? ನಿನ್ನ ಮೂಗು ಬಹಳ ಏರೇರಿ ಬರಲಿಕ್ಕೆ ಹತ್ತಿರುತ್ತದೆ. ಅದನ್ನು ಸ್ವಲ್ಪ ಕುಕ್ಕುರಿಸುತ್ತೇನೆ ತಡೆ. ( ಎಂದು ಆಕೆಯ ಕೈಗಳನ್ನು ಗಟ್ಟಿಯಾಗಿ ಹಿಡಿದು ವ ಗು ಹಿಂಡುತ್ತಾಳೆ. )

**ಕಮಲೆ**—ಅಯ್ಯೋ ! ಏನಿದು ಚೇಷ್ಟೆ ! ಅಕ್ಕಾ, ನನ್ನ ಮೇಲೆ ನಿನ್ನ ಸಿಟ್ಟು ಇಷ್ಟೊಂದು ಏಕೆ ? ನನ್ನ ಕೈ ಇಷ್ಟೊಂದು ಒತ್ತಿ ಹಿಡಿಯಬೇಡ. ಇದು ನೋಡು, ನನ್ನ ಕೈಗೆ ರಕ್ತ ಸಹ ಬಂತು. ಅಪ್ಪನು ನಿನ್ನ ಸಲುವಾಗಿಯೇ ನನ್ನನ್ನು ಮನೆಯಲ್ಲಿ ಪ್ರತಿಬಂಧನದೊಳಗಿಟ್ಟಿರುತ್ತಾನೆ. ಆ ಬಗ್ಗೆ ನಾನು ಇಷ್ಟು ದಿವಸ ನಿನಗೆ ಒಂದಾದರೂ ಶಬ್ದವನ್ನು ಮಾತಾಡಿದೆನೇ ? ನಿನಗೇನು ಬೇಕೆಂಬದನ್ನು ನನಗೆ ಒಡೆದು ಹೇಳು. ಈ ಪ್ರಕಾರ ನನ್ನನ್ನು ಏಕೆ ಸಣ್ಣಾಗಿ ನಡೆಸಿಕೊಳ್ಳುತ್ತೀ ?

**ತ್ರಾಟಿಕಾ**—ಅಲಲಲ, ಎಷ್ಟು ನೀನು ಸಣ್ಣಾಗಿ ನಡೆದು ಸೊರಗಿದಿಯಲ್ಲ! ಎಲವುಗಳೆಲ್ಲ ಹೊರಟು ಹೋಗಿ ಮಾಂಸ ಮಾತ್ರ ಉಳಿದಿರುತ್ತದೆ ! ನಮ್ಮ ಅಪ್ಪನವರು ಇಷ್ಟು ಏಕೆ ಸೊರಗಿರುತ್ತಾರೆಂಬದರ ಕಾರಣವು ನನಗೆ ಇನ್ನೂ ವರೆಗೆ ತಿಳಿದಿದ್ದಿಲ್ಲ ! ಈಗ ತಿಳಿಯಿತು ! ನಿನ್ನ ಗಲ್ಲಗಳು ಎಷ್ಟು ಕೂತು ಹೋಗಿರುತ್ತವೆ ನೋಡಿದಿಯಾ ? ( ಗಲ್ಲವನ್ನು ಹಿಂಡುತ್ತಾಳೆ. )

**ಕಮಲಾ**—ಅಪ್ಪನು ನನಗೆ ಬೇಗನೆ ಲಗ್ನಮಾಡಿಕೊಟ್ಟರೆ ಒಳ್ಳೇದೇ ಸರಿ. ಈಕೆಯ ಉಪದ್ರವವಾದರೂ ನನಗೆ ತಪ್ಪೀತು.

**ತ್ರಾಟಿಕಾ**—ನೀನು ಎಷ್ಟು ನಿರ್ಲಜ್ಜೆಯಾದಿಯೋ ? ಲಗ್ನದ ಗೊಡವೆಯು ನಿನಗೆ ಇಷ್ಟರಲ್ಲಿ ಏಕೆ ಬೇಕಾಗಿರುತ್ತದೆ ? ಯಾರನ್ನಾದರೂ ಕೈ ಹಿಡಿದುಕೊಂಡು ಓಡಿ ಹೋಗತಕ್ಕ ವಿಚಾರವನ್ನು ನಡೆಸಿಲ್ಲವಷ್ಟೇ ? ಬಂಗಾರವ್ವಾ ! ಅಪ್ಪನ ಪ್ರೀತಿಯು ನಿನ್ನ ಮೇಲೆ ಇಷ್ಟಿದ್ದರೂ ನನ್ನ ಲಗ್ನ ಆಗದೆ ನಿನ್ನ ಲಗ್ನವೆಲ್ಲಿ ಆಗುತ್ತದೆ ? ನಾನಂತೂ ಲಗ್ನವನ್ನೇ ಮಾಡಿಕೊಳ್ಳಬಾರದೆಂದು ನಿಶ್ಚಯಮಾಡಿರುತ್ತೇನೆ.

**ಕಮಲಾ**—ರಂಗಕ್ಕಾ, ನಾನೇನೂ ಲಗ್ನಕ್ಕಾಗಿ ಇಷ್ಟೊಂದು ಆತುರಬಡುವದಿಲ್ಲ. ನಿನ್ನೊಬ್ಬಳದೇ ಲಗ್ನವು ಹೇಗಾದರೂ ಒಮ್ಮೆ ಆದರೆ ಸಾಕು. ದ್ರಾಕ್ಷೆಗಳು ಸಿಗದಂತೆ ಆದ ಕೂಡಲೆ ಅವುಗಳನ್ನು ಹುಳಿಯೆಂದು ಧಿಕ್ಕರಿಸುವದೇ ಸೈ.

**ತ್ರಾಟಿಕಾ**—ಏಕೆ? ನಾಲಿಗೆಯನ್ನು ಬಹಳ ಉದ್ದ ಮಾಡುತ್ತೀ! ಬೇಕೇನು ಬಿಸಿ ಬಿಸಿ ಕಡಬು ? ( **ಅವಳ ಬೆನ್ನ ಮೇಲೆ ಗುದ್ದುತ್ತಾಳೆ** ) ಹಾ. ಬಾಯಿ ಮುಚ್ಚು. ಅಳುವ ಕಾರಣವಿಲ್ಲ. ಸೋಗುಮಾಡುವದು ಈಕೆಗೆ ಎಷ್ಟು ಚೆನ್ನಾಗಿ ಸಾಧಿಸಿರುತ್ತದೆ ! ಅರಿಯುದವರು ಇವಳಿಗೆ ಬಹಳ ಪೆಟ್ಟು ಹತ್ತಿತೆಂದು ತಿಳಿದುಕೊಳ್ಳುವಂತೆ ಸೋಗು ಮಾಡುತ್ತಾಳೆ. ಇವಳಿಗೆ ಬಾಯಿಂದ ಬೇಕಾದಂತೆ ಮಾತಾಡಲಿಕ್ಕೆ ಬೇಕು. ಆದರೆ ಇನಾಮು ಮಾತ್ರ ಬೇಡ ! ಹ. ಗಪ್ಪ ಆಗು ! (**ಆಕೆಯ ಬಾಯನ್ನು ಗಟ್ಟಿಯಾಗಿ ಹಿಡಿಯುತ್ತಾಳೆ.**) ಈಗ ನಾನು ಕೇಳಿದ್ದಕ್ಕೆ ಸರಿಯಾಗಿ ಉತ್ತರ ಕೊಡು. ನಿನ್ನನ್ನು ಬೇಡಲಿಕ್ಕೆ ಬಂದವರೊಳಗೆ ಯಾರು ನಿನ್ನ ಮನಸ್ಸಿಗೆ ಬಂದಿರುತ್ತಾರೆ ?

**ಕಮಲಾ**—ಅಕ್ಕಾ, ನಾನು ನಿಜವಾಗಿ ಹೇಳಲಿಯಾ? ಅವರಲ್ಲಿ ಒಬ್ಬರೂ ನನ್ನ ಮನಸ್ಸಿಗೆ ಬಂದಿಲ್ಲ. ದೇವರು ನನಗೆ ಈ ಸೌಂದರ್ಯವನ್ನು ಕೊಡದೆ ನನ್ನನ್ನು ಬಡವರ ಹೊಟ್ಟೆಯಿಂದ ಹುಟ್ಟಿಸಿದ್ದರೆ ಎಷ್ಟು ನೆಟ್ಟಗಾಗುತ್ತಿತ್ತು !

**ತ್ರಾಟಿಕಾ**— ಸಟವೀ, ನನ್ನ ಮುಂದೆ ವ್ಯರ್ಥವಾಗಿ ಬಡಿವಾರದ ಮಾತು ಆಡಬೇಡ. ಆ ಬಾಪೂರಾಯನು ನಿನ್ನ ಮನಸ್ಸಿಗೆ ಬಂದಿಲ್ಲವೇ ? ನಿನ್ನನ್ನು ನೋಡಿದ ಕೂಡಲೆ ಅವನು ಹುಚ್ಚನಂತೆಯೇ ಮಾಡುತ್ತಾನೆ. ಕಳ್ಳೀ, ಏಕೆ ನನ್ನ ಮುಂದೆ ಮುಚ್ಚಿಟ್ಟುಕೊಳ್ಳುತ್ತೀ ? ಅವನೇ ನಿನ್ನ ಮನಸ್ಸಿಗೆ ಬಂದಿರುತ್ತಾನೆ. ಹೌದೋ ಅಲ್ಲೋ ? ಬೇಗನೆ ಹೇಳು.

(ಬೊದು ಕೈಯಿಂದ ಅವಳ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದು ಇನ್ನೊಂದು ಕೈಯಿಂದ ಅವಳ ಮೋರೆಯನ್ನು ಎತ್ತುತ್ತಾಳೆ.)

**ಕಮಲಾ**—ಅವ್ವಯ್ಯಾ! ಬೇಗನೆ ನನ್ನ ಕೈ ಬಿಡು. ನನ್ನ ಕೈ ನರಗಳು ನೋಯಹತ್ತಿರುತ್ತವೆ. ನಿಜವಾಗಿ ಹೇಳುತ್ತೇನೆ ಕೇಳು. ಅವನು ನನ್ನ ಮನಸ್ಸಿಗೆ ಎಳ್ಳಷ್ಟೂ ಬಂದಿಲ್ಲ. ನಿನ್ನ ಕೊರಳಾಣೆಯೆಂದರೂ ಹೇಳುತ್ತೇನೆ. ನಿನ್ನ ಮನಸ್ಸಿಗೆ ಅವನು ಬಂದಿದ್ದರೆ ನೀನೇ ಅವನನ್ನು ಮಾಡಿಕೋ. ಅವನು ಎಷ್ಟು ದೊಡ್ಡವನಿರುತ್ತಾನೆ! ಅವನಿಗೂ ನನಗೂ ಓರಿಗೆಯೇ? ಅವನು ನಿನಗೇ ಯೋಗ್ಯನು.

**ತ್ರಾಟಿಕಾ** — ಹೆಂ. ತಿರುಗಿ ನಿನ್ನ ಹಾದಿಗೇ ಬಂದೆ. ಮತ್ತೂ ಕಡಬು ಬೇಕಾಗಿರುತ್ತವೇನು? ನಿನಗೆ ಆ ಬಾಪೂರಾಯನು ಬೇಡಾಗಿದ್ದರೆ ಭೀಮರಾಯನು ಬೇಕಾಗಿರಬಹುದು. ಅವನು ಎಷ್ಟು ಒನಪು ಒಯ್ಯಾರ ಮಾಡುತ್ತಾನೆ! ನಟನು ಮಾಡುವ ಪ್ರಕಾರ ಹಾವಭಾವಗಳನ್ನು ಮಾಡುತ್ತಾನೆ! ನಿಶ್ಚಯವಾಗಿ ಅವನೇ ನಿನ್ನ ಮನಸ್ಸಿಗೆ ಬಂದಿರಬಹುದು. ನೀನು ಅವನನ್ನೇ ಮದುವೆಯಾದರೆ ನಿನಗೆ ಅವನ ಕಿವಿ ಹಿಂಡಿ ಅವನನ್ನು ಬೇಕಾದಂತೆ ಕುಣಿಸಲಿಕ್ಕೆ ಆಗುವದು, ಬಲ್ಲಿಯಾ? ಅವನನ್ನು ನೀನು ವಶಮಾಡಿಕೊಂಡು ಅವನ ಮನೆಯ ಕಾರಭಾರ ನೋಡಹತ್ತಿದ ಮೇಲೆ ನಿನಗೆ ನನ್ನ ನೆನಪು ಆದೀತೇ?

**ಕಮಲಾ**—ಅಕ್ಕಾ, ಅವನು ನಿನ್ನ ಮನಸ್ಸಿಗೆ ಬಂದಿರಬಹುದೆಂತಲೇ ನೀನು ನನಗೆ ಇಷ್ಟು ಚುಚ್ಚಿ ಮಾತಾಡುತ್ತೀ. ನಿನಗೆ ಜನರ ಕಿವಿ ಹಿಂಡುವ ಉತ್ಸುಕತೆಯು ಬಹಳವಿರುತ್ತದೆ. ಆದುದರಿಂದ ನೀನೇ ಅವನನ್ನು ಲಗ್ನ ಮಾಡಿಕೋ ಹಾಗೂ ಯಾವಾಗಲು ಅವನ ಕಿವಿ ಹಿಂಡುತ್ತ ಕುಳಿತುಕೋ.

**ತ್ರಾಟಿಕಾ**—ನನಗೆ ಎರಡನೇಯವರ ಕಿವಿ ಹಿಂಡುವ ಉತ್ಸುಕತೆಯು ಇರುತ್ತದೇನು? ಹಾಗಾದರೆ ಹಿಂಡುತ್ತೇನೆ ನೋಡು. (ಎಂದು ಅವಳ ಕಿವಿಯನ್ನು ಕಸುಮಿಂದ ಹಿಂಡಿ ಹೊಡಿಯುತ್ತಾಳೆ.)

( ಲಕ್ಷ್ಮೀಪತಿರಾಯನು ಬರುತ್ತಾನೆ. )

**ಲಕ್ಷ್ಮೀಪತಿರಾವ**—ರಂಗೂ, ಇದೇನು? ನಿನ್ನ ಉದ್ದಾಮತನವು ಬಹಳ ಹೆಚ್ಚಾಯಿತು. ಆಕೆಯನ್ನು ಬಿಟ್ಟುಬಿಡು. ಕಮಲೇ, ನಿನಗೆ ಅವಳ

ಹತ್ತಿರ ಸಹ ಹೋಗಬೇಡೆಂದು ಸಾವಿರಸಾರೆ ಹೇಳಿದೆನು. ಒಳಗೆ ಹೋಗು. ಆ ಕಸೂತಿಯ ಕೆಲಸ ಮಾಡುತ್ತ ಕುಳಿತುಕೋ. (ತ್ರಾಟಿಕೆಯನ್ನುದ್ದೇಶಿಸಿ) ಎಲೀ ರಾಕ್ಷಸೀ! ಏಕೆ ನೀನು ಆ ಕಮಲೆಯನ್ನು ಪೀಡಿಸುವೆ? ಅವಳು ನಿನಗೆ ಒಮ್ಮೆಯಾದರೂ ಕೆಟ್ಟಶಬ್ದವನ್ನು ಆಡಿರುವಳೇ?

**ತ್ರಾಟಿಕಾ**—ಅವಳು ನಿಮ್ಮ ಪ್ರೀತಿಯ ಮಗಳು. ಆದುದರಿಂದ ಅವಳ ಮಾತಿನಲ್ಲಿ ನಿಮಗೆ ಒಂದೂ ಕೆಟ್ಟಶಬ್ದವು ಕಾಣಿಸುವದಿಲ್ಲ. ಅವಳು ಒಬ್ಬಳೇ ಇದ್ದಾಗ್ಗೆ ನಾಲಿಗೆಯನ್ನು ಹೇಗೆ ಉದ್ದ ಮಾಡುತ್ತಾಳೆಂಬದನ್ನು ನೋಡಬೇಕಿತ್ತು. ನಿಮ್ಮ ಮುಂದೆ ಮಾತ್ರ ಅವಳು ಸಾಧ್ವಿಯಂತೆ ನಮ್ರತೆಯಿಂದಿರುತ್ತಾಳೆ. ಒಂದೂ ಶಬ್ದವನ್ನು ಬಾಯಿಂದ ಮಾತಾಡುವದಿಲ್ಲ. ನಾನು ಬಹಳ ಬಾಯಿಬಡಕಳೆಂದು ನಿಮಗೆ ತೋರಿಸುವದಕ್ಕಾಗಿಯೇ ಅವಳು ಆ ಪ್ರಕಾರ ಮಾಡುತ್ತಾಳೆ. ಆಕೆಯು ಬಹಳ ಕಳ್ಳಿ ಇರುತ್ತಾಳೆ. ಅವಳ ಖೋಡಿತನವನ್ನು ಪೂರ್ಣವಾಗಿ ಬಿಡಿಸದೆ ನಾನೆಂದಿಗೂ ಇರಲಾರೆನು. ( ಕಮಲೆಯು ಹಿಂದೆ ಹೋಗಲಾರಂಭಿಸುತ್ತಾಳೆ. )

**ಲಕ್ಷ್ಮೀಪತಿರಾವ**—ಹ, ಬಹಳ ಎಚ್ಚರಿಕೆ! ಕಮಲೇ, ನೀನು ಒಳಗೆ ಹೋಗಿ ಅಬಚಿಯ ಹತ್ತಿರ ಕುಳಿತುಕೋ. ( ಕಮಲೆಯು ಹೋಗುತ್ತಾಳೆ. )

**ತ್ರಾಟಿಕೆ**—ಅಹಹ! ಪ್ರೀತಿಯ ಮಗಳೆಂದು ಅವಳ ಬಗ್ಗೆ ಎಷ್ಟು ಪರಾಮರಿಕೆ ಮಾಡುತ್ತೀರಿ! ಎಲ್ಲ ಪ್ರೀತಿಯನ್ನು ಆಕೆಗೇ ಮಾಡಿರಿ. ನಾನೇನು ನಿಮ್ಮ ಹೊಟ್ಟೆಯ ಮಗಳೇ ಅಲ್ಲ! ಆಕೆಯ ಸೀರೆಯನ್ನು ಒಗೆಯುವದು, ಆಕೆಯ ಹುಡುಗರನ್ನು ಆಡಿಸುವದು ಮೊದಲಾದ ಕೆಲಸಗಳನ್ನು ನೀವು ನನ್ನಿಂದ ಮಾಡಿಸುವಂತೆ ಕಾಣುತ್ತದೆ! ನನಗೆಂದಿಗೂ ಇದು ತಡೆಯಲಿಕ್ಕಿಲ್ಲ. ನಾನು ಈಗಲೇ ಹೋಗಿ ಅಳುತ್ತಕೂಡುವೆನು. ಅನ್ನ ನೀರು ಸಹ ಮುಟ್ಟಲಿಕ್ಕಿಲ್ಲ. ಹೊತ್ತು ಸಾಧಿಸಿದ ಕೂಡಲೆ ಆಕೆಯ ಖೋಡಿತನವನ್ನು ಚೆನ್ನಾಗಿ ಬಿಡಿಸುವೆನು. ಹೀಗೆ ಮಾಡಿದ ನಂತರವೇ ನನ್ನ ಹೆಸರು ತ್ರಾಟಿಕೆಯೆಂದು ಕರೆಯಿರಿ. ( ಕಾಲು ಅಪ್ಪಳಿಸುತ್ತ ಹೊರಟು ಹೋಗುತ್ತಾಳೆ. )

**ಲಕ್ಷ್ಮೀಪತಿರಾವ**—ದೇವರೇ, ನನ್ನನ್ನು ಈ ಕಿರಿಕಿರಿಯಿಂದ ಒಮ್ಮೆ ಮುಕ್ತ ಮಾಡು. ಸುಖದಿಂದ ಮನೆಯಲ್ಲಿ ಉಂಡೇನೆಂದರೆ ಸಹ ಆಗಲೊಲ್ಲದು. ಎಲೋ, ಇವರು ಯಾರು ಬಂದರು?

(ಬಾಪೂರಾಯನು, ಪುರಾಣಿಕನ ವೇಷವನ್ನು ಧರಿಸಿ ಪುರಾಣದ ಗಂಟು ಬಗಲೊಳಗೆ ಹಿಡಿದು ಕೊಂಡ ರಂಗರಾಯನು, ಪ್ರತಾಪರಾಯನು, ಗಾಯಕನ ವೇಷವನ್ನು ಧರಿಸಿ ವೀಣೆಯನ್ನು ಹಿಡಿದು ಕೊಂಡ ಭೀಮರಾಯನು ಮತ್ತು ವೆಂಕಣ್ಣನಾಯಕನು ಬರುತ್ತಾರೆ. )

**ಬಾಪೂರಾವ** —ನಮಸ್ಕಾರ ಲಕ್ಷ್ಮೀಪತಿರಾಯರೇ.

**ಲಕ್ಷ್ಮೀಪತಿರಾವ** —ನಮಸ್ಕಾರ. ಎಲ್ಲಾ ಕ್ಷೇಮವಷ್ಟೇ ?

**ಪ್ರತಾಪರಾವ**—ಲಕ್ಷ್ಮೀಪತಿರಾಯರೇ, ನನಗೆ ಔಪಚಾರಿಕ ಮಾತುಗಳನ್ನು ಬೆಳೆಸುವದು ಏನೂ ಸೇರುವದಿಲ್ಲ. ನಿಮಗೆ ರಂಗೂ ಎಂಬ ಒಬ್ಬ ಸುಂದರವಾದ ಮತ್ತು ಸದ್ಗುಣಿಯಾದ ಮಗಳು ಇರುತ್ತಾಳಷ್ಟೇ ?

**ಲಕ್ಷ್ಮೀಪತಿರಾವ** —ಹೌದು. ಇರುವದು ಸತ್ಯವು.

**ಪ್ರತಾಪರಾವ**— ಹಾಗಾದರೆ ಅವಳನ್ನು ನನಗೆ ಮದುವೆ ಮಾಡಿಕೊಡುತ್ತೀರಾ ?

**ಬಾಪೂರಾವ**— ಏನಿರಿ, ಸ್ವಲ್ಪ ಶಾಂತರೀತಿಯಿಂದ ಕೇಳಿಕೊಳ್ಳಿರಿ. ನಿಮ್ಮ ಪ್ರಶ್ನೆ ಮಾಡುವ ಪದ್ಧತಿಯು ಎಷ್ಟು ವಿಲಕ್ಷಣವಾದದ್ದು ! ಲಗ್ನಕ್ಕಾಗಿ ಕನ್ಯೆಯನ್ನು ಬೇಡಲಿಕ್ಕೆ ಬಂದವರು ಈ ರೀತಿಯಿಂದ ಕೇಳುತ್ತಾರೇನು ? ಜನಸಾಂಪ್ರದಾಯದಂತೆ ನಡೆಯಬಾರದೇನು ? ನಮಗೂ ನಿಮ್ಮಂತೆ ಬೇಡತಕ್ಕದ್ದದೆ. ಲಗ್ನದ ವಿಷಯದಲ್ಲಿ ಇಷ್ಟೊಂದು ಅವಸರ ಮಾಡುವದು ಯೋಗ್ಯವಲ್ಲ. ಮರ್ಯಾದೆಯಿಂದ ಮತ್ತು ಸೌಮ್ಯರೀತಿಯಿಂದ ಪ್ರಸ್ತಾಪವನ್ನು ತೆಗೆಯತಕ್ಕದ್ದು.

**ಪ್ರತಾಪರಾವ**—ಬಾಪೂರಾವ, ಕ್ಷಮಿಸಿರಿ. ನಿಮಗೆ ಇದರ ಕಾರಣವು ತಿಳಿಯಲಾರದು. ನನ್ನ ಮಾತುಗಳು ಉರಟು ಕಂಡರೂ ನನ್ನ ಸ್ವಭಾವವು ಬಹಳ ಸರಳವಿರುತ್ತದೆ. ನಾನು ಹೊರಗೆ ಸೌಮ್ಯತನವನ್ನೂ ಸಭ್ಯತನವನ್ನೂ ತೋರಿಸಿ ಮನಸ್ಸಿನೊಳಗೆ ಕಪಟೋಪಾಯಗಳನ್ನು ಯೋಚಿಸಿ ನನ್ನ ಉದ್ದೇಶವನ್ನು ಸಾಧಿಸಿಕೊಳ್ಳುವವನಲ್ಲ. ಸಿಟ್ಟಾಗಬೇಡಿರಿ. ನಿಮ್ಮನ್ನುದ್ದೇಶಿಸಿ ನಾನು ಇದನ್ನು ಮಾತಾಡಲಿಲ್ಲ. ಒಳ್ಳೇದು. ಲಕ್ಷ್ಮೀಪತಿರಾವ, ನಾನು ವಿಜಯಪುರದಲ್ಲಿರತಕ್ಕವನು. ನಾನು ನಿಮ್ಮ ಹಿರಿಯ ಮಗಳ ಸುಸ್ವರೂಪದ ಮತ್ತು ಸದ್ಗುಣದ ಕೀರ್ತಿಯನ್ನು ಕೇಳಿ ಇಲ್ಲಿಗೆ ಬಂದಿರುತ್ತೇನೆ. ಅವಳ ವಿನಯ, ಚಾತುರ್ಯ, ಸೌಜನ್ಯಾ

ದಿಗಳ ಪ್ರಶಂಸೆಯನ್ನು ಬಹಳವಾಗಿ ಕೇಳಿದ್ದೇನೆ. ಆದುದರಿಂದ ನಾನು ಅವಳನ್ನು ಲಗ್ನಮಾಡಿಕೊಳ್ಳಬೇಕೆಂಬ ಕುತೂಹಲದಿಂದ ಈ ಪ್ರಕಾರ ಆಗಂತುಕನಾಗಿ ಬಂದಿರುತ್ತೇನೆ. ಈ ಊರಿಗೆ ನಾನು ಬಂದ ಮೇಲೆ ನೀವು ನಿಮ್ಮ ಚಿರಂಜೀವಿಗಳಿಗೆ ಗಾಯನದ ಅಭ್ಯಾಸವನ್ನು ಮಾಡಿಸತಕ್ಕವರಿದ್ದೀರೆಂದು ಕೇಳಿ ನನ್ನ ಸಂಗಡ ವೆಂಕಟಸ್ವಾಮಿ ಎಂಬ ಈ ತಂಜಾವರದ ಗಾಯಕನನ್ನು ( **ಭೀಮರಾಯನನ್ನು ಮುಂದೆ ಮಾಡಿ** ) ನಮ್ಮ ನಿಮ್ಮ **ಮೊದಲನೆಯ** ಬೆಟ್ಟಿಯ ಕಾಣಿಕೆಯೆಂದು ತೆಗೆದುಕೊಂಡು ಬಂದಿರುತ್ತೇನೆ. ಈ ಗಾಯಕನು ಹಾಡುವಲ್ಲಿಯೂ ವೀಣೆಯನ್ನು ಬಾರಿಸುವಲ್ಲಿಯೂ ಬಹಳ ಚತುರನಿರುವದಲ್ಲದೆ ಬಹಳ ಸಭ್ಯನಿರುತ್ತಾನೆ.

**ಬಾಪೂರಾವ**—( ತನ್ನಷ್ಟಕ್ಕೆ ) ಈ ಗಾಯಕನ ಮೇಲೆ ಚೆನ್ನಾಗಿ ದೃಷ್ಟಿಯನ್ನಿಡುವ ಕೆಲಸವನ್ನು ನನಗೇ ಮಾತ್ರ ಹೇಳತಕ್ಕದ್ದು.

**ಲಕ್ಷ್ಮೀಪತಿರಾವ**—ವೆಂಕಟಸ್ವಾಮಿಯು ಸಭ್ಯ ಮತ್ತು ಸುಶೀಲ ಮನುಷ್ಯನಾದ್ದರಿಂದ ಹೆಣ್ಣು ಹುಡಿಗಿಯರಿಗೆ ಗಾಯನ ವಾದನಗಳನ್ನು ಕಲಿಸಲಿಕ್ಕೆ ಯೋಗ್ಯನಿರುತ್ತಾನೆ. ಇವನನ್ನು ನೀವು ಕರೆದು ತಂದದ್ದಕ್ಕಾಗಿ ನಾನು ನಿಮ್ಮ ಉಪಕಾರಗಳನ್ನು ನೆನೆಸುತ್ತೇನೆ. ಇನ್ನು ನೀವು ನನ್ನ ಮಗಳನ್ನು ಬೇಡುವದಕ್ಕಾಗಿ ಇಲ್ಲಿಗೆ ಬಂದಿರುವದು ಆಗಂತುಕತನವು ಅನ್ನಿಸಲಾರದು. ನಿಮ್ಮ ಆಗಮನದಿಂದ ನನಗೆ ಆನಂದವೇ ಆಗಿರುತ್ತದೆ. ಆದರೆ ಅವಳಿಗೂ ನಿಮಗೂ ಸರಿಬೀಳಲಿಕ್ಕಿಲ್ಲವೆಂದು ನಾನು ಖೇದಪಡುತ್ತೇನೆ.

**ಪ್ರತಾಪರಾವ**—ನಿಮಗೆ ನನ್ನಲ್ಲೇನಾದರೂ ಕೆಟ್ಟ ಗುಣಗಳು ನಿದರ್ಶನಕ್ಕೆ ಬಂದವೋ ? ಅಥವಾ ಅವಳ ಲಗ್ನಮಾಡುವ ವಿಚಾರವನ್ನೇ ನೀವು ಬಿಟ್ಟಿರುತ್ತೀರೋ ?

**ಲಕ್ಷ್ಮೀಪತಿರಾವ**— ಎರಡೂ ಇಲ್ಲ. ಒಳ್ಳೇದು, ನೀವು ಯಾವ ಊರಿಂದ ಬಂದಿರಿ ! ಹಾಗೂ ನಿಮ್ಮ ಮತ್ತು ನಿಮ್ಮ ಮನೆಯ ಹೆಸರೇನು?

**ಪ್ರತಾಪರಾವ**—ನಾನು ವಿಜಯಪುರದಿಂದ ಬಂದೆನು. ನನ್ನ ಹೆಸರು ಪ್ರತಾಪರಾವ. ನಾನು ದಿವಾಣರ ಮನೆಯವನು. ನನ್ನ ತಂದೆಯವರು ಸತ್ಯಬೋಧರಾಯರು. ಅವರು ಎಲ್ಲ ಕಡೆಗೂ ಪ್ರಸಿದ್ಧರಿರುತ್ತಾರೆ. ಅವರು

ಈಗ ಸ್ವಲ್ಪ ದಿವಸಗಳ ಹಿಂದೆ ತೀರಿಕೊಂಡರು. ಅವರಿಗೆ ನಾನೊಬ್ಬನೇ ಮಗನಿದ್ದೇನೆ.

**ಲಕ್ಷ್ಮೀಪತಿರಾವ**—ಏನು, ಸತ್ಯಬೋಧರಾಯರು ತೀರಿಕೊಂಡರೇ ? ಅಯ್ಯೋ ! ಬಹಳ ಕೆಟ್ಟದಾಯಿತು. ಅವರು ಬಹಳ ಕೀರ್ತಿಯನ್ನು ಪಡೆದರು. ನೀವು ಅವರ ಮಕ್ಕಳೇನು ? ಅಂದಮೇಲೆ ನಿಮ್ಮ ಭೆಟ್ಟಿಯಾದದ್ದು ನನಗೆ ದೊಡ್ಡ ಲಾಭವಾದಂತಾಯಿತು.

**ಬಾಪೂರಾವ**— ಪ್ರತಾಪರಾವ, ಇನ್ನು ಮೇಲೆ ನೀವು ನಿಮ್ಮ ಕಥೆಯನ್ನು ದಯಮಾಡಿ ಮುಗಿಸಿರಿ. ನಮಗೇನಾದರೂ ಸ್ವಲ್ಪ ಮಾತಾಡಲಿಕೆ ಅವಕಾಶವನ್ನು ಕೊಡುತ್ತೀರೋ ಇಲ್ಲೋ ? ನಿಮ್ಮ ಕೂಡ ನಾವು ಓಟ ಓಡುವದು ಬಹಳ ಕಠಿಣ !

**ಪ್ರತಾಪರಾವ**—ನನಗೆ ಕೈಬಾಯಿ ಮುಚ್ಚಿಕೊಂಡು ಸುಮ್ಮನೆ ಕೂಡುವದೆಂದರೆ ಬಹಳ ಬೇಸರ ಬರುತ್ತದೆ. **"ಶುಭಸ್ಯ ಶೀಘ್ರಂ"** ಎಂಬಂತೆ ಶೀಘ್ರವಾಗಿ ಮಾಡಿದ ಹೊರತಾಗಿ ಇಂಥ ಮಹತ್ವದ ಕೆಲಸಗಳೇ ಕೈಗೂಡುವದಿಲ್ಲ ; ಬಲ್ಲಿರಾ ?

**ಬಾಪೂರಾವ**—ಅದೆಲ್ಲ ಇರಲಿ. ಇಷ್ಟೊಂದು ಅವಸರ ಮಾಡಬೇಡಿರಿ. ನಾಳಿನ ಮರಣವನ್ನು ಇವತ್ತೆ ಕರೆದುಕೊಳ್ಳುವದು ಜಾಣತನವಲ್ಲ. ಇಷ್ಟು ಅವಸರ ಮಾಡುವದರಿಂದ ನೀವು ಏನು ದೊರಕಿಸುವಿರೆಂಬುವದು ನಿಮಗೆ ಇನ್ನೂ ತಿಳಿದಿಲ್ಲ. ಆದುದರಿಂದಲೇ ನೀವು ಇಷ್ಟು ಉತ್ಸಾಹದಿಂದ ಮಾತಾಡುತ್ತೀರಿ. ಲಕ್ಷ್ಮೀಪತಿರಾವ, ಇದು ನೋಡಿರಿ. ನಿಮ್ಮ ಭೆಟ್ಟಿಯ ಸನ್ಮಾನಾರ್ಥ ನಿಮಗೆ ಅರ್ಪಿಸಲಿಕ್ಕೆ ಒಂದು ಅಪೂರ್ವವಾದ ಕಾಣಿಕೆಯನ್ನು ತಂದಿರುತ್ತೇನೆ. ಈ ವಿದ್ವದ್ರತ್ನವೇ ನನ್ನ ಕಾಣಿಕೆಯು. ( ರಂಗರಾಯನನ್ನು ಮುಂದೆ ಮಾಡಿ ) ಈ ಗೃಹಸ್ಥನು ದೊಡ್ಡ ವಿದ್ವಾನ್ ಪುರಾಣಿಕನಿರುತ್ತಾನೆ. ಪುರಾಣ ಹೇಳುವಲ್ಲಿ ಇವನಿಗೆ ಸರಿಯಾದವರು ಎಲ್ಲಿಯೂ ಸಿಗಲಾರರು.

**ಲಕ್ಷ್ಮೀಪತಿರಾವ**— ಬಾಪೂರಾವ, ನೀವು ನನ್ನ ಬಹಳ ದಿವಸದ ಸ್ನೇಹಿತರಿರುತ್ತೀರಿ. ಆದುದರಿಂದ ನೀವು ಇವನನ್ನು ತಂದುಕೊಟ್ಟದ್ದಕ್ಕಾಗಿ ನಿಮ್ಮ ಉಪಕಾರವು ನನ್ನ ಮೇಲೆ ಬಹಳವಾಯಿತೆಂದು ಹೇಳುವ ಕಾರಣವಿಲ್ಲ.

**ಬಾಪೂರಾವ**— ಇದೇನು ದೊಡ್ಡ ಮಾತು? ಇದು ನನ್ನ ಹೃದಯ ಸ್ವಾಮಿನಿಯ ದೆಸೆಯಿಂದ ಮಾಡಿದ ಅಲ್ಪ ಸೇವೆಯು ಇರುತ್ತದೆ!

**ಲಕ್ಷ್ಮೀಪತಿರಾವ**— (ವೆಂಕಣ್ಣನಾಯಕನಿಗೆ) ನೀವು ಇಲ್ಲಿಯವರೆಂದು ಕಾಣಿಸುವದಿಲ್ಲ. ನಿಮ್ಮ ಬರುವಿಕೆಗೆ ಏನು ಕಾರಣವಾಯಿತು?

**ವೆಂಕಣ್ಣನಾಯಕ**— ನಾನು ಮಣಿಪುರದಿಂದ ಬಂದಿರುತ್ತೇನೆ. ನಾನು ನಿಮ್ಮ ಚಿಕ್ಕ ಮಗಳ ಗುಣದಮೇಲೆ ಲುಬ್ಧನಾಗಿ ಅವಳನ್ನು ಮದುವೆಮಾಡಿಕೊಳ್ಳಬೇಕೆಂಬ ಕುತೂಹಲದಿಂದ ಅವಳನ್ನು ಬೇಡಲಿಕ್ಕೆ ಬಂದಿರುತ್ತೇನೆ. ಹಾಗೂ ಅವಳ ವಿದ್ಯಾಭ್ಯಾಸದಗೋಸ್ಕರ ನಾನು ಒಬ್ಬ ಕುಶಲನಾದ ಶಿಲ್ಪಿಯ ಕಡೆಯಿಂದ ಒಂದು ವೀಣೆಯನ್ನು ಮಾಡಿಸಿ ತಂದಿರುತ್ತಿದ್ದು ಅದನ್ನು ನಿಮ್ಮ ಬೆಟ್ಟಿಯ ಪ್ರೀತ್ಯರ್ಥವಾಗಿ ನಿಮಗೆ ಅರ್ಪಿಸುತ್ತೇನೆ. ಅದನ್ನು ನಾನು ಮೊದಲೇ ವೆಂಕಟಸ್ವಾಮಿಯ ಕೈಯಲ್ಲಿ ಕೊಟ್ಟಿರುತ್ತೇನೆ.

**ಲಕ್ಷ್ಮೀಪತಿರಾವ**— (ವೀಣೆಯನ್ನು ಕೈಯಲ್ಲಿ ತೆಗೆದುಕೊಂಡು) ಇದರಮೇಲೆ ಬಂಗಾರದ ಮಲಮಿನಿಂದ ಅಕ್ಷರ ಕೊರೆದಂಥ ಹೆಸರು 'ರಂಗರಾವ' ಎಂಬುವದು ನಿಮ್ಮದೇ ಎಂದು ಕಾಣುತ್ತದೆ. ಒಳ್ಳೇದು, ನೀವು ಯಾರ ಮಕ್ಕಳು?

**ವೆಂಕಣ್ಣನಾಯಕ**— ನಾನು ಮಣಿಪುರದ ದೇಸಾಯಿ ಲಕ್ಷ್ಮಣರಾಯರ ವ…

**ಲಕ್ಷ್ಮೀಪತಿರಾವ**— ಮಣಿಪುರದ ಲಕ್ಷ್ಮಣರಾಯರ ಹೆಸರು ಕೇಳದಿರುವವರು ಯಾರಿರುತ್ತಾರೆ? ನಿಮ್ಮ ಬೆಟ್ಟಿಯಿಂದ ನನಗೆ ಬಹಳೇ ಆನಂದವಾಯಿತು. ಈ ನಿಮಿತ್ತದಿಂದಾದರೂ ನೀವು ನನ್ನ ಮನೆಗೆ ಬಂದಿರಿ. ಅಯ್ಯಾ ಗಾಯಕನೇ, ಈ ವೀಣೆಯನ್ನು ಕೈಯಲ್ಲಿ ತೆಗೆದುಕೋ. ಪುರಾಣಿಕನೇ ನಡೆ ಇನ್ನು. ನಿಮ್ಮಿಬ್ಬರಿಗೂ ನಿಮ್ಮ ವಿದ್ಯಾರ್ಥಿನಿಯರನ್ನು ಬೆಟ್ಟಿ ಮಾಡಿಸುತ್ತೇನೆ. ಯಾರವರು ಅತ್ತ ಕಡೆಯಲ್ಲಿ? (ಆಳುಮನುಷ್ಯನು ಒಳಗಿನಿಂದ ಓ ಕೊಡುತ್ತಾನೆ.) ಎಲೋ, ಈ ಪುರಾಣಿಕನನ್ನೂ ಗಾಯಕನನ್ನೂ ಒಳಗೆ ಕರೆದುಕೊಂಡು ಹೋಗಿ, ಚಿಕ್ಕವ್ವನಿಗೆ ಬೆಟ್ಟಿಮಾಡಿಸು. ಹಾಗೂ ನಾನು ಮೊದಲೇ ಹೇಳಿಟ್ಟಂತೆ ವ್ಯವಸ್ಥೆಯನ್ನು ಮಾಡಲಿಕ್ಕೆ ತಿಳಿಸು.)

(ಇಬ್ಬರೂ ಒಳಗೆ ಹೋಗುತ್ತಾರೆ. ಪ್ರತಾಪರಾವ, ಬಾಪೂರಾವ ಮತ್ತು ವೆಂಕಣ್ಣನಾಯಕ ಈ ಮೂವರನ್ನುಳಿದು (ಶಿ)

ನಿಮಗೆ ಅವಕಾಶವಿದ್ದರೆ ನಮ್ಮ ತೋಟದಲ್ಲಿ ಸ್ವಲ್ಪ ಅಡ್ಡಾಡಿ ಬರೋಣ ನಡೆಯಿರಿ. ಈ ಹೊತ್ತು ನೀವೆಲ್ಲರೂ ನಮ್ಮಲ್ಲಿಯೇ ಭೋಜನಕ್ಕೆ ಬನ್ನಿರಿ. ನಿಮ್ಮ ಪಂಕ್ತಿಯ ಲಾಭವು ನನಗೆ ದೊರಕಿದರೆ ಬಹಳ ಆನಂದವಾಗುವದು. ಮನೆಯು ನಿಮ್ಮದದೆ. ನೀವು ಯಾತಕ್ಕೂ ಸಂಕೋಚ ಮಾಡಿಕೊಳ್ಳಬೇಡಿರಿ.

**ವೆಂಕಣ್ಣನಾಯಕ—** ನನ್ನನ್ನು ಕ್ಷಮಿಸಿರಿ. ನಾನು ಇಳುಕೊಂಡ ಸ್ಥಳದಲ್ಲಿ ಇನ್ನೂ ಕೆಲವು ವ್ಯವಸ್ಥೆಯನ್ನು ಮಾಡತಕ್ಕದ್ದದೆ. ಇವಲ್ಲದೆ ನಮ್ಮ ತಂದೆಯ ಪರಿಚಯಸ್ಥರನ್ನು ಕಾಣುವದಕ್ಕಾಗಿ ನಾನು ಹೋಗುವದು ಬಹಳ ಅವಶ್ಯವಿರುತ್ತದೆ. ಆದುದರಿಂದ ನನ್ನನ್ನು ದಯಮಾಡಿ ಕ್ಷಮಿಸಿರಿ.

**ಲಕ್ಷ್ಮೀಪತಿರಾವ—** ಹಾಗಾದರೆ ನಿರುಪಾಯವು.

(ವೆಂಕಣ್ಣನಾಯಕನು ಹೋಗುತ್ತಾನೆ.)

**ಪ್ರತಾಪರಾವ—** ನನ್ನ ಕೆಲಸಗಳು ಬಹಳ ಇರುತ್ತವೆ. ದಿನಾಲು ಸಾಲಗಾರರು ಸಾಲ ಬೇಡುವದಕ್ಕಾಗಿ ನಿಮ್ಮ ಬಾಗಿಲಿಗೆ ಎಡತಾಕುವಂತೆ ನನಗೆ ಎಡತಾಕುವದು ಆಗಲಾರದು. ನನ್ನ ತಂದೆಯ ಪರಿಚಯವಂತೂ ನಿಮಗೆ ಪೂರ್ವದಿಂದಲೇ ಇರುತ್ತದೆ. ಅವರು ಎಷ್ಟು ಆಸ್ತಿಯನ್ನು ಸಂಪಾದಿಸಿದ್ದಾರೆಂಬುವದು ನಿಮಗೆ ಪೂರ್ಣವಾಗಿ ಗೊತ್ತಿರಬಹುದು. ಅಂದಮೇಲೆ ನಾನೇನು ಹೇಳತಕ್ಕದ್ದದೆ? ನನ್ನನ್ನು ಅಳಿಯನಾಗಿ ಮಾಡಿಕೊಳ್ಳುವದು ನಿಮ್ಮ ಮನಸ್ಸಿಗೆ ಬರುತ್ತಿದ್ದರೆ ಏನು ವರದಕ್ಷಿಣೆ ಕೊಡುತ್ತೀರೆಂಬುವನ್ನು ಹೇಳಿಬಿಡಿರಿ. ನಾನು ಸರಳವಾಗಿ ವಿಚಾರಿಸಿದಂತೆ ನೀವು ಸರಳವಾಗಿ ಉತ್ತರ ಕೊಡಿರಿ.

**ಲಕ್ಷ್ಮೀಪತಿರಾವ—** ಒಳ್ಳೇದು. ನಾನು ಐದು ಸಾವಿರ ರೂಪಾಯಿಗಳನ್ನು ವರದಕ್ಷಿಣೆ ಕೊಡುತ್ತೇನೆ. ಮೇಲಾಗಿ ನನ್ನ ಪಶ್ಚಾತ್ ನನ್ನ ಅರ್ಧ ಆಸ್ತಿಗೆ ನನ್ನ ಹಿರಿಯ ಮಗಳ ಸ್ವಾಮಿತ್ವವುಂಟಾಗುತ್ತದೆ. ಆದರೆ ಮೊದಲಿಗೆ—

**ಪ್ರತಾಪರಾವ—** "ಆದರೆ" "ಒಂದು ವೇಳೆ" "ಕದಾಚಿತ್" ಎಂಬ ಸಂಶಯದ ಮಾತುಗಳು ನನಗೆ ಸರ್ವಥಾ ಸೇರುವದಿಲ್ಲ. ಅವುಗಳನ್ನು ಕೇಳಿದ ಕೂಡಲೆ ನನಗೆ ತಲೆನೋವು ಏಳುತ್ತದೆ. ನಿಮ್ಮ "ಆದರೆ—ಗೀದರೆ" ಎಂಬುವದನ್ನು ನಾನು ಲಕ್ಷ್ಯಕ್ಕೆ ತರುವಂಥ ಮನುಷ್ಯನಲ್ಲ.

**ಲಕ್ಷ್ಮೀಪತಿರಾವ—** ಅದೆಲ್ಲ ನಿಜವು. ನಿಮ್ಮ ಮತ್ತು ಆಕೆಯ ಸ್ವಭಾವವು ಕೂಡುತ್ತದೋ ಇಲ್ಲವೋ ಎಂಬುವದನ್ನು ನಾನು ಮೊದಲಿಗೆ ಪರೀಕ್ಷಿಸತಕ್ಕದ್ದದೆ. ನನ್ನ ಮಗಳ ಸ್ವಭಾವವು ಸ್ವಲ್ಪ ವಿಚಿತ್ರವಿರುತ್ತದೆ. ಅವಳು ನಿಮ್ಮನ್ನು ಸ್ವೀಕಾರ ಮಾಡಿದರೆ ನಾವು ಆಡಿದ ಮಾತು ಉಪಯೋಗಕ್ಕೆ ಬಿದ್ದಂತಾಗುವದು. ಅವಳ ಮನಸ್ಸಿನ ವಿರುದ್ಧವಾಗಿ ನಡೆಯುವದು ನನಗೆ ಕಷ್ಟವಿರುತ್ತದೆ.

**ಪ್ರತಾಪರಾವ**—ಉಃ. ನೀವು ಅದರ ಹಳವಂಡವನ್ನು ಬಿಟ್ಟುಬಿಡಿರಿ. ಲಗ್ನದಕಿಂತ ಮುಂಚೆ ಅವಳ ಮನಸ್ಸು ಒಲಿಸುತ್ತ ಕುಳಿತುಕೊಳ್ಳುವ ಕಾರಣವು ನನಗೆ ಏನೂ ಇಲ್ಲ. ಆಕೆಯನ್ನು ನನಗೆ ಒಮ್ಮೆ ಲಗ್ನ ಮಾಡಿಕೊಟ್ಟು ಬಿಡಿರಿ. ಅಂದರೆ ಆಕೆಯನ್ನು ಬೆಕ್ಕಿನಂತೆ ನಮ್ರಮಾಡಿ ಬಿಡುತ್ತೇನೆ. ಆಕೆಯ ತುಂಟತನವು ನನ್ನ ಮೊಂಡತನದ ಮುಂದೆ ಏನೇನೂ ನಡೆಯಲಿಕ್ಕಿಲ್ಲ. ಈ ಬಗ್ಗೆ ನೀವು ನಿಶ್ಚಿಂತರಾಗಿ ಇದ್ದುಕೊಳ್ಳಿರಿ.

**ಬಾಪೂರಾವ**—(ತನ್ನಷ್ಟಕ್ಕೆ) ಇವನು ಬಾಯಿಂದಂತೂ ಬಹಳ ಜಂಬ ಬಡೆಯುತ್ತಾನೆ. ಆದರೆ ನಾನು ಜಿದ್ದು ಕಟ್ಟಿದ ಸಾವಿರ ರೂಪಾಯಿಗಳು ನನ್ನ ಚೀಲ ಬಿಟ್ಟು ಎಂದಿಗೂ ಹೋಗುವದಿಲ್ಲೆಂದು ನನಗೆ ಪೂರ್ಣ ವಿಶ್ವಾಸವಿರುತ್ತದೆ.

**ಲಕ್ಷ್ಮೀಪತಿರಾವ**—ಪ್ರತಾಪರಾವ, ಹಾಗಾದರೆ ನಿಮ್ಮ ದೈವ ಪರೀಕ್ಷೆಯನ್ನು ಮಾಡಿಕೊಳ್ಳಿರಿ. ಆಕೆಯು ಯಾರ ದಾಕ್ಷಿಣ್ಯವನ್ನೂ ಹಿಡಿಯುವದಿಲ್ಲ. ಹಾಗೂ ಯಾರ ಮಾತನ್ನೂ ನಡೆಸುವದಿಲ್ಲ. ಆದುದರಿಂದ ನೀವು ಅವಳ ಸಂಗಡ ಬಹಳ ಎಚ್ಚರಿಕೆಯಿಂದ ನಡೆಯಿರಿ.

**ಪ್ರತಾಪರಾವ**—ತಿರುತಿರುಗಿ ಅದನ್ನೇ ಏಕೆ ಹೇಳುತ್ತೀರಿ? ಗಾಳಿಯು ಬಹಳ ಕಸುವಿನಿಂದ ಬೀಸುತ್ತದೆಂದು ಪರ್ವತವು ಎಂದಾದರೂ ಹೊಯ್ದಾಡುವದೇ ?

**(ವೆಂಕಟಸ್ವಾಮಿಯೆಂಬ ಗಾಯಕನ ವೇಷ ಧರಿಸಿದ ಭೀಮರಾಯನು ಮುರುಕ ತಂಬೂರಿಯನ್ನು ಕೈಯಲ್ಲಿ ಹಿಡಿದುಕೊಂಡು ತಲೆಯಲ್ಲಿ ರಕ್ತ ಸುರಿಸುತ್ತಲೂ, ಉಸುರು ಹಾಕುತ್ತಲೂ ದಾರೀಹಿಡಿದು ಹೋಗುತ್ತಾನೆ.)**

**ಲಕ್ಷ್ಮೀಪತಿರಾವ**—ಅಯ್ಯಾ, ಗಾಯಕನೇ! ಇಷ್ಟು ದುರ್ದಶೆಯಾಗಿ ಎತ್ತ ಕಡೆಗೆ ಹೊರಟೆ?

**ವೆಂಕಟಸ್ವಾಮಿ**—ಸ್ವಾಮಿಾ, ಆ ಸಂಗತಿಯನ್ನು ನನಗೆ ವಿಚಾರಿಸ ಬೇಡಿ. ( **ಹಣಿಗೆ ಕೈಹಚ್ಚಿಕೊಂಡು** ) ನನ್ನ ಪ್ರಾರಬ್ಧವೇ ಕೆಟ್ಟದು. ಆ ದುರುಳ ರಕ್ಕಸಿಯು ಇತ್ತಕಡೆಗೇ ಬರುತ್ತಾಳೆಂದು ಕಾಣುತ್ತದೆ. ಶ್ರೀ ವ್ಯಂಕಟಪತಿಯೇ ಎನ್ನನ್ನು ರಕ್ಷಿಸು. ನಾನು ಹೋಗುತ್ತೇನೆ. ಸ್ವಾಮಿಾ, ಬೇಗ ಅಪ್ಪಣೆ ಕೊಡಿ.

**ಪ್ರತಾಪರಾವ**—ಈ ಪ್ರಕಾರ ಏಕೆ ಮಾಡುತ್ತೀ ? ಇವರು ಇಷ್ಟು ಮಮತೆಯಿಂದ ನಿನಗೆ ವಿಚಾರಿಸುತ್ತಿರಲಾಗಿ ನೀನು ಏನೂ ಹೇಳದೆ ತ್ವರೆಯನ್ನು ನಡೆಸಿರುವ ಕಾರಣವೇನು ?

**ವೆಂಕಟಸ್ವಾಮಿ**—ಸ್ವಾಮಿಾ, ನಾನೇನು ಹೇಳುವದು ? ನನ್ನ ತಲೆಯಲ್ಲಿ ಹರಿಯುತ್ತಿರುವ ರಕ್ತ ಪ್ರವಾಹವು ಇವರ ಹಿರಿಯ ಮಗಳು ಕೊಟ್ಟ ಗುರುದಕ್ಷಿಣೆಯು. ನಾನು ಬಂದ ಕಾರ್ಯವು ಮುಗಿಯಿತು. ನಾನು ಇನ್ನು ಹೋಗುತ್ತೇನೆ. ದಯವಿಟ್ಟು ಬೇಗನೆ ಅಪ್ಪಣೆ ಕೊಡಿ.

**ಬಾಪೂರಾವ**—ಪ್ರತಾಪರಾವ, ಈ ಪ್ರತಾಪವನ್ನು ನೋಡಿದಿರಾ ? ಮೃತ್ಯುವಿನ ದವಡೆಯಲ್ಲಿ ಹೋಗಿ ಸಿಗುವದಕ್ಕಿಂತ ಈ ಗಾಯಕನಂತೆ ಮನೆಯ ದಾರೀ ಹಿಡಿಯುವದು ಒಳ್ಳೇದು.

**ಪ್ರತಾಪರಾವ** – (**ಅವನ ಕಡೆಗೆ ತಿರಸ್ಕಾರದಿಂದ**) ಅಃ !

**ಲಕ್ಷ್ಮೀಪತಿರಾವ**—ಅಯ್ಯಾ, ಏನೇನು ಸಂಭವಿಸಿತೆಂಬುವದನ್ನು ಚೆನ್ನಾಗಿ ಹೇಳಿರಿ. ರಂಗೆಯೇ ಇದನ್ನೆಲ್ಲ ಮಾಡಿದಳೋ ?

**ವೆಂಕಟಸ್ವಾಮಿ**—ಆ ಅಮ್ಮನು ರಂಗೆಯೇ ? ಡಾಕಿನಿಯು ! ಅಲ್ಲಲ್ಲ, ಶೂರ್ಪನಖಿಯು ! ನಾನು ಒಳಗೆ ಹೋಗಿ ವೀಣೆಯನ್ನು ಕೂಡಿಸುತ್ತ ಕುಳಿತಿದ್ದೆನು. ಆಗ ಅವಳು ಬಂದು ಆ ವೀಣೆಯನ್ನು ತನ್ನ ಕೈಯಲ್ಲಿ ಕೊಡಿರೆಂದು ಕೇಳಿದಳು. ಅದಕ್ಕೆ ನಾನು–" ಅಮ್ಮಾ, ಅದು ನಿಮ್ಮ ಕೆಲಸವಲ್ಲ. ನಿಮಗೆ ಅದನ್ನು ಕೂಡಿಸಲಿಕ್ಕೆ ಬರಲಾರದು" ಎಂದು ಉತ್ತರ ಕೊಟ್ಟೆನು. ಆಗ ಅವಳು ಒಮ್ಮೆಲೇ ವೀಣೆಯನ್ನು ಮೇಲಕ್ಕೆತ್ತಿ ಅದನ್ನು ನನ್ನ ತಲೆಯ ಮೇಲೆ ಅಪ್ಪಳಿಸಿದಳು. ಅದರಿಂದ ನನ್ನ ತಲೆಗೆ ನೋವು ಆಗಿ ರಕ್ತ ಪ್ರವಾಹವು ನಡೆದಿರುತ್ತದೆ. ಸ್ವಾಮೀ, ನನಗೆ ವೇದನೆಯು ಬಹಳವಾಗಿರುತ್ತದೆ. (**ಎಂದು ಅಳುತ್ತಾನೆ**)

**ಬಾಪೂರಾವ**—ಪ್ರತಾಪರಾವ, ನಿಮ್ಮ ಎದೆಯನ್ನು ಸ್ವಲ್ಪ ಹಿಡಿದು ಪರೀಕ್ಷಿಸಲೇನು ? ಬೇಕಾದರೆ ನಾನು ನಿಮ್ಮ ಕೂಡ ಮಾಡಿದ ಜಿದ್ದನ್ನು ತಿರುಗಿ ತೆಗೆದುಕೊಳ್ಳುತ್ತೇನೆ.

**ಪ್ರತಾಪರಾವ**—ನಿಮ್ಮದೇ ಎದೆಯು ಮೊದಲಿಗೆ ಒಡೆದು ನೀರಾದಂತೆ ಕಾಣುತ್ತದೆ. ಆದುದರಿಂದ ನೀವೇ ಬೇಕಾದರೆ ನಿಮ್ಮ ಮನೆಯ ದಾರಿಯನ್ನು ಹಿಡಿಯ ಬಹುದು. ಅಂದರೆ ನಿಮಗೆ ಸ್ವಲ್ಪ ಧೈರ್ಯವು ಬಂದೀತು. ಇದಲ್ಲದೆ ನೀವು ಸೋತ ತರುವಾಯ ನನಗೆ ಕೊಡಬೇಕಾಗುವ ರೂಪಾಯಿಗಳನ್ನು ಚೀಲದೊಳಗೆ ತುಂಬಿ ಕೊಂಡು ಬರಲಿಕ್ಕೆ ನಿಮಗೆ ಸಾಕಷ್ಟು ಅವಕಾಶವು ದೊರಕೀತು. ನೀವು ಹೋಗು ವಾಗ ನಿಮ್ಮ ಸಂಗಡ ಗಾಯಕನನ್ನು ಕರೆದುಕೊಂಡು ಹೋಗಿರಿ. ಅಂದರೆ ಊರ ಜನರು “ ಈ ಬಂಟರು ಎತ್ತ ಕಡೆಯಿಂದ ಬಂದರು? ” ಎಂದು ನಿಮ್ಮಿಬ್ಬರ ಕಡೆಗೂ ಬಹಳ ಆಶ್ಚರ್ಯದಿಂದ ನೋಡುತ್ತ ನಿಂತುಕೊಳ್ಳುವರು !

**ವೆಂಕಟಸ್ವಾಮಿ**—( ತನ್ನಷ್ಟಕ್ಕೆ ) ಎಲೋ ನೀಚಾ, ಪ್ರತಾಪರಾಯಾ ! ನಾನು ನಿನ್ನ ಸ್ನೇಹಿತನಾದುದರಿಂದ ನನ್ನ ಇಂಗಿತವನ್ನೆಲ್ಲ ನೀನು ಚೆನ್ನಾಗಿ ಬಲ್ಲಿ. ಹೀಗಿದ್ದು ನೀನು ನನ್ನ ಚೇಷ್ಟೆಯನ್ನು ಮಾಡುತ್ತಿಯಾ ? ಒಳ್ಳೇದು. ಆ ಅರಿಷ್ಟವು ಒಮ್ಮೆ ನಿನ್ನ ಕೊರಳಿಗೆ ಬಿದ್ದ ಮೇಲೆ ಯಾರು ನಗುತ್ತಾರೋ ನೋಡೋಣ.

**ಲಕ್ಷ್ಮೀಪತಿರಾವ**—ಪ್ರತಾಪರಾವ, ಮತ್ತು ಬಾಪೂರಾವ ! ನೀವಿಬ್ಬರೂ ನಿಮ್ಮ ಜಗಳವನ್ನು ಒಂದು ಕ್ಷಣಹೊತ್ತಿನ ತನಕ ಬಿಡಿರಿ. ನನಗಂತೂ ವೆಂಕಟಸ್ವಾ ಮಿಯ ವೃತ್ತಾಂತವನ್ನು ಪೂರ್ಣವಾಗಿ ವಿಚಾರಿಸಿಕೊಂಡು ಹೋಗಿ ನಮ್ಮ ಮನೆಯ ವ್ಯವಸ್ಥೆಯನ್ನು ಚೆನ್ನಾಗಿ ಸರಿಪಡಿಸಬೇಕಾಗಿರುತ್ತದೆ. ಅಯ್ಯಾ, ಮುಂದೇನಾಯಿತು? ಹೇಳು.

**ವೆಂಕಟಸ್ವಾಮಿ**—ಸ್ವಾಮಿ, ನಾನು ಬಡವನೆಂದು ಇವರು ನನ್ನ ಬಗ್ಗೆ ನಗೆಯಾಡುತ್ತಾರೆ. ನನಗೆ ಚೇಷ್ಟೆಯನ್ನು ಮಾಡುತ್ತಾರೆ. ದೇವರು ಅವರನ್ನು ನೋಡಿಕೊಳ್ಳಲಿ. ನಾನು ಆ ಅಮ್ಮನವರಿಗೆ ವೀಣೆಯ ಕಿವಿಯನ್ನು ಈ ಪ್ರಕಾರ ( ತನ್ನ ಬೆರಳುಗಳಿಂದ ತಿರುವಿ ತೋರಿಸಿ ) ತಿರುವಿರೆಂದು ಹೇಳಿದನು. ಅದಕ್ಕೆ ಅವರು ನನ್ನದೇ ಕಿವಿಯನ್ನು ತಿರುವಿಬಿಟ್ಟರು! ಮೇಲಾಗಿ ನನಗೆ ಬೈದು ನನ್ನನ್ನು ಮೈಹುಳಿ ಥಳಿಸಿದರು! ನನ್ನ ಮೈಯೆಲ್ಲ ನೋವು ಆಗಿರುತ್ತದೆ! ನನಗೆ ಕತ್ತೆಯೆಂದರು ! ಅಧಿಕಪ್ರಸಂಗಿಯೆಂದರು ! ಅವ್ವಾಳಿಯೆಂದರು ! ನಾನು ನನ್ನ ಜೀವ ಉಳಿಸಿಕೊಂಡು ಓಡಿ ಬರಬೇಕಾದರೆ ಸಾಕುಸಾಕಾಗಿ ಹೋಯಿತು.

( ಪ್ರತಾಪರಾಯನ ಕಡೆಗೆ ಸಿಟ್ಟಿನಿಂದ ನೋಡುತ್ತ ) ಆ ಅಮ್ಮನವರು ತಮ್ಮ ಗಂಡನನ್ನು ನುಂಗಿ ನೀರು ಕುಡಿದು ಬಿಟ್ಟಾರೆಂದು ನಾನು ನಿಶ್ಚಯವಾಗಿ ಹೇಳುತ್ತೇನೆ.

**ಬಾಪೂರಾವ—** ಅಯ್ಯಾ! ನೀವು ಕೊನೆಗೆ ಕೊಟ್ಟ ಮಾತಿನ ಪೆಟ್ಟು ಚೆನ್ನಾಗಿ ಹತ್ತಿತು ಬಲ್ಲಿರಾ? ಹೌದಲ್ಲಿರಿ ಪ್ರತಾಪರಾಯರೆ?

**ಪ್ರತಾಪರಾವ—** ಮಾತಿನ ಪೆಟ್ಟು ಯಾರು ಕೊಟ್ಟರು! "ನನಗೆ ಅವ್ವಾಳಿ ಅಂದರು. ನಾನು ಓಡಿ ಬಂದೆ" ಎಂದು ನಿಮ್ಮ ಮುಂದೆ ನೀಲಾಂಬರಿ ರಾಗವನ್ನು ಹಾಡುವ ಗಾಯಕನಲ್ಲವೇ? ವಾಃ. ಇಂಥ ಗಟ್ಟಿಗರು ಪೆಟ್ಟು ಕೊಡದೆ ಇನ್ನಾರು ಕೊಟ್ಟಾರು? ಅದಂತೂ ಹೋಗಲಿ ಬಿಡಿರಿ. ಈ ವೃತ್ತಾಂತವನ್ನು ಕೇಳಿದಾರಭ್ಯ ಅವಳನ್ನೇ ಲಗ್ನ ಮಾಡಿಕೊಳ್ಳಬೇಕೆಂದು ನನ್ನ ನಿಶ್ಚಯವು ಸಂಪೂರ್ಣವಾಗಿ ಆಗಿರುತ್ತದೆ. ನನ್ನಂಥ ಬಾಹದ್ದೂರ ಮೊಂಡ ಗಂಡನಿಗೆ ಇಂಥ ತುಂಟ ಹೆಂಡತಿಯೇ ಇರತಕ್ಕದ್ದು. ಮೇಣದ ಗೊಂಬೆಯನ್ನು ಲಗ್ನ ಮಾಡಿಕೊಂಡು ದೇವರ ಮನೆಯಲ್ಲಿ ಕುಳ್ಳಿರಿಸಿ ಪೂಜೆಮಾಡತಕ್ಕಂಥ ಗಂಡಸು ನಾನಲ್ಲ. ಲಕ್ಷ್ಮೀಪತಿರಾವ, ಇನ್ನು ಏಕೆ ತಡಮಾಡುತ್ತೀರಿ? ನನಗೆ ಅವಳನ್ನು ಲಗ್ನ ಮಾಡಿ ಕೊಡುತ್ತೀರೋ ಇಲ್ಲೋ? ಅವಳನ್ನು ಯಾವಾಗ್ಗೆ ನೋಡೇನು ಮತ್ತು ಅವಳ ಕೂಡ ಯಾವಾಗ್ಗೆ ಮಾತಾಡೇನು ಎಂದು ನನ್ನ ಮನಸ್ಸು ಹಾತೊರೆಯುತ್ತದೆ.

**ಲಕ್ಷ್ಮೀಪತಿರಾವ—** ( ಗಾಯಕನನ್ನುದ್ದೇಶಿಸಿ ) ಅಯ್ಯಾ! ನೀನು ಒಳಗೆ ಹೋಗಿನ್ನು. ನಾನು ಈ ಬಗ್ಗೆ ಚೆನ್ನಾಗಿ ವ್ಯವಸ್ಥೆಯನ್ನು ಮಾಡುವೆನು. ನೀನು ನನ್ನನ್ನು ನಾಳೆ ಕಾಣು. ( ಗಾಯಕನು ಒಳಗೆ ಹೋಗುತ್ತಾನೆ ) ಪ್ರತಾಪರಾವ! ರಂಗೆಯನ್ನು ಬೇಗನೆ ಇತ್ತ ಕಡೆಗೆ ಕಳುಹಿಸುತ್ತೇನೆ. ನಾನಾದರೂ ನಿಮ್ಮ ಸಮೀಪದಲ್ಲಿಯೇ ಇರುವೆನು. ಅವಳು ಲಗ್ನ ಮಾಡಿಕೊಳ್ಳಲಿಕ್ಕೆ ಒಪಂಬಟ್ಟ ಕೂಡಲೆ ನನ್ನನ್ನು ಕೂಗಿರಿ. ನಾನು ಹೊರಟು ಬರುತ್ತೇನೆ. (ಒಳಗೆ ಹೋಗುತ್ತಾನೆ)

**ಬಾಪೂರಾವ—** ಈಗಿನ ಪ್ರಸಂಗವು ಮಾತ್ರ ಬಹಳೇ ಪ್ರೇಕ್ಷಣೀಯವಾಗುವದು. ಆದರೆ ಅದನ್ನು ಮಾತ್ರ ನನ್ನಿಂದ ಕಣ್ಣಾರೆ ನೋಡುವದಾಗದು. ನಮಸ್ಕಾರ. ಈ ನಮಸ್ಕಾರವು ಕಡೆಯದಾಗಬಾರದೆಂತಲೂ, ನೀವು ಈ

ಪ್ರಸಂಗದೊಳಗಿಂದ ಸುಖರೂಪವಾಗಿ ಪಾರಾಗಬೇಕೆಂತಲೂ ನಾನು ದೇವರನ್ನು ಅನನ್ಯಭಾವದಿಂದ ಪ್ರಾರ್ಥಿಸುತ್ತೇನೆ.

**ಪ್ರತಾಪರಾವ**—ಇಷ್ಟೇಕೆ ಶ್ರಮ ಮಾಡುತ್ತೀರಿ ? ಬೇಕಾದರೆ ನೀವು ಜಿದ್ದು ಕಟ್ಟಿದ ರುಪಾಯಿಗಳು ಉಳಿಯಬೇಕೆಂದು ದೇವರನ್ನು ಪ್ರಾರ್ಥಿಸಿರಿ. **(ಬಾಪೂರಾಯನು ಹೋಗುತ್ತಾನೆ)** ಈಗ ನನ್ನ ಪರೀಕ್ಷೆಯ ಹೊತ್ತು ನಿಜವಾಗಿಯೂ ಬಂದಿತು. ಈ ಪ್ರಕರಣವು ಸ್ವಲ್ಪ ಜಡವಿರುವಂತೆ ಕಾಣುತ್ತದೆ. ಇಷ್ಟೊತ್ತಿನ ತನಕ ನಾನು ಬಹಳ ಜಂಬದಿಂದ ದೊಡ್ಡ ದೊಡ್ಡ ಮಾತುಗಳನ್ನು ಆಡಿದೆನು. ಆದರೆ ಮನಸ್ಸಿನಲ್ಲಿ ಸ್ವಲ್ಪ ಹೆದರಿಕೆಯು ಇರುತ್ತದೆ. ಅಂದಮೇಲೆ ಕೈಯಲ್ಲಿ ಹಿಡಿದ ಕೆಲಸವನ್ನು ಅಧೈರ್ಯದಿಂದ ನಡುವೇ ಬಿಟ್ಟುಕೊಟ್ಟು ಓಡಿಹೋಗಬೇಕೋ ? ಛೆ ! ನನ್ನಿಂದಂತೂ ಹಾಗೆ ಎಂದಿಗೂ ಆಗದು. ಇಷ್ಟು ದಿವಸ ಬೇಕುಬೇಕಾದಂಥ ಜೀವದ ಮೇಲಿನ ಪ್ರಸಂಗಗಳು ಬಂದರೂ ಅವುಗಳೊಳಗಿಂದ ಪಾರಾದೆನು. ಮೂಗು ಮೇಲೆ ಮಾಡಿಕೊಂಡು ಬಂದಂಥ ವೈರಿಗಳನ್ನು ಮಣ್ಣುಪಾಲು ಮಾಡಿದೆನು. ಈ ರೀತಿಯಿಂದ ನಾನು ಸಂಪಾದಿಸಿದ ಲೌಕಿಕವನ್ನು ಒಬ್ಬ ಒಡಕ ಬಾಯಿಯ ತಾಟಗಿತ್ತಿಗೆ ಅಂಜಿ ಕಳೆದುಕೊಳ್ಳತಕ್ಕದ್ದೇ ? ಈ ಪ್ರತಾಪನು ಅಂಥವನಲ್ಲ. ಲೌಕಿಕದ ಮಾತಂತೂ ಒತ್ತಟ್ಟಿಗಿರಲಿ. ಇಂಥ ಸ್ತ್ರೀಯು ಒಂದು ವೇಳೆ ಗಂಡನಿಗೆ ಒಲಿದರೆ ಅವಳಂಥ ಸಂಸಾರದಕ್ಷಳು ಮತ್ತು ಗಂಡನ ಹಿತಚಿಂತಕಳು ಎಲ್ಲಿಯೂ ಸಿಗಲಿಕ್ಕಿಲ್ಲ. ಇವಳ ಉದ್ದಾಮತನವು ಇವಳ ಮೈಯೊಳಗಿನ ನೀರಿನ ಕುದಿಯಿಂದ ಮೇಲಕ್ಕೆ ಬಂದ ನೊರೆಯು ಇರುತ್ತದೆಂದು ಹೇಳಬಹುದು. ಇದು ಕಡೆಯ ತನಕ ಹೀಗೆಯೇ ಉಳಿಯಲಿಕ್ಕಿಲ್ಲ. ಈ ನೊರೆಯು ಒಮ್ಮೆ ಹೊರಟುಹೋಯಿತೆಂದರೆ ಕೆಳಗೆ ಸ್ಫಟಿಕದಂಥ ನಿರ್ಮಲವಾದ ನೀರು ಇದ್ದೇ ಇರುವವು. ತೀರಿತು. ಏನಾಗುವದಾಗಲಿ. ನಾನು ಅವಳನ್ನು ವಶಮಾಡಿಕೊಳ್ಳತಕ್ಕವನೇ. ಅಹಹ ! ಇಲ್ಲಿಯೇ ಅವಳು ಬಂದಳು. ಏನಿವಳ ಸೌಂದರ್ಯವು ! ಏನಿವಳ ಮೋಹಕವಾದ ಮೈಕಟ್ಟು ! ಛೆ ! ಇಂಥ ರತ್ನವನ್ನು ನಿರಾಕರಿಸತಕ್ಕದ್ದೇ ? ನಾನೇನೂ ಇಷ್ಟು ಮೂರ್ಖನಲ್ಲ. ಪ್ರತಾಪಾ, ಎಚ್ಚರಿಕೆಯಿಂದಿರು. ಎರಳೆಯು ಬಹಳ ಉಗ್ರವಿರುತ್ತದೆ. ಯಾವಾಗ್ಗೆ ಮೈಮೇಲೆ ಬಂದು ಅಪಾಯ ಮಾಡೀತೆಂಬುವದನ್ನು ಹೇಳಲಿಕ್ಕಾಗದು. ಚೆನ್ನಾಗಿ ಲಕ್ಷ್ಯ

ಎಟ್ಟು ಬೇಟೆಯನ್ನು ಸಾಧಿಸು. ಬಹಳ ಎಚ್ಚರಿಕೆ ! (**ತ್ರಾಟಿಕೆಯು ಬರುತ್ತಾಳೆ**)
(**ಅವಳ ಕಡೆಗೆ ನೋಡುತ್ತ ಗಟ್ಟಿಸಿ**) ಅಹಹ ! ಈಗ ಎಷ್ಟು ಬೆಳಕು ಬಿದ್ದಿತು ! ನಿಜವಾಗಿಯೂ ಆಕಾಶದಲ್ಲಿಯ ಚಂದ್ರನು ಕೆಳಗೆ ಇಳಿದು ಬಂದನು ! ಏ ರಂಗೂ, ಇಲ್ಲಿ ಬಾ. ನೀನು ನಿನ್ನ ತಂದೆಯ ಅಪ್ಪಣೆಯನ್ನು ಅನುಸರಿಸಿ ಇಲ್ಲಿಗೆ ಬಂದ ಸಂಗತಿಯು ಮೇಲಿಂದ ನೋಡಿದರೆ ನೀನು ನಿನ್ನ ತಾಯಿತಂದೆಗಳ ಆಜ್ಞೆಯನ್ನು ಪಾಲಿಸುವಂಥ ನಮ್ರವಾದ ಕುಮಾರಿಯೆಂಬದು ಸ್ಪಷ್ಟವಾಗಿ ಸಿದ್ಧವಾಗುತ್ತದೆ.

**ತ್ರಾಟಿಕಾ** — ಹೊ. ಹೀಗೇನು ? ಅಪ್ಪನು ನನ್ನನ್ನು ಇಲ್ಲಿಗೆ ಕಳಿಸಿದ್ದು ಇದಕ್ಕಾಗಿಯೇ ಎಂದು ಕಾಣುತ್ತದೆ ! ಏನು ಪ್ರಾಮಾಣಿಕತನವಿದು ? ಈ ಹೊತ್ತು ಅಪ್ಪನು ನನ್ನ ಮೇಲೆ ಏಕೆ ವಿಶೇಷ ಪ್ರೇಮವನ್ನು ತೋರಿಸುತ್ತಾನೆಂಬ ಬಗ್ಗೆ ನನಗೆ ಮೊದಲೇ ಸಂಶಯ ಬಂದಿತ್ತು. ಅವನು ನನ್ನ ಕಡೆಗೆ ಬಂದು ಮೃದು ಮಧುರವಾದ ಶಬ್ದಗಳಿಂದ—"ಅವ್ವಾ ರಂಗೂ, ಈಹೊತ್ತುನನ್ನ ಸ್ನೇಹಿತರು ಮನೆಗೆ ಬರತಕ್ಕವರಿದ್ದಾರೆ. ನೀನೇ ಸ್ವತಃ ತೋಟಕ್ಕೆ ಹೋಗಿ ನಮ್ಮ ಆಳಿನ ಕಡೆಯಿಂದ ಉತ್ತಮ ಜಾತಿಯ ಹಣ್ಣುಗಳನ್ನು ಹರಿಸಿಕೊಂಡು ಬಾ. ಹಣ್ಣಿನ ಪರೀಕ್ಷೆಯನ್ನು ನೀನು ಚೆನ್ನಾಗಿ ಬಲ್ಲೆ. ಆದುದರಿಂದ ಯಾವ ಯಾವ ಹಣ್ಣುಗಳನ್ನು ಹರಿಯಬೇಕೆಂಬುವದನ್ನು ನೀನೇ ಆ ಆಳಿಗೆ ತೋರಿಸು" ಎಂದು ನನ್ನ ಮೋರೆಯ ಮೇಲೆ ಕೈಯಾಡಿಸಿ ಹೇಳಿದನು. ಒಳ್ಳೇದು. ಒಳ್ಳೇದು, ಅಪ್ಪಾ! ಇದರ ಸೇಡನ್ನು ನಾನು ಒಮ್ಮೆ ತೀರಿಸಿಕೊಳ್ಳದೆ ಬಿಡಲಿಕ್ಕಿಲ್ಲ. (**ಪ್ರತಾಪರಾಯನನ್ನುದ್ದೇಶಿಸಿ**) ಎಲೋ ಮೂರ್ಖಾ ! ನಿನಗೆ ನಿನ್ನ ಮನೆಗೆ ಸುರಕ್ಷಿತವಾಗಿ ಹೋಗಿ ಮುಟ್ಟುವ ಮನಸ್ಸಿದ್ದರೆ ಇತ್ತಿಂದಿತ್ತಲೇ ಹೋಗು. ಇಲ್ಲದಿದ್ದರೆ ಈ ತ್ರಾಟಿಕೆಗೂ ನಿನಗೂ ಗಂಟು ಇರುವದು ಕಂಡಿಯಾ ?

**ಪ್ರತಾಪರಾವ**—ರಂಗೂ, ನನಗೂ ನಿನಗೂ ಜನ್ಮದ ಗಂಟು ಬೀಳಬೇಕೆಂಬ ಇಚ್ಛೆಯಿಂದಲೇ ನಾನು ಇಲ್ಲಿಗೆ ಬಂದಿರುತ್ತೇನೆ. ನಿನ್ನ ಇಚ್ಛೆಯಾದರೂ ಅದರಂತೆಯೇ ಇದ್ದರೆ ನನಗೆ ಹೆಚ್ಚಿನದೇನು ಬೇಕಾಗಿರುತ್ತದೆ ?

**ತ್ರಾಟಿಕಾ**— ಮರುಳಾ, ಜನ್ಮದ ಗಂಟಲ್ಲ, ಪ್ರಾಣದ ಗಂಟೆಂದು ತಿಳಿದುಕೋ.

**ಪ್ರತಾಪರಾವ**— ಒಂದೇ ಪ್ರಾಣವೇನು ? ನೀನು ನನಗೆ ದೊರಕಿದರೆ ನನಗೆ ಪ್ರಪಂಚಪ್ರಾಣವು ದೊರಕಿದಂತಾಗುವದು. ವ್ಹಾಃ ರಂಗೂ, ನಿನ್ನಂಥ ಚತುರ ಹುಡಿಗೆಯನ್ನು ನಾನೆಲ್ಲಿಯೂ ನೋಡಲಿಲ್ಲ !

**ತ್ರಾಟಿಕಾ**—ಹೆ! ಇಂಥ ಹಾಳು ರಗಳೆಯ ಮಾತು ನನ್ನ ಕೆಲಸಕ್ಕೆ ಸರ್ವಥಾ ಉಪಯೋಗ ಬೀಳಲಾರದು. ಯಾವ ಹೆಸರಿನಿಂದ ನನ್ನನ್ನು ಕರೆದೆ ? ನಿನಗೆ ನನ್ನ ಹೆಸರು ಗೊತ್ತಿರದಿದ್ದರೆ ಎರಡನೆಯವರನ್ನು ವಿಚಾರಿಸಿಕೊಂಡು ಬರತಕ್ಕದ್ದಿತ್ತು. ಮತ್ತು ನನ್ನನ್ನು ಒಂಟಿ ಹೆಸರಿನಿಂದ ಕರೆಯಲಿಕ್ಕೆ ನಿನಗೆ ಹೇಗೆ ನಾಚಿಕೆಯು ಬರಲಿಲ್ಲ ? ನನ್ನ ಹೆಸರಿನ ಮುಂದೆ " ಅವ್ವಾ " ಎಂತ ಉಪಯೋಗಿಸಿ " ಏನಿರಿ, ಹೋಗಿರಿ, ಬನ್ನಿರಿ " ಎಂದು ಅಂದಿದ್ದರೆ ನಿನ್ನ ನಾಲಿಗೆಯು ಕಡಿದು ಬೀಳುತ್ತಿತ್ತೇ?

**ಪ್ರತಾಪರಾವ**—ಏನು, ನಿನ್ನ ಹೆಸರನ್ನು ಬಾಯಿ ತುಂಬ ಕರೆದು ನಿನಗೆ "ಏನಿರಿ, ಬನ್ನಿರಿ ಹೋಗಿರಿ " ಎಂದು ಅನ್ನಬೇಕೇ ? ಇಂಥ ಪ್ರಮಾದವು ನನ್ನಿಂದ ಎಂದಾದರೂ ಆದರೆ ನನ್ನನ್ನು ಶೂಲಕ್ಕೇರಿಸು. ಬಿಡಬೇಡ. ಬಾಯಿ ತುಂಬ ಹೆಸರನ್ನು ಎಂಥವರಿಗೆ ಕರೆಯಬೇಕು? ಹತ್ತು ಮಕ್ಕಳನ್ನು ಹಡೆದವರಿಗೆ, ತಲೆಯ ಕೂದಲು ಬೆಳ್ಳಗಾದವರಿಗೆ, ಬಾಯೊಳಗಿನ ಹಲ್ಲು ಬಿದ್ದವರಿಗೆ ಮತ್ತು ಮೋರೆಯು ನಿರಿಗೆಗಟ್ಟಿದವರಿಗೆ ಆ ಪ್ರಕಾರ ಕರೆದರೆ ಶೋಭಿಸೀತು ! ಆದರೆ ನಿನ್ನಂಥ ತಾರುಣ್ಯದಿಂದ ತುಂಬಿತುಳುಕುವ ಕುಮಾರಿಕೆಯ ಹೆಸರನ್ನು ನನ್ನಂಥ ತರುಣನು ಬಾಯಿ ತುಂಬ ಕರೆದರೆ ಜನರು ನನಗೇನಂದಾರು ? ರಂಗೂ, ನಿನ್ನ ಮುಖ ಲಾವಣ್ಯವನ್ನೂ, ಮೃದು ಶಬ್ದಗಳನ್ನೂ, ಮಂದ ನಡಿಗೆಯನ್ನೂ, ಮಧುರಹಾಸ್ಯವನ್ನೂ, ಒಯ್ಯಾರದ ನೋಟವನ್ನೂ, ನಿನ್ನ ಮುರಕನ್ನೂ, ನಿನ್ನ ಮುರವತ್ತನ್ನೂ ನೋಡಿ ನಾನು ದಂಗು ಬಡಿದು ಹೋಗಿರುತ್ತೇನೆ. ನಟಿಯು ರಂಗಭೂಮಿಯಮೇಲೆ ಬಂದ ಮಾತ್ರದಿಂದ ನಾಟಕಕ್ಕೆ ರಂಗು ತುಂಬುವಂತೆ ನಿನ್ನನ್ನು ನೋಡಿದ ಮಾತ್ರದಿಂದ ನನ್ನ ಮನಸ್ಸಿನ ವ್ಯಾಪಾರಕ್ಕೆ ರಂಗು ತುಂಬಿರುತ್ತದೆ. ಆದುದರಿಂದ ನಾನು ನಿನ್ನನ್ನು " ರಂಗೂ " ಎಂದು ಕರೆಯುವವನೇ ಸರಿ.

**ತ್ರಾಟಿಕಾ**—ಸಾಕು. ಈ ಬಾಯಿಬಡಕತನವು ಸಾಕಿನ್ನು. ನನಗೆಂದಿಗೂ ಇದು ತಡೆಯಲಿಕ್ಕಿಲ್ಲ. ನೀನು ನನ್ನನ್ನು ಕರೆಯತಕ್ಕದ್ದಿದ್ದರೆ ತ್ರಾಟಿಕಾ ಎಂತಲೇ ಕರೆ. ನೀನು ನನ್ನನ್ನು ಹೆಸರುಗೊಂಡು ಕರೆದರೆ ನಿನಗೆ ಯಾವಾಗಲು ಒಂಟಿಯುಂತೆ

ಒದರಿಸುತ್ತೇನೆ. ಎಚ್ಚರಿಕೆಯಿಂದಿರು.

**ಪ್ರತಾಪರಾವ**—ವ್ಹಾ಼ಃ ಬಹಳೇ ಉತ್ತಮವು. ಕುರುಡನು ಒಂದು ಕಣ್ಣು ಬೇಡಿಕೊಳ್ಳುವಾಗ ದೇವರು ಎರಡು ಕೊಟ್ಟಂತಾಯಿತು. ನಾನು ಬರೇ "ರಂಗೂ" ಎಂದು ಕರೆಯುವ ಅಪ್ಪಣೆಯನ್ನು ಬೇಡಿಕೊಂಡೆನು. ಆದರೆ ನೀನು ನನ್ನ ಮೇಲೆ ಅದಕ್ಕೂ ಹೆಚ್ಚಿಗೆ ಅನುಗ್ರಹ ಮಾಡಿದೆ. ನನ್ನ ಮನಸ್ಸಿನ ಉದ್ದೇಶವನ್ನು ನೀನು ಬಹಳ ಚೆನ್ನಾಗಿ ತಿಳಕೊಂಡೆ. ವ್ಹಾ಼ಃ ನಾನು ಧನ್ಯನಾದೆನು. ನಾನು ಇಲ್ಲಿಯತನಕ ಬಂದದ್ದು ಸಾರ್ಥಕವಾಯಿತು.

**ತ್ರಾಟಿಕಾ**—ನಾನು ಇಷ್ಟುದಿವಸ ಕಿವಿಯಿಂದ ಮಾತ್ರ ಅಧಿಕಪ್ರಸಂಗಿಗಳ ಮತ್ತು ಮೂರ್ಖರ ಕಥೆಗಳನ್ನು ಕೇಳುತ್ತಿದ್ದೆನು. ಈಗ ಪ್ರತ್ಯಕ್ಷ ನೋಡುವ ಪ್ರಸಂಗವು ಬಂದಿತು. ಕಿವಿಗಳು ಸ್ವಲ್ಪ ಉದ್ದವಿದ್ದರೆ ತೀರಿಹೋಗುತ್ತಿತ್ತು. ಅವಿಷ್ಟು ಮಾತ್ರ ಯಾಕೋ ಇಲ್ಲ!

**ಪ್ರತಾಪರಾವ**—ವಾಹವ್ವಾ! ಏನು ಅಲಂಕಾರವಿದು ? ಅಂತೇ ನೀನು ನನ್ನ ಮನಸ್ಸಿನಲ್ಲಿ ಇಷ್ಟು ತುಂಬಿರುತ್ತೀ. ಏನು ಈ ವಿನಯ! ಏನು ಈ ಚಾತುರ್ಯ! ನೀನು ನನಗೆ ಗರ್ದಭನೆಂದು ಅನ್ನಲಿಲ್ಲ. ಇಷ್ಟರಿಂದಲೇ ನನಗೆ ನಿನ್ನ ಮಾರ್ಮಿಕ ತನದ ಪರೀಕ್ಷೆಯಾಯಿತು. ನಿನ್ನ ಸ್ಥಳದಲ್ಲಿ ಮತ್ತೊಬ್ಬರು ಯಾರಾದರೂ ಇದ್ದರೆ ನನಗೆ ಆಗಲೇ ಕತ್ತೆಯೆಂದು ಅನ್ನುತ್ತಿದ್ದರು. ನೀನು ನನಗೆ ಕತ್ತೆಯೆಂದು ಅಂದಿದ್ದರೂ ನನಗೆ ಅದರಿಂದ ಅಸಂತೋಷವಾಗುತ್ತಿದ್ದಿಲ್ಲ. ನಿನ್ನಂಥ ಸುಂದರಿಯನ್ನು ಬೆನ್ನಮೇಲೆ ಕುಳ್ಳಿರಿಸಿಕೊಳ್ಳುವ ಲಾಭವು ನನಗೆ ಒದಗಿದರೆ ನನ್ನ ದೈವಕ್ಕೆ ಎಣೆಯೇ ಇಲ್ಲ! ಹೂ, ರಂಗೂ, ಇನ್ನು ಮೇಲೆ ಏಕೆ ಅನುಮಾನ ಮಾಡುವೆ ? ನಿನ್ನ ಶರೀರದ ಸ್ಪರ್ಶದಿಂದ ಈ ನನ್ನ ಬೆನ್ನನ್ನು ತೀವ್ರವಾಗಿ ಪವಿತ್ರಮಾಡು. **( ಆಕೆಯ ಮುಂದೆ ಬೆನ್ನುಕೊಟ್ಟು ನಿಲ್ಲುತ್ತಾನೆ. )**

**ತ್ರಾಟಿಕಾ**— **(ಅವನ ಬೆನ್ನಮೇಲೆ ಗುದ್ದಿ)** ಎಲೋ ಡೊಣಗಾ, ಈಗ ನಿನ್ನ ಬೆನ್ನು ಪವಿತ್ರವಾಯಿತೇ ?

**ಪ್ರತಾಪರಾವ**— ನಿಶ್ಚಯವಾಗಿ ಆಯಿತು. ಇದರಲ್ಲೇನು ಸಂಶಯ ? ಮತ್ತು ಈ ನಿನ್ನ ಕೃತ್ಯದ ಮರ್ಮವು ನನ್ನ ಲಕ್ಷ್ಯದಲ್ಲಿ ಚೆನ್ನಾಗಿ ಬಂದಿತು. ಅಹಹ! ಎಂಥ ಚಾತುರ್ಯವಿದು ? ನಿನ್ನ ದಾಸನಾದ ಪ್ರತಾಪನು ಪ್ರವಾಸದಿಂದ ದಣಿದಿರುತ್ತಾನೆಂದು ಆತನ ಬೆನ್ನು ಗುದ್ದಿ ಆತನ ಮೈಯನ್ನು ಹೌರಗೆ ಮಾಡಿದೆ. ಅದಾದರೂ ಎಷ್ಟು ಸೂಕ್ಷ್ಮತನದಿಂದ ? ದೂರಿಂದ ನೋಡುವ ಅಜ್ಞಾನ ಜನರಿಗೆ ಮಾತ್ರ ನೀನು ನನ್ನನ್ನು ಹೊಡೆದಂತೆ ಕಾಣಿಸಿತು. ಅಹಹ! ಏನು ನಿನ್ನ ಪ್ರೇಮವಿದು ? ಇದರಿಂದ ನನಗೆಷ್ಟು ಸೌಖ್ಯವಾಯಿತೆಂದು ಹೇಳಲಿ ? ಲಗ್ನವಾಗುವ ಮುಂಚೆಯೇ ನೀನು ನನ್ನ ಆರೈಕೆಯನ್ನು ಇಷ್ಟುಪರಿ ಮಾಡಿದ ಬಳಿಕ ಲಗ್ನವಾದಮೇಲೆ ಎಷ್ಟು ಮಾಡೀ ? ಇದೇ ಕೆಲಸವನ್ನು ನಾನು ಒಬ್ಬ ನಿತ್ರಾಣಿಯಾದ ಹೆಂಗಸಿಗೆ ಹೇಳಿದ್ದರೆ ಅವಳು " ನನ್ನ ಕೈ ನೋಯುತ್ತವೆ " ಎಂದು ಹೇಳಿ ಇಶ್ ಉಶ್ ಎಂತ ನರಳುತ್ತ ಕುಳಿತುಕೊಳ್ಳುತ್ತಿದ್ದಳು. ಈ ನಿನ್ನ ಗುಣವನ್ನು ತಿಳಿದೇ ನಾನು ನಿನ್ನನ್ನು ವಶಮಾಡಿಕೊಳ್ಳಬೇಕೆಂದು ನಿಶ್ಚಯಿಸಿದ್ದೇನೆ.

**ತ್ರಾಟಿಕಾ**— (ಸಿಟ್ಟಿನಿಂದ ಮೋರೆಯನ್ನು ಕೆಂಪಗೆ ಮಾಡಿ, ಹಲ್ಲು ಕಚ್ಚುತ್ತ, ಕಣ್ಣು ಹಿಗ್ಗಿಸಿ, ಅವನ ಮೈಮೇಲೆ ಹೋಗುತ್ತಾಳೆ. ) ಎಲೋ ನಿರ್ಲಜ್ಜಾ, ಮುರ್ಖಾ, ನಿನಗೆ ನಾಚಿಕೆ, ಮರ್ಯಾದೆ ಮತ್ತು ಸಭ್ಯತನಗಳು ಗೊತ್ತಿಲ್ಲವೇ ? ಬುದ್ಧಿಯನ್ನು ಎತ್ತ ಕಡೆಗೆ ಇಟ್ಟೆ ?

**ಪ್ರತಾಪರಾವ**—ನಿನ್ನಂಥ ಸುಂದರಾಂಗಿಯನ್ನು ನೋಡಿ ನನ್ನಬುದ್ಧಿಯು ಸ್ಥಳಾಂತರವಾಪುದು ಏನಾಶ್ಚ[illegible] ಸಮಯಕ್ಕೆ ನಿನ್ನ ಮುಖಕಮಲವು ಎಷ್ಟು ಮೋಹಕವಾಗಿರುತ್ತದೆಂದು ಹೇಳಲಿ ! ಒಮ್ಮೆಲೆ ನಿನ್ನ ಚುಂಬನ ತೆಗೆದುಕೊಳ್ಳಬೇಕೆಂದು ನನ್ನಮನಸ್ಸು ಹಾತೊರೆಯುತ್ತದೆ. ಅಹಹ! ನಿನ್ನಸೌಮ್ಯತನವನ್ನು ಎಷ್ಟೆಂತ ವರ್ಣಿಸಲಿ! ನಿನಗೆ ತಾಟಗಿತ್ತಿಯಂತೆ ಮೋರೆ ಗಂಟುಹಾಕಲಿಕ್ಕಾಗಲಿ, ಹುಬ್ಬು ಏರಿಸಲಿಕ್ಕಾಗಲಿ, ಕಣ್ಣು ಕೆರಳಲಿಕ್ಕಾಗಲಿ, ಕೈಕಾಲು ಅಪ್ಪಳಿಸಲಿಕ್ಕಾಗಲಿ, ಒಂದು ವೇಳೆ ಯಾರು ಕಲಿಸಿದರೂ ಬರಲಿಕ್ಕಿಲ್ಲ. ಹ! ಹ! ಬೇಡ. ಈ ಪ್ರಕಾರ ಮೂಗು ಏರಿಸಬೇಡ. ನೀನು ಹೀಗೆ ಮಾಡಿದರೆ ನನ್ನ ಜೀವಕ್ಕೆ ಬಹಳ ಕಸವಿಸಿಯಾಗುತ್ತದೆ. ಸ್ವಲ್ಪ ತಡೆ. ನಿನಗೆ ನಿನ್ನ ಮೂಗನ್ನು ಮೇಲೆ ಏರಿಸಲಿಕ್ಕೆ ಎಂದೆಂದಿಗೂ ಬರಬಾರದೆಂದು ನಿನ್ನ ಮೂಗಿನಲ್ಲಿ ಒಂದು ವಜ್ರ ಕೆತ್ತಿದ ದೊಡ್ಡ ನತ್ತನ್ನು ತಂದು ಹಾಕುತ್ತೇನೆ

**ತ್ರಾಟಿಕಾ**—ನಾಚಿಕೆಗೇಡಿತನಕ್ಕೆ ಮಿತಿಯೇ ಉಳಿಯಲಿಲ್ಲವ್ವಾ! ಮೂರ್ಖಾ, ಬಾಸಿಂಗ ಕಟ್ಟಿಕೊಳ್ಳಲಿಕ್ಕೆ ಈಗಲೇ ಸಿದ್ಧನಾಗಬೇಡ. ನೀನು ಶುದ್ಧ ಬಸವಣ್ಣನು! ಆದರೆ ನಿನಗೆ ಕೋಡುಗಳು ಮಾತ್ರ ಕಡಿಮೆ ಇರುತ್ತವೆ!

**ಪ್ರತಾಪರಾವ**—ಇದೆಲ್ಲ ನಿನ್ನ ಮನೋಹರ ಸ್ವರೂಪದ ಮಹಿಮೆಯು! ನಿನ್ನ ಸುಂದರ ರೂಪಕ್ಕೆ ಮೋಹಪಟ್ಟು ನನ್ನಂಥ ವಿಲಾಸ ಪ್ರಿಯನು ಬಸವಣ್ಣನಾಗುವದರಲ್ಲಿ ಆಶ್ಚರ್ಯವೇನು? ನಾನು ಬಸವಣ್ಣನಂತೆ ನಿನ್ನ ಅಪ್ಪಣೆಗೆ ಆಧೀನನಾಗಿಯೇ ನಡೆದುಕೊಳ್ಳಬೇಕೆಂದು ಅಪೇಕ್ಷಿಸುತ್ತೇನೆ. ನಿನ್ನಂಥ ಮುಗದಾಣ ಹಾಕುವವರು ನನಗೆಎಲ್ಲಿಂದ ಸಿಗಬೇಕು?

**ತ್ರಾಟಿಕಾ**—ನಿನ್ನ ಪೊಂಡತನದ ದೆಸೆಯಿಂದ ಊರಲ್ಲಿ ನಿನ್ನ ಮೆರವಣಿಗೆಯನ್ನೇ ಮಾಡಿಸಬೇಕು.

**ಪ್ರತಾಪರಾವ**— ನಿನ್ನನ್ನು ನನ್ನಮುಂದೆ ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ಊರೊಳಗೆಲ್ಲ ಮೆರವಣಿಗೆಯನ್ನು ಮಾಡಿಸಿಕೊಳ್ಳಬೇಕಂತಲೇ ನನ್ನದಾದರೂ ಮನಸ್ಸುಂಟು.

**ತ್ರಾಟಿಕಾ**—ಅವ್ವಯ್ಯಾ! ಇಂಥ ಕಲ್ಲನ್ನು ನಾನು ಎಲ್ಲಿಯೂ ನೋಡಿದ್ದಿಲ್ಲ.

**ಪ್ರತಾಪರಾವ**—ನಾನು ಆ ಪ್ರಕಾರ ಜಡವಿರುತ್ತೇನೆಂಬುವದು ನಿಜವು. ಆದರೆ ಯಾರಿಗೆ? ನನ್ನ ಮತ್ತು ನಿನ್ನ ವೈರಿಗಳಿಗೆ. ನಿನಗೆಂದಿಗೂ ಅಲ್ಲ. ಮಲ್ಲಿಗೆಯ ಹೂವಿನಂತೆ ಕೋಮಲವಾದ ನಿನ್ನಸಂಗಡ ನನ್ನ ಶರೀರ ಸಂಬಂಧವಾದ ಬಳಿಕ ನನ್ನ ಜಡತ್ವವು ಹೇಗೆ ಉಳಿದೀತು?

**ತ್ರಾಟಿಕಾ**—ನನ್ನ ಸೂಕ್ಷ್ಮತನದ ಮಾದರಿಯನ್ನು ನೋಡುವದು ನಿನಗೆ ಇನ್ನೂ ಸಾಕಾಗಿಲ್ಲವೆಂದು ಕಾಣುತ್ತದೆ! ನೋಡಿಕೋ. ಇನ್ನಿಷ್ಟು ನೋಡಿಕೋ! (ಅವನ ಕಪಾಳದ ಮೇಲೆ ಹೊಡೆಯಲಿಕ್ಕೆ ಕೈ ಮುಂದಕ್ಕೆ ಮಾಡುತ್ತಾಳೆ. ಅಷ್ಟರಲ್ಲಿ ಅವನು ಅದೇ ಕೈಯನ್ನು ತನ್ನ ಕೈಯಿಂದ ಹಿಡಿಯುತ್ತಾನೆ.)

**ಪ್ರತಾಪರಾವ**—ಅಹಹ! ನಿನ್ನ ಕೈಗಳು ಎಷ್ಟು ಮೃದು ಇರುತ್ತವೆ! ನಿನಗೆ ನಾನು ಹೂವಿನ ಉಪಮೆಯನ್ನು ಕೊಟ್ಟದ್ದು ಎಷ್ಟು ಯೋಗ್ಯವಿರುತ್ತವೆ! ಏನು ಈ ಸುಗಂಧವು! ನಾನಂತೂ ಈ ಮಕರಂದವನ್ನು ಸೇವಿಸದೆ

ಇಲ್ಲಿಂದ ಎಂದಿಗೂ ಹೋಗಲಾರೆನು. (ಅವಳ ಕೈಯನ್ನು ತನ್ನ ಬಾಯಿಯ ಹತ್ತಿರ ಒಯ್ಯುತ್ತಾನೆ. ಆಗ ಆಕೆಯು ಅದೇ ಕೈಯಿಂದ ಅವನ ಕಪಾಳಮೇಲೆ ಒಂದು ಏಟು ಹೊಡೆಯುತ್ತಾಳೆ. )

**ತ್ರಾಟಿಕಾ**—ಮಕರಂದವನ್ನು ಸೇವಿಸಲಿಕ್ಕೆ ಬೇಕಾಗಿತ್ತಲ್ಲೇ? ಈಗ ಅದು ಒಳ್ಳೇ ರುಚಿ ತೋರಿದ್ದೀತು.

**ಪ್ರತಾಪರಾವ**—ಇದರಲ್ಲೇನು ಸಂಶಯವು ? ಬಹಳ ರುಚಿದೋರಿತು !

**ತ್ರಾಟಿಕಾ**—ಎಲೋ ಕುರುಡಾ, ಹೂವಿನ ಮಕರಂದವು ಮಾತ್ರ ನಿನಗೆ ರುಚಿದೋರಿತು. ಆದರೆ ಹೂವಿಗೆ ಇರುವ ಮುಳ್ಳನ್ನು ಮಾತ್ರ ನೀನು ನೋಡಿಲ್ಲ. ಬಹಳ ಎಚ್ಚರಿಕೆಯಿಂದ ನಡೆ. ಇಲ್ಲದಿದ್ದರೆ ಈ ಮುಳ್ಳುಗಳು (ತನ್ನ ಉಗುರುಗಳನ್ನು ಮತ್ತು ಹಲ್ಲುಗಳನ್ನು ತೋರಿಸಿ ) ನಿನ್ನ ರಕ್ತವನ್ನು ಹೀರಿಕೊಳ್ಳದೆ ಎಂದಿಗೂ ಬಿಡಲಾರವು.

**ಪ್ರತಾಪರಾವ**-- ನೀನು ಹೊರಗೆ ಎಷ್ಟು ಸಿಟ್ಟನ್ನು ತೋರಿಸಿದರೂ ನಿನ್ನ ಮನಸ್ಸಿನೊಳಗಿನ ಅಂತರಂಗವನ್ನು ನಾನು ಚೆನ್ನಾಗಿ ತಿಳಿದುಕೊಂಡಿದ್ದೇನೆ! ಎಷ್ಟು ಮಾರ್ಮಿಕ ಮತ್ತು ಅಲಂಕಾರಿಕ ಭಾಷಣವಿದು ? ಬಾ, ತಡಮಾಡಬೇಡ . ನಿನ್ನ ಉಗುರು ಮತ್ತು ಹಲ್ಲುಗಳೆಂಬ ಮುಳ್ಳಿನಿಂದ ನನ್ನ ಶರೀರವನ್ನು ಚಿತ್ರವಿಚಿತ್ರವಾಗಿ ಮಾಡುವ ಅಧಿಕಾರವು ನಿನಗೆ ದೊರೆಯಬೇಕೆಂತಲೇ ನಾನು ಇಲ್ಲಿಗೆ ಬಂದಿರುತ್ತೇನೆ. ನನಗೆ ಆ ನಿನ್ನ ಮುಳ್ಳಿನಿಂದ ನನ್ನ ರಕ್ತವನ್ನು ಹೀರಿಸಿಕೊಳ್ಳುವಂಥ ಭಾಗ್ಯವು ಉಂಟಾದಲ್ಲಿ ನನಗೆ ಇನ್ನೇತರ ಕೊರತೆಯು ? ಹ ! ನಿನ್ನ ವಾಗ್ಜಾಲವು ನಡೆಯಲಿ. ಇಲ್ಲಿ ಮೂರನೇಯವರು ಯಾರೂ ಇಲ್ಲ.

**ತ್ರಾಟಿಕಾ**—(ತನ್ನಷ್ಟಕ್ಕೆ) ಅಮ್ಮಮ್ಮಾ ! ಈ ಮೊಂಡತನಕ್ಕೆ ಮಿತಿಯೇ ಉಳಿಯಲಿಲ್ಲ. ಮನೆಗೆ ಹೋದೇನಂದರೆ ಮನೆಯ ಬಾಗಿಲವನ್ನು ಮೊದಲೇ ಇಕ್ಕಿಕೊಂಡಿರುತ್ತಾರೆ. ಇದಲ್ಲದೆ ಗಂಡಸರಿಗೆ ಅಂಜಿ ಓಡಿಹೋದರೆ ನಾನು ನಮ್ಮನೆಯವರ ಮುಂದೆ ಮೋರೆಯನ್ನು ಎತ್ತಿ ಹೇಗೆ ಅಡ್ಡಾಡಲಿ ? ಹೇಗಾದರೂ ಮಾಡಿ ಇವನ ಮೋರೆಗೆ ಕಪ್ಪು ಹಚ್ಚಿಯೇ ಇವನನ್ನು ಕಳುಹಿಸತಕ್ಕದ್ದು. (ಬಹಿರಂಗವಾಗಿ) ನೀವು ನಿಮ್ಮ ಬಾಯಿ ಮುಚ್ಚುತ್ತೀರೋ ಇಲ್ಲೋ ? ತಡೆಯಿರಿ. ನಾನು ಈಗಲೇ ಅಪ್ಪನ ಕಡೆಗೆ ಹೋಗಿ ಹೇಳುತ್ತೇನೆ.

**ಪ್ರತಾಪರಾವ** - (ತನ್ನಷ್ಟಕ್ಕೆ) "ನೀನು" ಹೋಗಿ "ನೀವು" ಆದೆನು. ಇದೊಂದು ರೀತಿಯಿಂದ ಉತ್ತಮವೇ ಆಯಿತು. (ಬಹಿರಂಗವಾಗಿ) ಇಲ್ಲಿಯತನಕ ನಿನ್ನ ಸ್ಥಿತಿಯು ಬಂದಿತೇನು ? ಶಹಬಾಸ! ನಿನ್ನ ತೀರ್ಥರೂಪರು ನನಗೆ ಇನ್ನು ಮೇಲೆ ಮಾವನವರಾದರು. ಆದುದರಿಂದ ಅವರಿಗೆ ಹೇಳುವ ಕೆಲಸವು ನನ್ನದು. ನೀನೇನೂ ಅವರ ಮುಂದೆ ಹೇಳುವ ಗೊಡೆವೆಗೆ ಹೋಗಬೇಡ. ಒಂದು ಅಕ್ಷರ ಸಹ ಅವರ ಮುಂದೆ ನುಡಿಯಬೇಡ. ನಾನೇ ಆ ಎಲ್ಲ ವ್ಯವಸ್ಥೆಯನ್ನು ಮಾಡುತ್ತೇನೆ. ನೀನು ನನ್ನ ಪಟ್ಟರಾಣಿಯಾಗಲಿಕ್ಕೆ ಒಪ್ಪಿಕೊಂಡ ಕೂಡಲೆ ನಾನು ನಿನ್ನ ದಾಸನಾಗುತ್ತೇನೆ. ಅಂದಮೇಲೆ ಈ ದಾಸನು ನಿನ್ನ ಸೇವೆಯನ್ನು ಮಾಡಲಿಕ್ಕೆ ಯಾವಾಗಲು ತತ್ಪರನಿರುವನೆಂದು ತಿಳಿದುಕೋ. ಜನರು ಎಷ್ಟು ಕೆಟ್ಟವರಿದ್ದಾರೆ? ಸುಮ್ಮಸುಮ್ಮನೆ ಇವಳಿಗೆ ಉದ್ಧಾಮಳು, ಜಗಳಗಂಟೆಯು, ಮೊಂಡಿಯು ಎಂಬ ವಿಶೇಷಣವನ್ನು ಕೊಡುತ್ತಿದ್ದರು ! ಇಲ್ಲಿ ನೋಡಿದರೆ ಎಲ್ಲ ವಿರುದ್ಧ ಸ್ಥಿತಿಯೇ ಇರುತ್ತದೆ. ಇವಳಂತೂ ನಮ್ರತೆ, ವಿನಯ ಮತ್ತು ಲಜ್ಜಾ ಇವುಗಳ ಮೂರ್ತಿಮಂತ ಪ್ರತಿಮೆಯಾಗಿರುತ್ತಾಳೆ ! ಇವಳು ಎಷ್ಟು ಮಾರ್ಮಿಕ ರೀತಿಯಿಂದ ತನ್ನ ಮನಸ್ಸಿನ ಭಾವವನ್ನು ನನಗೆ ಸೂಚಿಸಿದಳು ? ಒಳ್ಳೇದು. ರಂಗೂ, ನನ್ನ ಮಂಗಲಕಾರ್ಯಕ್ಕೆ ಯಾವ ತಿಥಿಯನ್ನು ಗೊತ್ತುಪಡಿಸಬೇಕು ?

**ತ್ರಾಟಿಕಾ** – ಮರ್ಕಟಾ, ಎಂಥ ತಿಥಿಯನ್ನು ಗೊತ್ತುಪಡಿಸುತ್ತೀ ? ನಿನ್ನ ಪುಣ್ಯತಿಥಿಯು ಯಾವಾಗ್ಗೆ ಬಂದೀತೆಂದು ನಾನು ದಾರೀ ನೋಡುತ್ತೇನೆ.

**ಪ್ರತಾಪರಾವ**—ನನ್ನೊಬ್ಬನದೇ ಏಕೆ? ನನ್ನ ಮತ್ತು ನಿನ್ನ ತಿಥಿ ಎಂದೆನ್ನು. ನನ್ನ ಮತ್ತು ನಿನ್ನ ಲಗ್ನವಾಗುವ ತಿಥಿಯೇ ಅತಿ ಪುಣ್ಯದ ತಿಥಿಯೆಂಬದರಲ್ಲಿ ಸಂಶಯವೇನು ! ನಮ್ಮ ನಿಮ್ಮಂಥ ಜೋಡಿಯು ಈ ತ್ರಿಭುವನದಲ್ಲಿ ಇನ್ನಾವದಾದರೂ ಸಿಕ್ಕೀತೇ ?

**ತ್ರಾಟಿಕಾ** – ಬಾಯಿ ಮುಚ್ಚುತ್ತೀಯೋ ಇಲ್ಲೋ ? ಇಲ್ಲವೆ ನಾನೇ ಅದನ್ನು ಮುಚ್ಚುವಂತೆ ಮಾಡಲೋ ? (**ಮುಷ್ಟಿಯನ್ನು ಮೇಲಕ್ಕೆ ಎತ್ತುತ್ತಾಳೆ.**)

**ಪ್ರತಾಪರಾವ**—ಪ್ರಿಯೇ, ಇಷ್ಟು ಆತುರಳಾಗಬೇಡ. ನಿನ್ನ ಸುಂದರವಾದ ತುಟಿಗಳಿಂದ ನನ್ನ ಬಾಯಿಗೆ ಬೀಗ ಹಾಕುವ ಯೋಗವನ್ನು ನಿನಗೆ ಬೇಗನೆ ತಂದು ಕೊಡುತ್ತೇನೆ.

**ತ್ರಾಟಿಕಾ—** ನಿರ್ಲಜ್ಜಾ ! ಇಲ್ಲಿಂದ ತೀವ್ರವಾಗಿ ಹೊರಟು ಹೋಗು. ಇಲ್ಲದಿದ್ದರೆ ನಿನ್ನ ಅವಸ್ಥೆಯು ಏನಾದೀತು ನೋಡಿಕೋ.

**ಪ್ರತಾಪರಾವ—** ನನಗೂ ನಿನಗೂ ಕೂಡಿಯೇ ಸೌಖ್ಯವಾದೀತು. ಇದರ ಹೊರತು ಇನ್ನೇನಾದೀತು ?

**ತ್ರಾಟಿಕಾ—**ದೇವರೇ ! ನಾನು ಇನ್ನೇನು ಮಾಡಲಿ ? ಈ ಬ್ರಹ್ಮರಾಕ್ಷಸನ ಕೈಯಿಂದ ನಾನು ಯಾವಾಗ್ಗೆ ಪಾರಾಗುತ್ತೇನೋ ಆಗಲಿ. ನನ್ನ ಮೈಯೊಳಗಿನ ಯಾವತ್ತು ರಕ್ತವು ಎಷ್ಟು ಕಾದಿರುತ್ತದೆಂದು ಹೇಳಲಿ ?

**ಪ್ರತಾಪರಾವ—**ಈ ಎಲ್ಲ ಪ್ರತಾಪವು ಆ ಕಾಮದೇವನದು ಬಲ್ಲಿಯಾ ? ಆ ಕಾಮದೇವನೇ ನಿನಗೆ ಬ್ರಹ್ಮರಾಕ್ಷಸನಾಗಿ ಪೀಡಿಸುತ್ತಾನೆ. ನೀನು ಕಿಂಚಿತ್ತಾದರೂ ಹೆದರಬೇಡ. ಆ ನಿನ್ನ ಕಾಮದೇವನ ಸಮಾಚಾರವನ್ನು ತೆಗೆದುಕೊಳ್ಳಲಿಕ್ಕೆ ನಾನು ಪಂಚಾಕ್ಷರೀಮಂತ್ರವನ್ನು ಚೆನ್ನಾಗಿ ಬಲ್ಲೆನು. ಈ ಪ್ರತಾಪನು ನಿನ್ನವನಾದ ಮೇಲೆ ಆ ಕಾಮದೇವನ ಕಾಟವು ನಿಶ್ಚಯವಾಗಿ ನಿಂತು ಹೋಗುವದು. ಸ್ವಲ್ಪ ಹೊತ್ತು ಧೈರ್ಯ ಹಿಡಿ.

**ತ್ರಾಟಿಕಾ—**ಧೈರ್ಯ ಹಿಡಿಯುವದಿಲ್ಲ, ಆದರೆ ನಿನ್ನ ಕಿವಿ ಮಾತ್ರ ಹಿಡಿಯುತ್ತೇನೆ ! ( **ಅವನ ಕಿವಿ ಹಿಂಡಲಿಕ್ಕೆ ಹೋಗುತ್ತಾಳೆ.** )

**ಪ್ರತಾಪರಾವ—**ಸುಂದರಾಂಗೀ ! ಇಷ್ಟೇಕೆ ಶ್ರಮ ತೆಗೆದುಕೊಳ್ಳುತ್ತೀ? ಇದು ನೋಡು. ನಾನೇ ನನ್ನ ಕಿವಿಯನ್ನು ನಿನ್ನಮುಂದೆ ಮಾಡುತ್ತೇನೆ. (**ಕಿವಿ ಮುಂದೆ ಮಾಡುತ್ತಾನೆ.**) ನಿನಗೆ ಹೇಳತಕ್ಕದ್ದನ್ನು ಹೇಳು. ಒಂದು ವೇಳೆ ನೀನು ಗಟ್ಟಿಯಾಗಿ ಹೇಳಿದರೂ ಅದನ್ನು ಕೇಳುವವರು ಇಲ್ಲಿ ನಮ್ಮಿಬ್ಬರ ಹೊರತು ಯಾರಿರುತ್ತಾರೆ ?

**ತ್ರಾಟಿಕಾ—**ನಿರ್ಲಜ್ಜಾ, ನಿನಗೆ ಹೇಳತಕ್ಕದ್ದೇನದೆ ? ಇಲ್ಲಿಂದ ಒಮ್ಮೆ ಎದ್ದು ಹೋಗು ; ಅಂದರೆ ಅರಿಷ್ಟವು ಒಮ್ಮೆ ಕಡಿದುಹೋದಂತಾಗುವದು.

**ಪ್ರತಾಪರಾವ—**ಪ್ರಿಯೇ, ನಾನು ನಿನ್ನನ್ನು ಲಗ್ನ ಮಾಡಿಕೊಳ್ಳದೆ ಇಲ್ಲಿಂದ ಎದ್ದು ಹೋಗುವದು ಹೇಗೆ ? ಲಗ್ನವಾದ ತರುವಾಯ ನಾನೂ ನೀನೂ ಕೂಡಿಯೇ ನಮ್ಮ ಮನೆಗೆ ಎದ್ದು ಹೋಗೋಣ, ಮಾವನವರಂತೂ ನನಗೆ ನಿನ್ನನ್ನು ಒಪ್ಪಿಸಿಬಿಟ್ಟಿರುತ್ತಾರೆ. ನಿನ್ನ ಮನಸ್ಸಿರಲಿ, ಬಿಡಲಿ, ನಾನು ನಿನ್ನನ್ನು ಲಗ್ನ ಮಾಡಿಕೊಳ್ಳುವದೇ ನಿಶ್ಚಯವು. ಪ್ರತಾಪನಿಗೆ ರಂಗಿಯೇ ಯೋಗ್ಯ

ಸತಿಯು ! ರಂಗಿಗೆ ಪ್ರತಾಪನೇ ಯೋಗ್ಯ ಪತಿಯು ! ರಂಗಿಗೆ ಸಾಧು ಮಾಡುವ ದಕ್ಕಾಗಿಯೇ ಈ ಪ್ರತಾಪನು ಜನ್ಮಧಾರಣ ಮಾಡಿರುತ್ತಾನೆ. ಆದುದರಿಂದ ನೀನು ಇನ್ನು ವಿಶೇಷ ಹೆಣಗಾಡದೆ ಒಮ್ಮೆಲೆ ನನ್ನ ಮಾತಿಗೆ ಅನುಮತಿಯನ್ನು ಕೊಟ್ಟು ಬಿಡು.

**ತ್ರಾಟಿಕಾ**—ಯಾಕೋ ನೀಚಾ, ಬಹಳ ಬಾಯಿ ಬಿಟ್ಟೆ ? ( ಎಂದು **ಪ್ರತಾಪರಾಯನಿಗೆ ಹೊಡೆಯಲಿಕ್ಕೆ ಕೈ ಎತ್ತುತ್ತಾಳೆ. ಅಷ್ಟರಲ್ಲಿ ಪ್ರತಾಪರಾಯನು ತನ್ನ ಕೈ ಯಿಂದ ಅವಳ ಕೈಯನ್ನು ಗಟ್ಟಿಯಾಗಿ ಹಿಡಿಯುತ್ತಾನೆ.**

**ಪ್ರತಾಪರಾವ**— ( **ತನ್ನಷ್ಟಕ್ಕೆ** )ಇನ್ನು ಮೇಲೆ ಈ ಪ್ರಸಂಗವನ್ನು ಇಷ್ಟಕ್ಕೇ ಮುಗಿಸುವದು ಒಳ್ಳೇದು. ಅಹಹಾ! **ಲಕ್ಷ್ಮೀಪತಿರಾಯರು** ಇತ್ತ ಕಡೆಗೇ ಬಂದರು. (**ಬಹಿರಂಗವಾಗಿ**) ರಂಗೂ, ನನ್ನದೂ ನಿನ್ನದೂ ಲಗ್ನವಾಗು ವದು ಎಂದಿಗೂ ತಪ್ಪುವದಿಲ್ಲ. ನಾನು ನಿನ್ನನ್ನು ಪ್ರೀತಿಯಿಂದ ನಡೆಸಿಕೊಳ್ಳ ಬೇಕೆಂಬ ಅಪೇಕ್ಷೆಯು ನಿನಗಿದ್ದರೆ ನೀನು ನನ್ನ ಮನಸ್ಸಿನ ಪ್ರಕಾರವೇ ನಡೆ. ನಾನು ಎರಡನೇಯವರ ಜಂಬವನ್ನು ಎಷ್ಟು ಮಾತ್ರಕ್ಕೂ ನಡೆಸಿಕೊಡುವವನಲ್ಲ. ಮಾವನವರೇ, ನೋಡಿರಿ· ನಿಮ್ಮ ಸಮಕ್ಷಮವೇ ಇವಳು ತನ್ನ ಕೈಯನ್ನು ನನ್ನ ಕೈಯಲ್ಲಿ ಕೊಟ್ಟಿರುತ್ತಾಳೆ. ( **ಲಕ್ಷ್ಮೀಪತಿರಾಯನು ಬರುತ್ತಾನೆ. ತ್ರಾಟಿಕೆಯು ಕೈ ಬಿಡಿಸಿಕೊಳ್ಳಲಿಕ್ಕೆ ಯತ್ನಿಸುತ್ತಾಳೆ.** ) ಪ್ರಿಯೇ, ನಾಚಬೇಡ. ಇದು ನೋಡು, ನಿನ್ನ ಕೈ ಬಿಟ್ಟುಕೊಟ್ಟೆನು.

**ಲಕ್ಷ್ಮೀಪತಿರಾವ**—ಪ್ರತಾಪರಾವ, ಇತ್ತಕಡೆಯ ಸಮಾಚಾರವೆಲ್ಲ ಸರಿ ಯಷ್ಟೇ ?

**ಪ್ರತಾಪರಾವ**—ನೀವು ಪ್ರತ್ಯಕ್ಷ ಕಂಡ ಮಾತಿಗೆ ವಿಚಾರಿಸುವ ಕಾರ ಣವೇ ಇಲ್ಲ. ನಿಮ್ಮ ಆಶೀರ್ವಾದದಿಂದ ಕಾರ್ಯಸಿದ್ಧಿಯಾಯಿತು.

**ಲಕ್ಷ್ಮೀಪತಿರಾವ**— ಮಗಳೇ, ಮತ್ತೇನದೆ ? ಇದಕ್ಕೆ ನಿನ್ನ ಒಪ್ಪಿಗೆ ಯಿರುವದಷ್ಟೇ ?

**ತ್ರಾಟಿಕಾ**—ನನಗೇನೂ ವಿಚಾರಿಸಬೇಡಿರಿ. ನನಗೆ ಮಗಳೇ ಎಂದು ಕರೆ ಯಲಿಕ್ಕೆ ನಿಮಗೆ ನಾಚಿಕೆಯು ಹೇಗೆ ಬರುವದಿಲ್ಲ ? ನಾನು ನಿಮಗೆ ಬೇಡಾಗಿದ್ದರೆ ನನ್ನನ್ನು ಬುದ್ಧಿಗೇಡಿಯಾದಂಥ ಪುಂಡ ಗಂಡನಿಗೆ ಮದುವೆಮಾಡಿ ಕೊಡುವದ ಕ್ಕಿಂತ ಒಮ್ಮೆಲೆ ಬಾವಿಯಲ್ಲಿ ಏಕೆ ನೂಕಿಸುವದಿಲ್ಲ ? ನನಗೇನೂ ವಿಚಾರಿಸ ಬೇಡಿರಿ. ( **ಅಳಹತ್ತುತ್ತಾಳೆ.** )

**ಲಕ್ಷ್ಮೀಪತಿರಾವ**--ಪ್ರತಾಪರಾವ, ಇದೇನು ?

**ಪ್ರತಾಪರಾವ**----ಮಾವನವರೇ, ನೀವು ಹೀಗೇಕೆ ಮಾಡುತ್ತೀರಿ ? "ನನಗೇನೂ ವಿಚಾರಿಸಬೇಡಿರಿ" ಎಂದು ಅವಳು ಹೇಳಿದ್ದರ ಮೇಲಿಂದ ಅವಳ ಮಾತಿನ ತಾತ್ಪರ್ಯವು ನಿಮಗೆ ಗೊತ್ತಾಗಲಿಲ್ಲೇ ? ಈ ಕೆಲಸದಲ್ಲಿ ಆಕೆಯು ಏನು ಮಾತಾಡತಕ್ಕದ್ದದೆ ? ಯೋಗ್ಯವಾಗಿ ವಿಚಾರ ಮಾಡಿದರೆ ಆಕೆಗೆ ಏನೂ ಮಾತಾಡುವ ಅಗತ್ಯವಿಲ್ಲ. ಈಗ ಆಕೆಯು ಸಲುವಾಗಿ ಮಾತಾಡಲಿಕ್ಕೆ ನಾನು ಬಾಧ್ಯಸ್ಥನಿದ್ದೇನೆ. ಇದಲ್ಲದೆ ಆಕೆಗೆ ಈಗ ನಿಮ್ಮ ಕಡೆಯಿಂದ ಮಗಳೇ ಎಂದು ಕರೆಸಿಕೊಳ್ಳಲಿಕ್ಕೆ ಬೇಸರಿಕೆ ಹುಟ್ಟಿರುತ್ತದೆ. ನ್ಯಾಯತಃ ಮಾತಾಡಬೇಕಾದರೆ ಈ ವಯಸ್ಸಿನಲ್ಲಿ ಆಕೆಯು ತಾನು ಎರಡನೇಯವರಿಗೆ ಮಗಳೇ ಎಂದು ಕರೆಯ ತಕ್ಕದ್ದು. ಆಕೆಯ ಲಗ್ನವನ್ನು ನೀವು ಇದಕ್ಕೂ ಮುಂಚಿತವಾಗಿಯೇ ಮಾಡ ತಕ್ಕದ್ದಿತ್ತು. ಆದುದರಿಂದ ಆಕೆಗೆ ನಿಮ್ಮ ಮೇಲೆ ಏಕೆ ಸಿಟ್ಟು ಬರಬಾರದು ? ಇದಲ್ಲದೆ ಆಕೆಯ ಮಾತಿನಲ್ಲಿ ವಿರೋಧಾಭಾಸವು ತುಂಬಿರುತ್ತದೆ. ಪ್ರಿಯೇ, ನಿನ್ನ ಉತ್ತರವು ಬಹಳೇ ಯೋಗ್ಯವಾಗಿರುವದು ! ಆದರೆ ನೀನು ನಿನ್ನ ದುಃಖ ವನ್ನು ಹೇಗಾದರೂ ಮಾಡಿ ಮರೆತು ಬಿಡು. ನಾನು ನಿನಗೆ ಆಗಲೇ "ನಿನ್ನ ದುಃಖದ ದಿವಸಗಳು ಇನ್ನು ಮುಗಿದು ಹೋದವು" ಎಂದು ಹೇಳಿರುತ್ತೇನೆ. ಆಗಿ ಹೋದ ಮಾತಿಗೆ ಅತ್ತು ನಿನ್ನ ಜೀವಕ್ಕೆ ಏಕೆ ಕಷ್ಟಕೊಡುತ್ತೀ ? ಮಾವ ನವರೇ, ಆಕೆಯ ನಿಜವಾದ ಸ್ವಭಾವವು ನಿಮಗೆ ಸಹ ಇನ್ನೂ ಗೊತ್ತಾಗಿಲ್ಲ ವೆಂದು ನೋಡಿ ನನಗೆ ಬಹಳ ಆಶ್ಚರ್ಯವಾಗುತ್ತದೆ. ಆಕೆಯಂಥ ಚತುರ, ಶಾಂತ, ನಮ್ರ, ಸಭ್ಯ, ಸುಶೀಲ, ಸದ್ಗುಣಿ ಸ್ತ್ರೀಯು ಸಾವಿರಕ್ಕೊಬ್ಬರು ಸಹ ಸಿಗಲಿಕ್ಕಿಲ್ಲ. ಬರುವ ದಶಮಿಯ ಮುಹೂರ್ತದಲ್ಲಿ ನಮ್ಮ ಲಗ್ನ ಮಾಡಿಕೊಳ್ಳ ಬೇಕೆಂದು ನಾನೂ ಅವಳೂ ನಿರ್ಧಾರಮಾಡಿರುತ್ತೇವೆ.

**ತ್ರಾಟಿಕಾ**-- (ಸಿಟಕೊಂಡು ಒತ್ತಟ್ಟಿಗೆ ಮೋರೆ ಮಾಡಿ) ಮೂರ್ಖಾ, ಆ ಮುಹೂರ್ತದ ದಿವಸ ಮೊದಲಿಗೆ ನಿನ್ನನ್ನು ಶೂಲಕ್ಕೆ ಏರಿಸುವಂತೆ ಮಾಡುತ್ತೇನೆ.

**ಲಕ್ಷ್ಮೀಪತಿರಾವ**--ನೀವು ಹೇಳುವ ಮಾತು ಆಕೆಯ ಮನಸ್ಸಿಗೆ ಬಂದಿ ಲ್ಲವೆಂದು ಆಕೆಯ ಮೋರೆಯ ಲಕ್ಷಣದ ಮೇಲಿಂದ ಕಾಣುತ್ತದೆ.

**ಪ್ರತಾಪರಾವ**——ಆಕೆಯು ಮೋರೆ ತಿರುವಿದಳೆಂಬುವದು ನಿಜವು. ಆದರೆ ಆಕೆಯು ತನ್ನ ಓರೆಗಣ್ಣಿನಿಂದ ನನ್ನ ಕಡೆಗೆ ಸನ್ನೆ ಮಾಡಿದ್ದನ್ನು ನೀವೆಲ್ಲಿ ನೋಡಿದಿರಿ ? ಇದಲ್ಲದೆ ಆಕೆಯನ್ನು ಲಗ್ನಮಾಡಿಕೊಳ್ಳತಕ್ಕವನು ನಾನು. ಆಕೆಯು ಹೇಗೆಯೇ ಮಾತಾಡಲಿ, ಹೇಗೆಯೇ ಮೋರೆ ತಿರುವಲಿ, ನನಗೆ ಅದು ಸಮ್ಮತವಿರುತ್ತದೆ. ಜನರೊಳಗೆ ಆಕೆಯು ಇದೇ ಪ್ರಕಾರ ಮಾಡತಕ್ಕದ್ದೆಂದು ನಮ್ಮ ನಮ್ಮೊಳಗೆ ಗೊತ್ತಾಗಿರುತ್ತದೆ. ಇಲ್ಲದಿದ್ದರೆ ಆಕೆಯು ನಿಮ್ಮ ಸಮಕ್ಷ ನನ್ನ ಬಳಿಗೆ ಬಂದು ನನ್ನನ್ನು ಅಪ್ಪಿಕೊಂಡು ನನಗೆ ಚುಂಬನ ಕೊಡಬೇಕೇ ? ಆಕೆಯು ಅಂಥ ಸ್ತ್ರೀಯಲ್ಲ. ಬಹಳ ಸಭ್ಯ ಮತ್ತು ಮರ್ಯಾದಶೀಲ ಸ್ತ್ರೀಯಿರುತ್ತಾಳೆ. ನೀವು ಇಲ್ಲಿಗೆ ಬಾರದಕಿಂತ ಮುಂಚೆ ಅವಳು ತನ್ನ ಶಬ್ದಮಾಧುರ್ಯದಿಂದಲೂ, ಅಂಗ ವಿಕ್ಷೇಪಗಳಿಂದಲೂ, ನೇತ್ರ ಕಟಾಕ್ಷಗಳಿಂದಲೂ ನನ್ನನ್ನು ಎಷ್ಟು ಆನಂದಪಡಿಸಿದ ಳೆಂದು ಹೇಳಲಿ ! ಪ್ರೇಮ ಸೂಚಕ ಮಾರ್ಗಗಳು ಅವಳಿಗೆ ಗೊತ್ತಿದ್ದಷ್ಟು ಎರ ಡನೇ ಯಾವ ಸ್ತ್ರೀಗೂ ಗೊತ್ತಿರಲಿಕ್ಕಿಲ್ಲ, ಕಂಡಿರಾ ? ಆಕೆಯು ಬಾಯಿಂದ ಮಾತ್ರ ಇಲ್ಲೆಂದು ಅಂದರೂ ತನ್ನ ಹಾವಭಾವಗಳಿಂದ ತನ್ನ ಅನುಕೂಲ ಮತ ವನ್ನು ತೋರಿಸುವಳು. ಪ್ರಿಯೇ ಸಿಟ್ಟಾಗಬೇಡ. ನಾನೇನೂ ಇವರ ಮುಂದೆ ನಮ್ಮ ನಿಮ್ಮೊಳಗೆ ನಡೆದ ಎಲ್ಲ ಪ್ರೇಮದ ಸಂಗತಿಗಳನ್ನು ಒಡೆದು ಹೇಳುವದಿಲ್ಲ- ಅವೆಲ್ಲವುಗಳು ನಮ್ಮಿಬ್ಬರೊಳಗೇ ಗುಪ್ತವಿರುವವು. (**ತ್ರಾಟಿಕೆಯು ಮೋರೆ ತಿರುವಿ ನೋಡುತ್ತಾಳೆ.**) ಓಹೋ! ಇವಳು ಎಷ್ಟು ಒಯ್ಯಾರದ ನೋಟದಿಂದ ನೋಡು ತ್ತಾಳೆ ! ಮಾವನವರೇ ! ಲಗ್ನತಿಥಿಯು ನಿರ್ಣಯವಾದಂತಾಯಿತು. ಇನ್ನು ಊರಿಗೆ ಹೋಗಿ ಲಗ್ನದ ಯಾವತ್ತು ಸಿದ್ಧತೆಯನ್ನು ಮಾಡುತ್ತೇನೆ. ರಂಗೂ, ನಿನಗೆ ಅತ್ಯಂತ ಸುಂದರವಾದ ವಸ್ತ್ರಾಲಂಕಾರಗಳನ್ನು ತರುವೆನು. ಎಳ್ಳಷ್ಟಾ ದರೂ ಚಿಂತೆ ಮಾಡಬೇಡ. ಅವುಗಳನ್ನು ನೀನು ಧರಿಸಿದ್ದನ್ನು ನೋಡಿದ ಕೂಡಲೆ ಇತರ ಸ್ತ್ರೀಯರು ನಾಚಿಕೆಯಿಂದ ತಲೆಯನ್ನೇ ಬಾಗಿಸಿ ನಿನ್ನ ಕಡೆಗೆ ಮಾತ್ಸರ್ಯ ದಿಂದ ನೋಡದೆ ಇರಲಾರರು. (**ಅವಳು ಹೋಗಹತ್ತುವದನ್ನು ನೋಡಿ**) ಒಳ್ಳೇದು. ನೀನು ಹೋಗಿನ್ನು.

**ಲಕ್ಷ್ಮೀಪತಿರಾವ**—ಮಗಳೇ, ಇನ್ನು ಇವರಿಗೆ ವಚನ ಕೊಡಲಿಕ್ಕೆ ಅಡ್ಡಿ ಯು ಏನಿರುವದು? (**ತ್ರಾಟಿಕೆಯು ಏನೂ ಮಾತಾಡದೆ ಕಾಲು ಅಪ್ಪಳಿಸುತ್ತ ಹೋಗುತ್ತಾಳೆ.**)

**ಪ್ರತಾಪರಾವ**—ಈ ಬಗ್ಗೆ ಆಕೆಯು ಏನು ಹೇಳತಕ್ಕದ್ದದೆ? ಮಾವನವರೇ, ಈ ದಶಮಿಯು ಮುಹೂರ್ತವನ್ನೇ ಗೊತ್ತುಮಾಡಿರಿ. ನಾನು ಎಲ್ಲ ಸಿದ್ಧತೆಯನ್ನು ಮಾಡಿಕೊಂಡು ಬರುತ್ತೇನೆ. ನನಗೆ ಇನ್ನು ವೇಳೆ ಇಲ್ಲ.

**ಲಕ್ಷ್ಮೀಪತಿರಾವ**—ಹಾಗಾದರೆ ನಿಜವಾಗಿ ಈ ಲಗ್ನವು ನಿರ್ಣಯವಾಯಿತೋ?

**ಪ್ರತಾಪರಾವ**—ಇನ್ನೂ ನಿಮಗೆ ಸಂಶಯವೇನು? ಮಾವನವರೇ! ಇದು ಚೇಷ್ಟೆಯ ವೇಳೆಯಲ್ಲ. ನೀವು ನಿಮ್ಮ ಯಾವತ್ತು ಸಿದ್ಧತೆಯನ್ನು ಮಾಡಿಡರಿ. ಹೋಗಿ ಬರುತ್ತೇನೆ. ನಮಸ್ಕಾರ. (ಇಬ್ಬರೂ ಹೋಗುತ್ತಾರೆ.)

---

## ೨ನೇ ಪ್ರವೇಶ.

---

### ಲಕ್ಷ್ಮೀಪತಿರಾಯನ ಮನೆ.

(ಲಕ್ಷ್ಮೀಪತಿರಾಯನೂ, ಬಾಪೂರಾಯನೂ, ವೆಂಕಣ್ಣನಾಯಕನೂ, ಕುಳಿತುಕೊಂಡಿರುತ್ತಾರೆ.)

**ಬಾಪೂರಾವ**—ಈ ಲಗ್ನನಂತೂ ತೀರ ನಿಂಪರಕಿಯಿಂದ ಗೊತ್ತಾದಂತಾಯಿತು. ಇದು ಎಂಥ ವಿಲಕ್ಷಣವು!

**ಲಕ್ಷ್ಮೀಪತಿರಾವ**—ಇದರ ಚಮತ್ಕಾರವನ್ನು ನಿಮಗೆ ಎಷ್ಟೆಂತ ಹೇಳಲಿ! ಸರಕುಗಳಿಂದ ತುಂಬಿದ ಹಡಗವು ಸಮುದ್ರದ ತುಫಾನುಗಳ ಮೂಲಕ ಮುಳುಗೀತೆಂಬ ಭಯದಿಂದ ವ್ಯಾಪಾರಸ್ಥರು ಅತಿ ಅವಸರದಿಂದ ಆ ಸರಕುಗಳನ್ನು ಮಾರಿ ಬಿಡುವಂತೆ ನಾನು ಲಗ್ನಕ್ಕೆ ಮಾತು ಕೊಟ್ಟೆನು!

**ವೆಂಕಣ್ಣನಾಯಕ**—ಹೋಗಲಿ ಬಿಡಿರಿ. ಇದರಿಂದ ನಿಮಗೇನೂ ಹಾನಿಯಿಲ್ಲ. ನಿಮಗೆ ಇದೊಂದು ಅರಿಷ್ಟವೇ ಆಗಿತ್ತು. ಮಾರಾಟವನ್ನು ಹೊಂದಿಸಿಕೊಂಡ ಗಿರಾಕಿಯ ಅವಸ್ಥೆಯು ಏನಾದೀತೆಂಬ ಚಿಂತೆಯನ್ನು ನೀವು ಮಾಡುವ ಕಾರಣವಿಲ್ಲ. ಮಾತು ಒಪ್ಪಿಸಿಕೊಳ್ಳುವಾಗ್ಗೆ ನೀವೇನೂ ಅವನ ಕಣ್ಣು ಕಟ್ಟಿದ್ದಿಲ್ಲ!

**ಲಕ್ಷ್ಮೀಪತಿರಾವ**—ಅದೆಲ್ಲ ನಿಜವು. ಆದರೆ ನನ್ನ ಮಗಳಿಗೆ ಇದರಿಂದ ಸೌಖ್ಯವಾದೀತೋ ಇಲ್ಲೋ ಎಂದು ನಾನು ಚಿಂತೆ ಮಾಡಬೇಕಾಗಿರುತ್ತದೆ. ಒಂದು ವೇಳೆ ನನ್ನ ಮಗಳಿಗೆ ದುಃಖವಾದರೆ ಪರಮೇಶ್ವರನ ದೃಷ್ಟಿಯಿಂದ ನಾನು ಅಪರಾಧ ಮಾಡಿದಂತಾಗುವದು.

**ಬಾಪೂರಾವ**—ಇನ್ನು ಮೇಲೆ ಇಂಥ ನಿರರ್ಥಕ ಸಂಶಯವನ್ನು ಮಾಡುತ್ತ ಹೋಗಬೇಡಿರಿ. ಲಗ್ನವಾದ ತರುವಾಯ ತನ್ನ ಮಗಳ ಅವಸ್ಥೆಯು ಮುಂದೆ ಏನಾದೀತೆಂದು ಚಿಂತೆಯನ್ನು ಮಾಡುವಂಥ ತಂದೆಯು ಒಬ್ಬನಾದರೂ ದೊರಕುವದು ದುರ್ಲಭವು. ಹೇಗಾದರೂ ಮಾಡಿ ತಮ್ಮ ತಲೆಯ ಮೇಲಿನ ಹೊರೆಯನ್ನು ಕಡಿಮೆಮಾಡಿಕೊಳ್ಳಬೇಕೆಂಬ ವಿಚಾರದಿಂದಲೇ ಎಲ್ಲ ತಂದೆಗಳು ತಮ್ಮ ಮಕ್ಕಳ ಲಗ್ನ ಮಾಡುತ್ತಾರೆ.

**ವೆಂಕಣ್ಣನಾಯಕ**—(ನಗುತ್ತ) ಬಾಪೂರಾಯರು ಹೇಳುವ ಮಾತು ಅಕ್ಷರಶಃ ನಿಜವು. ಪ್ರತ್ಯಕ್ಷ ಪ್ರೇತಗಳಾಗಿರುವಂಥ ರೋಗಿಷ್ಠರಿಗೆ ಅಥವಾ ಜರಠರಿಗೆ ತಮ್ಮ ಚಿಕ್ಕ ಹೆಣ್ಣು ಮಕ್ಕಳನ್ನು ಮದುವೆ ಮಾಡಿ ಕೊಟ್ಟು ಅವರನ್ನು ವ್ಯಥ ವ್ಯಾಗ್ನಿಯಲ್ಲಿ ಕೆಡವಿ ಕಣ್ಣಾರೆ ನೋಡುತ್ತ ಕುಳಿತಿರುವ ತಂದೆಗಳು ಅನೇಕ ಮಂದಿ ಇರುವದನ್ನು ನಾವು ದಿನಾಲು ನೋಡುತ್ತೇವೆ.

**ಬಾಪೂರಾವ**—(ಸಿಟ್ಟಿನಿಂದ) ಸಾಕು. ಸಾಕು. ಇಂಥ ಸಂಗತಿಗಳನ್ನು ನಾವೆಲ್ಲ ಬಲ್ಲೆವು. ಇವುಗಳನ್ನು ನಿಮ್ಮಂಥ ಹುಡುಗರ ಕಡೆಯಿಂದ ನಾವೇನೂ ಹೊಸದಾಗಿ ಕಲಿಯಬೇಕಾಗಿಲ್ಲ. ಒಳ್ಳೇದು, ಲಕ್ಷ್ಮೀಪತಿರಾಯರೇ, ಇನ್ನು ಮೇಲೆ ಏನೂ ತೊಂದರೆಯು ಉಳಿಯಲಿಲ್ಲ. ನಾನು ನಿಮ್ಮ ಹಳೇ ಗೆಳೆಯನಿದ್ದೇನೆ. ಮೇಲಾಗಿ ಎಲ್ಲರಿಗಿಂತ ಮೊದಲೇ ನಾನು ನಿಮ್ಮನ್ನು ಕೇಳಿರುತ್ತೇನೆ. ಆದುದರಿಂದ ನೀವು ಕಮಲೆಯನ್ನು ನನಗೇ ಲಗ್ನ ಮಾಡಿ ಕೊಡುವದು ಯೋಗ್ಯವು.

**ವೆಂಕಣ್ಣನಾಯಕ**—(ಲಕ್ಷ್ಮೀಪತಿರಾಯರಿಗೆ) ರಾಯರೇ! ಯಾರು ಮೊದಲು ಬೇಡಿದರು ಮತ್ತು ಯಾರು ಹಿಂದುಗಡೆ ಬೇಡಿದರು ಎಂಬದರ ವಿಚಾರದಿಂದ ಏನು ಉಪಯೋಗವು ? ನಿಮ್ಮ ಮಗಳ ಮೇಲೆ ಯಾರ ಪ್ರೀತಿಯು ಹೆಚ್ಚು ಇರುತ್ತದೆ ಮತ್ತು ಯಾರಿಗೆ ಲಗ್ನ ಮಾಡಿ ಕೊಟ್ಟರೆ ಆಕೆಗೆ ಹೆಚ್ಚು ಸೌಖ್ಯವಾದೀತು ಎಂಬದನ್ನು ನೀವು ವಿಚಾರ ಮಾಡತಕ್ಕದ್ದು. ನನ್ನ ಪ್ರೀತಿಯು ನಿಮ್ಮ ಮಗಳ ಮೇಲೆ

ಅತಿಶಯವಿರುತ್ತದೆ. ಅದು ಎಷ್ಟಿರುತ್ತದೆಂಬದನ್ನು ನನಗೆ ಶಬ್ದಗಳಿಂದ ವರ್ಣಿಸುವದೂ ಅಸಾಧ್ಯ; ನಿಮಗೆ ನಿಮ್ಮ ಕಲ್ಪನೆಯಿಂದ ತಿಳಿದುಕೊಳ್ಳುವದೂ ಅಸಾಧ್ಯ.

**ಬಾಪೂರಾವ**—ಏನು, ಸಣ್ಣಪ್ಪರಾಯರೇ ಅಥವಾ ಹುಡುಗರಾಯರೇ! ನಿಮ್ಮ ಪ್ರೀತಿಯು ನನ್ನ ಪ್ರೀತಿಯ ಮುಂದೆ "**ವರದಲ್ಲಿ ದುಗ್ಗಾಣಿ**" ಯಾದರೂ ಆದೀತೆ ?

**ವೆಂಕಣ್ಣನಾಯಕ**-ನಿಮಗೆ ಏನಾದರೂ ಹೇಳತಕ್ಕದ್ದಿದ್ದರೆ ಲಕ್ಷ್ಮೀಪತಿ ರಾಯರ ಮುಂದೆ ಹೇಳಿರಿ. ಸುಮ್ಮನೆ ನನ್ನ ಗೂಡ ಏಕೆ ಜಗಳಾಡುತ್ತೀರಿ ?

**ಬಾಪೂರಾವ**--ತತ್ವಜ್ಞಾನ ಹೇಳಿಲಿಕ್ಕೆ ಬಹಳ ದೊಡ್ಡ ಮನುಷ್ಯನು ಬಂದಿರುತ್ತೀ ! ಎಲಾ, ನಿನ್ನ ಮೋರೆಯ ಮೇಲೆ ಮೀಸೆ ಸಹ ಒಡೆದಿಲ್ಲ. ಹೀಗಿದ್ದು ನನಗೆ ಬುದ್ಧೀ ಕಲಿಸುತ್ತೀಯಾ ?

**ವೆಂಕಣ್ಣನಾಯಕ**—ಏನರೀ, ಜರಠರಾಯರೇ ! ನೀವು ನಿಮ್ಮ ಬಿಳೀ ಮೀಸೆಗಳು ಕಾಣಿಸಬಾರದೆಂದು ಅವುಗಳಿಗೆ ಎಷ್ಟು ಎಚ್ಚರಿಕೆಯಿಂದ ಬಣ್ಣ ಹಚ್ಚಿ ಅವುಗಳನ್ನು ಕಪ್ಪು ಮಾಡಿಕೊಂಡಾಗ್ಯೂ ನಿಮ್ಮ ಮೋರೆಯ ಮೇಲೆ ಬಿದ್ದಿರುವ ನಿರಿಗೆಗಳೂ, ನಿಮ್ಮ ತಲೆಗೆ ಆಗಿರುವ ಟಕ್ಕಳಿಗಳೂ, ನಿಮ್ಮ ಮೀಸೆಗಳ ಬುಡದಲ್ಲಿ ಒಡೆಯುವ ಬಿಳೀ ಮರಿಮೀಸೆಗಳೂ ನಿಮ್ಮ ವೃದ್ಧಾಪ್ಯವನ್ನು ತಾವೇ ತೋರಿಸಿ ಕೊಡುತ್ತವೆ. « **ಅರುವತ್ತಕ್ಕೆ ಅರುವು ಮರುವು** » ಎಂಬ ಗಾದೆಯಂತೆ ನಿಮ್ಮ ಅವಸ್ಥೆಯಾಗಿರುವ ಕಾರಣ ನೀವು ಏನಾದರೂ ಕೃತ್ರಿಮ ಉಪಾಯದಿಂದ ಅವುಗಳನ್ನು ಸಹ ಮುಚ್ಚಿಕೊಂಡು ಬರಲಿಕ್ಕೆ ಮರೆತಿರೆಂದು ಕಾಣುತ್ತದೆ.

**ಬಾಪೂರಾವ**—ಎಲಾ ಹುಡುಗಾ ! ನಿನಗೆ ಸಂಸಾರದ ಅನುಭವವು ಏನಿರುತ್ತದೆ ? ನಮ್ಮಂಥ ವಯಸ್ಸಾದವರಿಗೆ ಮತ್ತು ಅನುಭವಿಕರಿಗೆ ಸಂಸಾರ ಸುಖದ ರಹಸ್ಯವು ಗೊತ್ತಿರುವದು. ಆದುದರಿಂದ ನಮ್ಮ ಪ್ರೀತಿಯ ಮಹತ್ವವು ನಿನಗೆ ಏನು ಗೊತ್ತದೆ ?

**ವೆಂಕಣ್ಣನಾಯಕ**—ಹೀಗೇನು ? ಆದರೆ ಇವರ ಮಗಳಿಗೆ ತಂಗುಳದ ಅಥವಾ ಹಳಿಸಿದ ಅನ್ನವು ಸೇರುತ್ತದೋ ಹೇಗೆಂಬವನ್ನು ಮೊದಲು ವಿಚಾರ ಮಾಡಿಕೊಳ್ಳಿರಿ. ಇದಲ್ಲದೆ ನಿಮಗೆ ಇನ್ನೊಂದು ಮಹತ್ವವಾದ ಸಂಗತಿಯನ್ನು ಕೇವಲ ನಿಮ್ಮ ಹಿತದ ಸಲುವಾಗಿ ಸೂಚಿಸುತ್ತೇನೆ. ಅದೇನಂದರೆ:—

ನೀವು ಮಾತಾಡುವಾಗ್ಗೆ ನಿಮ್ಮ ಬಾಯನ್ನು ಸ್ವಲ್ಪ ಗಟ್ಟಿಯಾಗಿ ಹಿಡಿದುಕೊಂಡು ಮಾತಾಡಿರಿ. ಅಂದರೆ ನಿಮ್ಮ ದಂತಪಂಗ್ತಿಯೊಳಗಿನ ಕಿಂಡಿಗಳು ಯಾರಿಗೂ ಕಾಣಲಿಕ್ಕಿಲ್ಲ.

**ಲಕ್ಷ್ಮೀಪತಿರಾವ**—ನೀವಿಬ್ಬರೂ ಈ ಪ್ರಕಾರ ಜಗಳಾಡಬೇಡರಿ. ನಿಮ್ಮ ಜಗಳದ ನಿರ್ಣಯವನ್ನು ನಾನು ಮಾಡುತ್ತೇನೆ. ನನ್ನ ಚಿಕ್ಕ ಮಗಳಮೇಲೆ ನನ್ನ ಮಮತೆಯು ವಿಶೇಷವಿರುತ್ತದೆಂಬುವದು ನಿಮಗೆ ಗೊತ್ತೇ ಉಂಟು. ಅಂದಮೇಲೆ ಅವಳನ್ನು ಯಾವ ಸ್ಥಳಕ್ಕೆ ಕೊಟ್ಟರೆ ಅವಳಿಗೆ ನಿರಾಯಾಸದಿಂದ ಹೆಚ್ಚು ಐಶ್ವರ್ಯವನ್ನು ಉಪಭೋಗಿಸಲಿಕ್ಕೆ ಸಿಕ್ಕೀತೆಂಬುವದನ್ನು ನಾನು ವಿಚಾರ ಮಾಡತಕ್ಕವನಿದ್ದೇನೆ. ಆದುದರಿಂದ ಬಾಪೂರಾಯರೇ, ನಿಮ್ಮ ಮನೆಯ ಸಾಂಪತ್ತಿಕ ಸ್ಥಿತಿಯು ಹೇಗಿರುತ್ತದೆಂಬದನ್ನು ಸ್ವಲ್ಪ ಹೇಳಿರಿ, ಕೇಳೋಣ.

**ಬಾಪೂರಾವ**–ನಮ್ಮ ಭವ್ಯವಾದ ಮೇಲುಪ್ಪರಿಗೆಯ ಮನೆಯನ್ನು ನೀವು ನೋಡಿರುತ್ತೀರಷ್ಟೇ. ಅದರ ನಾಲ್ಕೂ ಮೂಲೆಗಳಲ್ಲಿ ತರತರವಾದ ಅಮೌಲ್ಯ ಸಾಮಾನುಗಳು ಒಟ್ಟಿರುತ್ತವೆ. ಗುಳಾಪು, ಝುಮ್ಮರು, ಕನ್ನಡಿಗಳು ಮುಂತಾದ ಕಾಚಿನ ಸಾಮಾನುಗಳು ಬೇಕಾದಷ್ಟು ತುಂಬಿರುತ್ತವೆ. ಬೆಳ್ಳಿ ಬಂಗಾರದ ತಾಟುಗಳು, ತಂಬಿಗೆಗಳು, ಜಾಂಬುಗಳು, ಥಾಲಿಗಳು, ಸಪಟುಗಳು ನೂರಾರು ಇರುತ್ತವೆ. ಇದಲ್ಲದೆ ನಕ್ಷೆಯನ್ನು ಕೊರೆದ ಬೆಳ್ಳಿಯ ಎಲಿ ಅಡಿಕೆಯ ತಬಕಗಳು, ಡಬ್ಬಿಗಳು, ಚೌಫೂಲುಗಳು, ಅತ್ತರದಾನಿಗಳು, ಗುಲಾಬದಾನಿಗಳು ಒಟ್ಟಿರುತ್ತವೆ. ಮೇಲಾಗಿ ಜರತಾರಿ ಮತ್ತು ಕಿನಕಾಪಿನ ಅರಿವೆ ಅಂಚಡಿಗಳು ಅನೇಕವಿರುತ್ತವೆ.

**ವೆಂಕಣ್ಣನಾಯಕ**—(ನಗುತ್ತ) ಹೂ. ಸಾಗಲಿ; ವಜ್ರಕೆತ್ತಿದ ಕಸಬರಿಗೆಗಳು, ಮುತ್ತುಹಚ್ಚಿದ ಕಸದ ಬುಟ್ಟಿಗಳು, ಬೆಳ್ಳಿಯ ಹಿಡಿಕೆಯುಳ್ಳ ಉರಿ ಹಚ್ಚುವ ಕಟ್ಟಿಗೆಗಳು, ಬಂಗಾರದ ತಗಡು ಬಡಿದ ಮುಸರೀ ಚೆಲ್ಲುವ ಡೋಣಿಗಳು, ಒಲಿ ಒರಿಸುವ ರೇಶ್ಮೀಯ ಮತ್ತು ಕಿನಕಾಪಿನ ಮಸೀ ಅರಿವೆಗಳು ಇವೆಲ್ಲ ಸಾಮಾನುಗಳ ನಾಮಾವಳಿಯು ಒಮ್ಮೆ ನಿಮ್ಮ ಬಾಯಿಂದ ಬೇಗನೆ ಹೊರಬೀಳಲಿ.

**ಬಾಪೂರಾವ**—ಒಳ್ಳೇದೊಳ್ಳೇದು. ಬಾಯಿ ಮುಚ್ಚು. ಹುಡುಗಾ, ಬಹಳ ಮಾತಾಡಿದರೆ ಹಲ್ಲು ಮುರಿಸಿಕೊಂಡೀ.

**ವೆಂಕಣ್ಣನಾಯಕ**—"ಜಾತಿ ಜಾತಿಗೆ ವೈರ, ನೀತಿ ಮೂರ್ಖಗೆ ವೈರ"

**ಬಾಪೂರಾವ**—(ತಿರಸ್ಕಾರದಿಂದ) ಉಃ. ಬೇಕಾದ್ದು ಬಡಬಡಿಸು. ನಾನೇನು ಅನ್ನುತ್ತಿದ್ದೆ ? (ಹಣೆಗೆ ಕೈಹಚ್ಚಿಕೊಂಡು) ಈಗ ನೆನಪಾಯಿತು. ನನ್ನ ಮನೆಯಲ್ಲಿ ಅರವಿ ಅಂಚಡಿಗಳು ಅನೇಕ ಉಂಟು. ಜರದ ಶೀರಿಗಳು, ಪೀತಾಂಬರಗಳು, ಪೈಠಣಿಗಳು, ಶ್ಯಾಲುಗಳು, ರೇಶ್ಮಿಯ ಮತ್ತು ಜರದ ದೋತರಗಳು, ಹಾಗೂ ಜರದ ರುಮಾಲುಗಳು ಅಸಂಖ್ಯವಿರುತ್ತವೆ. ಇವುಗಳನ್ನಿಡಲಿಕ್ಕೆ ಸಣ್ಣ ದೊಡ್ಡ ಗಂಧದ ಪೆಟ್ಟಿಗೆಗಳು, ಸಾಗವಾನಿಯ ಪೆಟ್ಟಿಗೆಗಳು, ಸಿಸವೇದ ಪೆಟ್ಟಿಗೆಗಳು, ಬೆಳ್ಳಿ ಬಂಗಾರದ ಪೆಟ್ಟಿಗೆಗಳು, ನಕ್ಷೆಯನ್ನು ಕೊರೆಸ ಪೆಟ್ಟಿಗೆಗಳು ಅನೇಕವಿರುತ್ತವೆ. ಇದಲ್ಲದೆ ನನಗೆ ಅನೇಕ ಎರೆಯ ಹೊಲಗಳು, ಮಲ್ಲಾಡದ ಗದ್ದೆಗಳು, ತೋಟಗಳು, ಮೈಸೂರ ಮತ್ತು ಕಾಠೆವಾಡದ ದೊಡ್ಡ ದೊಡ್ಡ ಎತ್ತುಗಳು, ಅರಬಸ್ಥಾನದ ಕುದುರೆಗಳು, ಸುಂದರವಾದ ರಥಗಳು ಇದ್ದು ಒಂದೆರಡು ಮೋಟಾರ ಬಂಡಿಗಳು ಸಹ ಇರುತ್ತವೆ. ಆದರೆ ನಾನು ಸ್ವಲ್ಪ ಹೆಚ್ಚು ವಯಸ್ಸಿನವನು ಮಾತ್ರ ಆಗಿರುತ್ತೇನೆ. ಅದರಲ್ಲೇನು ? ನೀವು ಅನುಮತಿಯನ್ನು ಕೊಟ್ಟರೆ ನಾನು ನಿಮ್ಮ ಮಗಳನ್ನು ಈ ಎಲ್ಲ ಚರಸ್ಥಿರ ಆಸ್ತಿಯ ಸ್ವಾಮಿನಿಯನ್ನು ಮಾಡುವೆನು.

**ವೆಂಕಣ್ಣನಾಯಕ**—ನೀವು ಅತ್ಯಂತ ಯೋಗ್ಯವನ್ನೇ ಮಾತಾಡಿದಿರಿ! ಇನ್ನು ಮುಂದೆ ನಿಮ್ಮದೇನೂ ಆಶೆಯು ಉಳಿಯಲಿಲ್ಲ. ಹತ್ತು ಹೋದವು, ಐದು ಉಳಿದವು. ಹಿಂದಿನಷ್ಟು ದಿವಸಗಳು ಮುಂದೆ ಬರುವಂತಿಲ್ಲ. ಕೇವಲ ಆಸ್ತಿಯ ಉಪಭೋಗದ ಮೇಲಿಂದಲೇ ಅವಳಿಗೆ ಸುಖವು ದೊರಕುವಂತಿದ್ದರೆ ಅವಳು ಈ ಎಲ್ಲ ಆಸ್ತಿಗೆ ತೀವ್ರವಾಗಿ ಸಂಪೂರ್ಣ ಬಾಧ್ಯಸ್ಥಳಾಗುವಳು. ಆದರೆ ಅವಳು ತನ್ನ ಇಡೀ ಜನ್ಮವನ್ನು ವೈಧವ್ಯದುಃಖದಲ್ಲಿ ಕಳೆಯಬೇಕಾದೀತು. ಇದಕ್ಕೆ ಏನು ಉಪಾಯವುಂಟು ? ವ್ಹಾಃ ಏನು ಉತ್ತಮ ಸ್ಥಳವು ! ಲಕ್ಷ್ಮೀಪತಿರಾವ, ಇನ್ನು ನಾನುಹೇಳುವವನ್ನಷ್ಟು ಕೇಳಿಕೊಳ್ಳಿರಿ. ಇವರು ಈಗ ವರ್ಣಿಸಿದಂಥ ಮೌಲ್ಯವಾನ್ ಉತ್ತಮ ಸಾಮಾನುಗಳಿಂದ ತುಂಬಿದಂಥ ಮೂರು ಭವ್ಯ ಮತ್ತು ಸುಂದರ ಮನೆಗಳು ಮತ್ತು ವರ್ಷಕ್ಕೆ ಐದಾರುಸಾವಿರ ರೂಪಾಯಿ ನಿರಂತರ ಉತ್ಪನ್ನ ಬರುವಂಥ ಇನಾಮ ಭೂಮಿಗಳು ನನಗೆ ಇರುತ್ತವೆ. ( **ಬಾಪೂರಾಯನ ಕಡೆಗೆ ಮೋರೆ ತಿರುವಿ** ) ಅಜ್ಜನವರೇ, ಇದನ್ನು ಕೇಳಿ ನಿಮಗೇನು ಅನ್ನಿಸುತ್ತದೆ ?

**ಬಾಪೂರಾವ**— ಎಲೋ ಹುಡುಗಾ, ಅನ್ನಿಸುವದೇನು ? ನನಗೆ ಸಹ ನನ್ನ ವ್ಯಾಪಾರದಿಂದ ವರ್ಷಕ್ಕೆ ಏಳೆಂಟು ಸಾವಿರ ಉತ್ಪನ್ನವು ಕಟ್ಟಿ ಬರುತ್ತದೆ. ಏಕೆ ನಿನ್ನ ಮೋರೆಯು ಈಗ **ಸಣ್ಣದಾಯಿತು** ?

**ವೆಂಕಣ್ಣನಾಯಕ**—ಯಾರ ಮೋರೆಯು ? ನನ್ನದೋ ನಿಮ್ಮದೋ ? ನೀವು ಇನ್ನು ಮೇಲೆ ಕಣ್ಣಿಗೆ ಕನ್ನಡಕಗಳನ್ನು ಹಚ್ಚಿಕೊಳ್ಳಿರಿ. ಅಂದರೆ ನಿಮ್ಮ ಕಣ್ಣು ಚೆನ್ನಾಗಿ ಕಾಣಿಸಲಿಕ್ಕೆ ಹತ್ತುವವು. ವಯಸ್ಸು ಮುಚ್ಚಿಕೊಳ್ಳಲಿಕ್ಕೆ ಈ ಪ್ರಕಾರ ಕಷ್ಟ ಸಹಿಸಬೇಡಿರಿ. ಇನ್ನೊಂದೇನಂದರೆ-ನನ್ನ ಮುಂದೆ ನಿಮ್ಮ ವ್ಯಾಪಾರದ ಜಂಬವನ್ನು ಬಡಿಯಬೇಡಿರಿ. ವ್ಯಾಪಾರದ ಯೋಗ್ಯತೆಯು ಎಷ್ಟಾದರೂ ಕನಿಷ್ಟವೇ. ಅದು ವಂಶಪರಂಪರ ನಡೆಯುತ್ತ ಬಂದಿರುವ ಜಹಾಗೀರಿಗೆ ಎಂದೂ ಸರಿಯಾಗಲಾರದು. **“ಕಪ್ಪೆ ಬೆಳೆದರೆ ಎಂದಾದರೂ ಆನೆಯಾದೀತೇ ?”**

**ಬಾಪೂರಾವ**—ಲಕ್ಷ್ಮೀಪತಿರಾವ ? ಮೇಲೆ ಹೇಳಿದ ನನ್ನ ಯಾವತ್ತು ಆಸ್ತಿಯನ್ನು ನಿಮ್ಮ ಕಿರಿಯ ಮಗಳಿಗೆ ಅರ್ಪಿಸುವದಲ್ಲದೆ ನನ್ನ ಸ್ವಂತ ವಜ್ರದೇಹವನ್ನು ಸಹ ಆಕೆಗೆ ಅರ್ಪಿಸುತ್ತೇನೆ.

**ವೆಂಕಣ್ಣನಾಯಕ**—ಅಹಹ! ಎಂಥ ವಜ್ರದೇಹವಿದು ? ಅದನ್ನು ಬೆಂಕೀ ಹಚ್ಚಿದರೆ ಸೈ. ನ್ಯಾಯತಃ ವಿಚಾರಮಾಡಿದರೆ ಅದಷ್ಟೇ ವಿಧಿಯು ಮಾತ್ರ ಈಗ ಉಳಿದಿರುತ್ತದೆ. ಯಾಕೆ ಲಕ್ಷ್ಮೀಪತಿರಾವ, ನಿಮ್ಮ ಮಗಳನ್ನು ನನಗೆ ಕೊಡುವದು ನಿರ್ಣಯವಾಯಿತೋ ಇಲ್ಲೋ ?

**ಲಕ್ಷ್ಮೀಪತಿರಾವ**—ಅದೆಲ್ಲ ನಿಜವು. ಅದರೆ ಈ ನಿಮ್ಮ ಮಾತಿಗೆ ನಿಮ್ಮ ತಂದೆಯ ಒಪ್ಪಿಗೆಯನ್ನು ಮುಂಚೆ ಕೇಳಿಕೊಂಡು ಬನ್ನಿರಿ.

**ವೆಂಕಣ್ಣನಾಯಕ**—ನೀವು ಸುಮ್ಮನೆ ಸಂಶಯ ತೆಗೆದುಕೊಳ್ಳುತ್ತೀರಿ. ನಿಮ್ಮ ಮಗಳನ್ನು ನಾನು ಲಗ್ನಮಾಡಿಕೊಳ್ಳುವದು ನಮ್ಮ ತಂದೆಯ ಮನಸ್ಸಿಗೆ ಎಂದಿಗಾದರೂ ಬಾರದೆ ಇದ್ದೀತೇ ?

**ಬಾಪೂರಾವ**—ಎಲಾ, ನಿನ್ನಂಥ ಕೈ ಬಾಯಿ ಶುದ್ಧವಿರದಂಥ ಮಗನ ಮೇಲೆ ತಂದೆಯ ವಿಶ್ವಾಸವು ಎಷ್ಟಿದ್ದೀತೆಂಬುವದನ್ನು ಯಾರೂ ಹೇಳುವದು ಬೇಡ.

**ಲಕ್ಷ್ಮೀಪತಿರಾವ**—ಅದೇನೂ ಇರಲಿ. ನಮ್ಮ ರಂಗವ್ವನ ಲಗ್ನವು ನಾಳಿನ ದಶಮಿಗೆ ನೇಮಕವಾಗಿರುತ್ತದೆ. ಆ ದಶಮಿಯ ನಂತರ ಐದು ದಿವಸಗಳೊಳಗಾಗಿ ನಿಮ್ಮ ತಂದೆಯ ಒಪ್ಪಿಗೆಯನ್ನು ತಂದುಕೊಡಬೇಕು. ಆ ಪ್ರಕಾರ ನೀವು ತಂದುಕೊಡಲಿಕ್ಕೆ ತಪ್ಪಿದರೆ ಆರನೇ ದಿವಸವೇ ನಾನು ಕಮಲೆಯನ್ನು ಬಾಪೂರಾಯರಿಗೆ ಲಗ್ನಮಾಡಿ ಕೊಡುವೆನು. ತಿಳಿಯಿತೇ ? ನಾನು ಇನ್ನು ಒಳಗೆ ಹೋಗುತ್ತೇನೆ.

**ಬಾಪೂರಾವ**—ಹಾಗಾದರೆ ನಮಸ್ಕಾರವು. (**ಲಕ್ಷ್ಮೀಪತಿರಾಯನು ಹೋಗುತ್ತಾನೆ.**) ಎಲಾ, ಗರ್ಭಶ್ರೀಮಂತ ಬೋಳವಿಾಶೆಯವನೇ ! ನಿನಗೂ ನಮಸ್ಕಾರವಿರಲಿ. ಕಮಲೆಯು ಇನ್ನು ನನ್ನವಳಾದಳು. ನಿನ್ನ ಮಾತಿಗೆ ನಿನ್ನ ತಂದೆಯು ಎಂದಿಗೂ ಒಪ್ಪಿಕೊಳ್ಳುವದಿಲ್ಲವೆಂಬುವದು ನಿಜವು. ಜಹಾಗೀರದಾರರಿಗೆ ಯಾವಾಗಲು ಮೈತುಂಬ ಸಾಲವಿರುವದು ನಿಶ್ಚಯವೇ. ಆದುದರಿಂದ ನೀನು ಅವನ ಒಪ್ಪಿಗೆಯನ್ನು ತೆಗೆದುಕೊಂಡು ಬರುವಕಾಲಕ್ಕೆ ಅವನ ಸಾಲದ ಯಾದಿಯನ್ನು ಸಹ ತೆಗೆದುಕೊಂಡು ಬರಲಿಕ್ಕೆ ಮರೆಯಬೇಡ. ನಮಸ್ಕಾರ. ಬೇಗನೆ ಹೋಗಿ ಬಾ. (**ನಗುತ್ತ ಹೋಗುತ್ತಾನೆ.**)

**ವೆಂಕಣ್ಣನಾಯಕ**—ಮುದುಕಾ, ಒಳ್ಳೇದು. ನಗು. ನಗು. ಎಷ್ಟು ನಕ್ಕೀ ? ನಿನಗೆ ಕಮಲೆಯ ಆಶೆಯು ತಪ್ಪಿದ ಬಳಿಕ ನಿನ್ನ ಕಣ್ಣು ತೆರೆಯುವವು. ನಿನ್ನ ಬಾಯೊಳಗೆ ಇನ್ನೂ ಸಿಲಕು ಉಳಿದಿರುವಂಥ ಹಲ್ಲುಗಳನ್ನು ನಾನು ಮುರಿಯದಿದ್ದರೆ ನನ್ನ ಹೆಸರು ವೆಂಕಣ್ಣನಾಯಕ ಅಲ್ಲ. (**ಸ್ವಲ್ಪ ಹೊತ್ತು ತಡೆದು**) ನಾನು ಹಿಂದುಗಡೆ ನನ್ನ ಜಹಾಗೀರಿಯ ಬಗ್ಗೆ ಹೇಳಿದ್ದರಿಂದ ಆ ಮುದುಕನ ಬಾಯಿಗೆ ಚನ್ನಾಗಿ ನೀರು ಬಿಟ್ಟವು. ಈ ಕೆಲಸದಲ್ಲಿ ನಾನು ಎಷ್ಟುಸಾರೆ ಬುರುಡಿ ಉರುಳಿಸಬೇಕಾಯಿತು ! ಇನ್ನೂ ಎಷ್ಟೆಷ್ಟು ಉರುಳಿಸಬೇಕಾಗುವದೋ ತಿಳಿಯದು. ಅದರಲ್ಲೇನು ! ಲಗ್ನದ ಕೆಲಸದಲ್ಲಿ ಎಷ್ಟು ಸುಳ್ಳು ಮಾತಾಡಿದರೂ ಪಾಪವಿರುವದಿಲ್ಲೆಂದು ಶಾಸ್ತ್ರವಚನವಿರುತ್ತದೆ. ನಾನು ಇನ್ನುಮೇಲೆ ಒಬ್ಬ ಸುಳ್ಳು ತಂದೆಯನ್ನು ಹುಟ್ಟಿಸತಕ್ಕದ್ದದೆ. ಜಗತ್ತಿನಲ್ಲಿ ಯಾವಾಗಲು ತಂದೆಯು ಮಗನನ್ನು ಹುಟ್ಟಿಸುತ್ತಾನೆ. ಆದರೆ ಮಗನು ತಂದೆಯನ್ನು ಹುಟ್ಟಿಸುವ ಉದಾಹರಣೆಯು ನನ್ನದೇ ಮೊದಲನೇದ್ದಾಗುವದು. (**ನಗುತ್ತ ಹೊರಟು ಹೋಗುತ್ತಾನೆ.**)

---o---

## ಅಂಕು ೩ನೇದ್ದು.

### ೧ನೇ ಪ್ರವೇಶ—ಕುಸುಮಪುರ. ಲಕ್ಷ್ಮೀಪತಿರಾಯನ ಮನೆಯ ಹಿಂದಿನ ಭಾಗ.

(ರಂಗರಾಜನು ಪುರಾಣದ ಗಂಟನ್ನು ಬಿಚ್ಚಿಕೊಂಡು ಬಣ್ಣದ ಮಣೆಯಮೇಲೆ ಕುಳಿತಿರುತ್ತಾನೆ)

**ರಂಗರಾವ**—ಇಲ್ಲಿಯವರೆಗಂತೂ ಎಲ್ಲವು ಸರಿಯಾಗಿ ಹೊಂದಿತು ! ಮೊದಮೊದಲಿಗೆ ಆ ಮರ್ಕಟನು ಮನೆಯನ್ನು ಪ್ರವೇಶಿಸಲಿಕ್ಕೆ ಹತ್ತಿದಾಗ ನನಗೆ ಸ್ವಲ್ಪ ಭಯವುಂಟಾಗಿತ್ತು. ಆದರೆ ತ್ರಾಟಿಕಮ್ಮನು ಆ ಮರ್ಕಟನ ಪಾರಪತ್ಯವನ್ನು ಚೆನ್ನಾಗಿ ಮಾಡಿ ಬಿಟ್ಟಳು ! ಇಷ್ಟಾದಾಗ್ಯೂ ಅವನಿಗೆ ನಾಚಿಕೆ ಎಲ್ಲಿರುತ್ತದೆ ? ಹೇಳಿಕೇಳಿ ಅವನು ಕೋಡಗನೇ ! ನಿನ್ನೆಯ ಪತ್ರವನ್ನು ನೋಡಲಾಗಿ ಅವನು ಬಹಳ ಮೊಂಡತನವನ್ನು ಹಿಡಿದಂತೆ ಕಾಣುತ್ತದೆ. ಆದು ಪರಿಂದ ಅವನ ಹಲ್ಲನ್ನೇ ಮುರಿದು ಬಿಡತಕ್ಕದ್ದು. ಮತ್ತು ನನ್ನ ಉದ್ದಿಶ್ಯವನ್ನು ಸಫಲಮಾಡಿಕೊಳ್ಳಲಿಕ್ಕೆ ವಿಶೇಷ ಪ್ರಯತ್ನವನ್ನು ನಡೆಸತಕ್ಕದ್ದು. ಕಮಲೆಯ ಮನಸ್ಸನ್ನು ನನ್ನ ಕಡೆಗೆ ಎಳೆದುಕೊಳ್ಳುವದು ಸುಲಭವಾಗಿರುವದು. ಆದರೆ ಒಂದು ಅನುಮಾನವು ಮಾತ್ರ ಬರುತ್ತದೆ. ಆಕೆಯು ತನ್ನ ತಂದೆಯನ್ನು ವಿಚಾರಿಸದೆ ಅಥವಾ ಅವನ ಇಚ್ಛೆಯ ವಿರುದ್ಧವಾಗಿ ನನ್ನನ್ನು ಲಗ್ನಮಾಡಿಕೊಳ್ಳಲಿಕ್ಕೆ ಸಿದ್ಧಳಾಗುವಳೋ ಇಲ್ಲೋ ಎಂಬದನ್ನು ಹೇಳಲಾರೆನು. ಏನಾದರೂ ಆಗಲಿ, ಪ್ರಯತ್ನ ಮಾಡಿ ನೋಡೋಣ. « **ಪ್ರಯತ್ನಾಂತ್ಯ ಪರಮೇಶ್ವರಃ.** » ಚಿಕ್ಕವ್ವನು ಸಾತ್ವಿಕಳು, ಭಾವಿಕಳು ಮತ್ತು ಅವಳ ಮೇಲೆ ಅತ್ಯಂತ ಪ್ರೇಮ ಮಾಡುವವಳು ಇರುವದರಿಂದ ಅವಳು ನನ್ನ ಕೆಲಸಕ್ಕೆ ಅನುಕೂಲವಾಗ ಬಹುದು. ಆದರೆ ಅವಳ ತಂದೆಯು ಕೇವಲ ದ್ರವ್ಯದ ಮೇಲೆ ಆಶೆಮಾಡುವಂಥ ಲೋಭಿಯು ಇರುತ್ತಾನೆ. ಆದುದರಿಂದ ಹುಡಿಗಿಗೆ ಯೋಗ್ಯ ವರನು ಯಾರು ಎಂಬುವದು ನಿನಗೆ ತಿಳಿದಷ್ಟು ಕೇವಲ ವ್ಯವಹಾರ ದೃಷ್ಟಿಯಿಂದ ವಿಚಾರಮಾಡುವ ತಂದೆಗೆ ತಿಳಿಯಲಾರದೆಂಬುವದನ್ನು ನಾನು ಅವಳ ಚಿಕ್ಕವ್ವನ ಮನಸ್ಸಿನಲ್ಲಿ ಚೆನ್ನಾಗಿ ಬಿಂಬಿಸಿ ಕೊಟ್ಟಿರುತ್ತೇನೆ. ಆ ಜರಠ ಬಾಪೂರಾಯನ ಬಗ್ಗೆ ಅವಳಿಗೆ ಅತ್ಯಂತ ತಿರಸ್ಕಾರವಿರುತ್ತದೆ. ಲಕ್ಷ್ಮೀಪತಿರಾಯನು

ಅವನನ್ನು ಮೊದಲೇ ಏಕೆ ಪ್ರತೀಕಾರಮಾಡಲಿಲ್ಲೆಂದು ಅವಳು ಸಿಟ್ಟಿಗೆದ್ದಿರುತ್ತಾಳೆ. ಈ ಉರಿಯುವ ಬೆಂಕಿಯ ಮೇಲೆ ಹುಲ್ಲು ಹಾಕುವ ಕೆಲಸವು ನನ್ನದು. ಆಮೇಲೆ ಕೇಳುವದೇನದೆ ? (ಮಗ್ಗಲಿಗೆ ನೋಡಿ) ಎಲೋ ! ಕಮಲೆಯು ಇತ್ತ ಬಂದಳೆಂದು ಕಾಣುತ್ತದೆ. ಇನ್ನು ನಮ್ಮ ಪುರಾಣವನ್ನು ತೆರೆಯೋಣ. ( ಪುರಾಣವನ್ನು ತೆರೆದು ಓಲೆಯನ್ನು ಕೈಯಲ್ಲಿ ಹಿಡಿದುಕೊಳ್ಳುತ್ತಾನೆ. )

(ಕಮಲೆಯು ಬರುತ್ತಾಳೆ.)

ಈ ಹೊತ್ತು ನೀನೊಬ್ಬಳೇ ಬಂದೆ ? ಚಿಕ್ಕವ್ವನು ಎಲ್ಲಿದ್ದಾಳೆ ?

**ಕಮಲೆ**—(ಕೆಳಗೆ ಕುಳಿತು) ಚಿಕ್ಕವ್ವನು ಇಂದಿರಕ್ಕನ ಮನೆಗೆ ಹೋಗಿರು ತ್ತಾಳೆ.

**ರಂಗರಾವ**—ಹೀಗೇನು ? ಹಾಗಾದರೆ ಈ ಹೊತ್ತು ಅನಾಧ್ಯಾಯವೇ ಸರಿ. ಒಳ್ಳೇದಾಯಿತು. (ಪುರಾಣವನ್ನು ಸುತ್ತಿಡಲಿಕ್ಕೆ ಆರಂಭಿಸುತ್ತಾನೆ.)

**ಕಮಲೆ**— ನನಗಂತೂ ಒಬ್ಬಳೇ ಕುಳಿತು ಬಹಳ ಬೇಸರಿಕೆ ಬಂದಿರುತ್ತದೆ. ಆ ಹೊಯ್ಮಾಲಿಂ ಾದ ಚಂಪೆಯು ಸಹ ಎಲ್ಲಿಯೋ ಕೆಲಸಕ್ಕಾಗಿ ಹೊರಗೆ ಹೋದ ವಳು ಇನ್ನೂ ಬರಲಿಲ್ಲ. ನೀವು ಹಿಂದಕ್ಕೆ ಒಬ್ಬ ರಾಜಕನ್ನಿಕೆಯ ಕಥೆಯನ್ನು ನನಗೆ ಹೇಳುತ್ತೇನೆಂದು ಹೇಳಿದ್ದಿರಿ. ನಿಮಗೆ ಅನುಕೂಲವಿದ್ದರೆ ಆ ಕಥೆಯನ್ನು ಈಗ ಹೇಳಿರಿ. ಅಂದರೆ ನನ್ನ ಬೇಸರಿಕೆಯಾದರೂ ಸ್ವಲ್ಪ ಕಡಿಮೆಯಾದೀತು.

**ರಂಗರಾವ**— ಒಳ್ಳೇದು. ನನಗೆ ಅನುಕೂಲ ಇಲ್ಲದೆ ಇರಲಿಕ್ಕೆ ಏನಾಗಿ ರುತ್ತದೆ ? (ತನ್ನಷ್ಟಕ್ಕೆ) ಪ್ರಸಂಗವು ಒಳ್ಳೇದಿರುತ್ತದೆ. ರಂಗರಾಯಾ, ನಿನ್ನ ಬುದ್ಧಿ ಚಾತುರ್ಯದ ಪರೀಕ್ಷೆಯು ಹೊತ್ತು ಈಗ ಬಂದಿರುತ್ತದೆ, ನೋಡು. (ಪುರಾಣದ ಓಲೆ ಗಳನ್ನು ತಿರಿವಿ ಒಂದು ಓಲೆಯನ್ನು ತೆಗೆದುಕೊಳ್ಳುತ್ತಾನೆ.) ಹಾಗಾದರೆ ಲಕ್ಷ್ಯಕೊಟ್ಟು ಕೇಳು. ಪೂರ್ವದಲ್ಲಿ ಒಂದಾನೊಂದು ಕಾಲಕ್ಕೆ ಕುಬೇರನೆಂಬ ಒಬ್ಬ ಧನಾಢ್ಯ ರಾಜನಿದ್ದನು. ಅವನಿಗೆ ಕಮಲನಯನೆಯೆಂಬ ಒಬ್ಬ ಉಪವರ ಕನ್ನಿಕೆಯು ಇದ್ದಳು.

**ಕಮಲೆ**—(ತನ್ನಷ್ಟಕ್ಕೆ) ಅವ್ವಯ್ಯಾ, ಈ ಕಥೆಯೊಳಗಿನ ಹೆಸರುಗಳು ನಮ್ಮ ತಂದೆಯ ಹೆಸರಿಗೂ ನನ್ನ ಹೆಸರಿಗೂ ಕೂಡುತ್ತವೆ.

**ರಂಗರಾವ**—ಅವಳ ಲಾವಣ್ಯವಂತೂ ಅಪ್ರತಿಮವಾಗಿತ್ತು. ಅವಳ ಶರೀರವು ಗೌರ ವರ್ಣದ್ದು. ನೋಟವು ಚಂಚಲ ಮತ್ತು ತೇಜಸ್ವಿ ಇದ್ದು ಸೌಮ್ಯವಾದದ್ದು. ಅವಳ ನಾಶಿಕವು ಸರಳವಾದದ್ದೂ ತೆಳ್ಳಗಾದದ್ದೂ ಇದ್ದು ಉದ್ದಳತೆಯಲ್ಲಿ ಮಧ್ಯಮವಾದದ್ದು. ಅವಳ ಓಷ್ಠಸಂಪುಟವು ಈಗೀಗ ಅರಳಿದ ಗುಲಾಬಿಯ ಮೊಗ್ಗೆಯಂತೆ ಮೋಹಕವಾದದ್ದು. ಅವಳ ಎರಡೂ ಗಲ್ಲಗಳ ನಟ್ಟನಡುವೆ ಸ್ವಲ್ಪ ತಗ್ಗು ಬಿದ್ದಿದ್ದು ಅವಳ ಮೈಕಟ್ಟು ಬಹಳ ಸೊಬಗುಳ್ಳದ್ದು. ಇದಲ್ಲದೆ ಅನುರೂಪವಾದ ವರ್ಧಿಷ್ಣು ಅವಯವಗಳು. ಅಂದಮೇಲೆ ಇಂಥ ಸುಂದರ ಮೂರ್ತಿಯನ್ನು ನೋಡಿ ಯಾವ ಪುರುಷನು ಮೋಹಿತನಾಗದೆ ಇರಲಿಕ್ಕಿಲ್ಲ ? ಇವಳನ್ನು ದೊರಕಿಸಿಕೊಳ್ಳುವದಕ್ಕಾಗಿ ಸಾವಿರಾರು ತರುಣ ಜನರು ಅಹೋರಾತ್ರಿ ತಳಮಳಿಸುತ್ತಿದ್ದರು. ನಿನಗೇನು ಹೇಳಲಿ ? ತಾರುಣ್ಯ ಮತ್ತು ಸೌಂದರ್ಯವಿರುವಂಥ ಕನ್ನಿಕೆಯು ನಮ್ಮಂಥ ತರುಣ ಭ್ರಮರರ ಜೀವವನ್ನು ಸೆಳೆದುಕೊಳ್ಳುವಳೆಂಬ ಸಂಗತಿಯಲ್ಲಿ ಸಂದೇಹವೇನು ? ಈ ಮಾತು ನಿನಗೆ ಹೇಗೆ ತೋರುತ್ತದೆ ?

**ಕಮಲೆ**—ಇದೇನು ಕೇಳುವದು ? ನನಗಂತೂ ಏನೂ ತಿಳಿಯುವದಿಲ್ಲ.

**ರಂಗರಾವ**—ಇದರಲ್ಲಿ ನಿನಗೆ ಏನೂ ತಿಳಿಯುವದಿಲ್ಲೆಂಬುವದೇ ಉತ್ತಮವು. ಅದಿರಲಿ ಬಿಡು. ಆ ಕಮಲೆಯನ್ನು—ಅಲ್ಲಲ್ಲ,—ಆ—ಕಮಲನಯನೆಯನ್ನು ನೂರಾರು ಮಂದಿ ಐಶ್ವರ್ಯವಂತರೂ ಗುಣವಂತರೂ ಆಗಿದ್ದ ತರುಣರು ಲಗ್ನ ಮಾಡಿಕೊಳ್ಳಬೇಕೆಂದು ಇಚ್ಛೈಸಿ ತಮ್ಮ ತಮ್ಮೊಳಗೆ ಸ್ಪರ್ಧೆಯನ್ನು ಮಾಡ ತೊಡಗಿದರು. ಆದರೆ ಅವಳ ತಂದೆಯಾದ ಕುಬೇರರಾಜನ ದೃಷ್ಟಿಯು ಗುಣಕ್ಕಿಂತ ಐಶ್ವರ್ಯದ ಕಡೆಗೆ ವಿಶೇಷವಿದ್ದ ಕಾರಣ ಅವನು ಅವಳ ಮನಸ್ಸಿನ ಸ್ವಾಭಾವಿಕ ಒಲವನ್ನು ವಿಚಾರ ಮಾಡದೆ ಒಬ್ಬ ವಯೋವೃದ್ಧನಾದ ಶ್ರೀಮಂತನಿಗೆ ಲಗ್ನ ಮಾಡಿಕೊಡಬೇಕೆಂದು ಯೋಚಿಸಿದನು.

**ಕಮಲೆ**—ಆ ತಂದೆಯು ನಿಜವಾಗಿ ಇಂಥ ಮೂರ್ಖನಿದ್ದನೇನು ? ಬರಿಯ ದ್ರವ್ಯ ತಕ್ಕೊಂಡು ಸುಟ್ಟರೆ ಸೈ.

**ರಂಗರಾವ**—ಆ ಹುಡಿಗೆಯು ಆ ವಯೋವೃದ್ಧನನ್ನು ನೋಡಿದ್ದಳು. ಅವನಲ್ಲಿ ಐಶ್ವರ್ಯದ ಹೊರತಾಗಿ ಒಂದೂ ಗುಣವಿಲ್ಲೆಂಬುದು ಅವಳಿಗೆ ಚೆನ್ನಾಗಿ

ಗೊತ್ತಿತ್ತು. ಇದಲ್ಲದೆ ಅವಳ ಮನಸ್ಸು ಒಬ್ಬ ಗುಣವಂತನಾದ ಮತ್ತು ಸುಂದರನಾದ ತರುಣನ ಮೇಲೆ ಇತ್ತು. ಆದರೆ ಅವನು ಬಡ ಸ್ಥಿತಿಯ ಮನುಷ್ಯನಿದ್ದನು. ಅಂದಮೇಲೆ ಅವಳು ಏನು ಮಾಡುವದದೆ? ಇಂಥ ಕಠಿಣ ಸಮಯದಲ್ಲಿ ತಾಯಿಯ ಉಪಯೋಗವೇ ಹೆಚ್ಚಾಗಿ ಆತಗತಕ್ಕದ್ದು ಸಹಜವದೆ. ವರನಲ್ಲಿ ಯಾವ ಗುಣಗಳು ಅವಶ್ಯವಾಗಿ ಬೇಕೆಂಬುವದನ್ನು ತಿಳಿಯಕೊಳ್ಳುವದಕ್ಕೆ ತಂದೆಯಕಿಂತಲು ತಾಯಿಯೇ ಹೆಚ್ಚು ಯೋಗ್ಯಳು. ಮಗಳ ಕಲ್ಯಾಣದ ಬಗ್ಗೆ ತಾಯಿಯ ಚಿಂತೆಯು ಇರುವಷ್ಟು ತಂದೆಯ ಚಿಂತೆಯು ಇರುವದಿಲ್ಲೆಂಬುವದು ಅನುಭವಸಿದ್ಧವಾದ ಮಾತು.

**ಕಮಲೆ**—ಇದು ಅಕ್ಷರಶಃ ನಿಜವು. ನನಗೆ ತಾಯಿಯ ಅನುಭವವು ವಿಶೇಷ ಇರುವದಿಲ್ಲ. ಆದರೆ ನನ್ನಮೇಲೆ ನನ್ನ ತಂದೆಯಕಿಂತ ನನ್ನ ಚಿಕ್ಕವ್ವನೇ ಹೆಚ್ಚು ಪ್ರೀತಿ ಮಾಡುತ್ತಾಳೆ. ಇದರ ಮೇಲಿಂದ ತಾಯಿಯು ಎಷ್ಟು ಪ್ರೀತಿ ಮಾಡಬಹುದೆಂಬದರ ಕಲ್ಪನೆಯನ್ನು ಮಾಡಲಿಕ್ಕೆ ಅಡ್ಡಿ ಇಲ್ಲ. ತಾಯಿಯ ಮುಂದೆ ಮಕ್ಕಳು ತಮ್ಮ ಸುಖದುಃಖಗಳನ್ನು ಏನೂ ಮಾಜವೆ ಹೇಳಲಿಕ್ಕಾಗುತ್ತದೆ. ಆದರೆ ತಂದೆಯ ಮುಂದೆ ಈ ಪ್ರಕಾರ ಆಗುವದಿಲ್ಲ.

**ರಂಗರಾವ**—ಯೋಗ್ಯವೇ ಸರಿ. ನಿನ್ನಂತೆಯೇ ಆ ಹುಡಿಗೆಯ ದುರ್ದೈವದಿಂದ ಅವಳು ಚಿಕ್ಕವಳಿರುವಾಗಲೇ ಅವಳ ತಾಯಿಯು ತೀರಿಕೊಂಡಿದ್ದಳು. ಆದುದರಿಂದ ಅವಳಿಗೆ ತನ್ನ ಹೃದ್ಗತವನ್ನು ತಿಳಿಸಲಿಕ್ಕೆ ಯಾರೂ ಇದ್ದಿಲ್ಲ. ಅವಳ ತಂದೆಯು ತಾನು ನೇಮಕ ಮಾಡಿದ ವರನನ್ನು ತನ್ನ ಮಗಳು ಮಾನ್ಯ ಮಾಡಲಿಕ್ಕೇ ಬೇಕೆಂದು ತಿಳಿದು ಒಂದು ಮುಹೂರ್ತದದಿವಸ ಅವಳನ್ನು ತಾನು ನೇಮಕ ಮಾಡಿದ ವರನಿಗೆ ಲಗ್ನಮಾಡಿಕೊಟ್ಟು ಋಣಮುಕ್ತನಾಗಬೇಕೆಂದು ವಿಚಾರ ನಡೆಸಿದನು.

**ಕಮಲೆ**—ಅಯ್ಯೋ ದೇವರೇ ! ತಂದೆಗಳೆಂಬುವವರು ಎಷ್ಟು ನಿಷ್ಠುರರಿರುತ್ತಾರೆ ! ಹುಡಿಗಿಗೆ ಏನು ಅನ್ನಿಸೀತೆಂಬುವದರ ವಿಚಾರವು ಸಹ ಆಕೆಯ ತಂದೆಯ ಮನಸ್ಸಿನಲ್ಲಿ ಬರಲಿಲ್ಲವೇ ?

**ರಂಗರಾವ**—ಕಮಲೇ, ನಿನಗೆ ಜಗತ್ತಿನ ಅನುಭವವು ಹೆಚ್ಚಿಗೆ ಬಂದ ಬಳಿಕ ಯಾವಾಗಲು ತಂದೆಯ ಪ್ರೇಮವು ಮರ್ಯಾದಿತವಾದದ್ದೂ ತಾಯಿಯ

ಪ್ರೇಮವು ಮಾತ್ರ ವಿಸ್ಮೃತವಾದ್ದೂ ಎಂಬುವದು ಚೆನ್ನಾಗಿ ಗೊತ್ತಾಗುವದು. ಅದೆಲ್ಲ ಇರಲಿ. ಕಥೆಯನ್ನು ಮೊದಲಿಗೆ ಪೂರ್ಣವಾಗಿ ಕೇಳಿಕೋ. ಆ ಹತಭಾಗ್ಯ ಹುಡಿಗಿಯ ಗಂಡನಲ್ಲಿ ಒಂದೂ ಸದ್ಗುಣವಿದ್ದಿಲ್ಲ. ಅವನಲ್ಲಿ ಅನೇಕತರದ ದುರ್ವ್ಯಸನಗಳು ಮಾತ್ರ ನಖಶಿಖಾಂತವಿದ್ದವು. ಆದಾಗ್ಯೂ ಆ ಹುಡಿಗೆಯು ಸ್ವತಃ ಸದ್ಗುಣಿಯೂ, ಸಚ್ಛೀಲಳೂ, ಸದಾಚಾರಿಯೂ ಇದ್ದ ಕಾರಣ ಅವಳು ನಿರಾಶೆಯನ್ನು ಸಹನ ಮಾಡಿ ತನ್ನ ಪಾತಿವ್ರತ್ಯಕ್ಕೆ ಕುಂದು ತಾರದಂತೆ ವರ್ತಿಸಿದಳು. ಗಂಡನಂತೂ ಅವಳ ಕೂಡ ನಿಜವಾದ ಪ್ರೇಮದಿಂದ ಎಂದೂ ನಡೆಯುತ್ತಿದ್ದಿಲ್ಲ. ಅವನು ಯಾವಾಗಲು ವಿಷಯೇಚ್ಛೆಯಿಂದ ಅಂಧನಾಗಿರುತ್ತಿದ್ದನು. ಅಂದಬಳಿಕ ಅವರಿಬ್ಬರು ಏಕಜೀವದಿಂದ ನಡೆಯುವ ಬಗೆ ಎಲ್ಲಿ ? ಏಕಜೀವವು ಇಲ್ಲದೆ ಹೋದಲ್ಲಿ ಪತಿಪತ್ನಿಗಳ ಸಹವಾಸವು ಸುಖದಾಯಕವಾಗುವದು ಹೇಗೆ ?

**ಕಮಲೆ**—ಇದರಲ್ಲಿ ನನಗೊಂದು ಸಂಶಯವು ಬಂದಿರುತ್ತದೆ. ಶ್ರೀರಾ ಬಾಲ್ಯದಿಂದ ಗಂಡ ಹೆಂಡರು ಕೂಡಿ ಇರುವದಾದಲ್ಲಿ ಅವರೊಳಗೆ ಒಂದು ವೇಳೆ ಪ್ರೇಮವಿಲ್ಲದಿದ್ದರೂ ಆ ಪ್ರೇಮದ ಬುದ್ಧಿಯು ಉತ್ಪನ್ನವಾಗಬಹುದು. ಆದರೆ ನನ್ನ ವಯಸ್ಸಿನವಳನ್ನು ಅಂದರೆ ಸ್ವಂತ ಹಿತಾಹಿತಗಳನ್ನು ತಿಳಿದುಕೊಳ್ಳಲು ಸಮರ್ಥಳಿರುವಂಥವಳನ್ನು ಒಮ್ಮೆಲೇ ಒಬ್ಬ ಅಪರಿಚಯಸ್ಥ ತರುಣನಿಗೆ ಗಂಟು ಹಾಕಿ ಕೊಡುವದು ಗಂಡಾಂತರವಲ್ಲವೇ ?

**ರಂಗರಾವ**— ಹೌದು. ಅದೇ ದೊಡ್ಡ ಮಹತ್ವದ ಪ್ರಶ್ನೆಯು ಇರುತ್ತದೆ. ಆದರೆ ಪ್ರಸ್ತುತ ಸ್ಥಿತಿಯಲ್ಲಿ ಅದನ್ನು ಯಾರೂ ವಿಚಾರ ಮಾಡಬಾರದೆಂದು ಸಂಕಲ್ಪಮಾಡಿರುತ್ತಾರೆ. ಅದಿರಲಿ ಬಿಡು. ಆ ಕಮಲನಯನೆಗೆ ಮೂರು ಮಂದಿ ಸವತಿಯರಿದ್ದರು. ಅವರಲ್ಲಿ ಒಬ್ಬಳೂ ಆಕೆಯಂತೆ ಸುಶೀಲರಿದ್ದಿಲ್ಲ. ಅವರು ಆಕೆಯನ್ನು ನಾನಾ ಪ್ರಕಾರದಿಂದ ಪೀಡಿಸಹತ್ತಿದರು ಸವತಿಮತ್ಸರದಂಥ ಕೆಟ್ಟ ಮತ್ಸರವು ಎರಡನೇದ್ದು ಯಾವದೂ ಇರುವದಿಲ್ಲ. ಇರಲಿ. ಯಾವತ್ತು ಕಥೆಯನ್ನು ನಿನಗೆ ನಾನು ಹೇಳುತ್ತ ಕುಳಿತರೆ ಅದು ಬಹಳ ಬೆಳೆದೀತು. ಆದುದರಿಂದ ನಾನು ಸ್ವಲ್ಪದರಲ್ಲಿಯೇ ಹೇಳುವದೇನಂದರೆ:— ಸೂಕ್ಷ್ಮ ಪ್ರಕೃತಿ, ಮೃದು ಅಂತಃಕರಣ, ಉನ್ನತ ಮನೋಭಾವ, ಭಯಂಕರ ನಿರಾಶೆ, ಪ್ರೇಮಾಶ್ರಯದ ಅಭಾವ, ಹಾಗೂ ಸವತಿಯರು ಮತ್ತು ಅತ್ತಿಅತ್ತಿಗಿನಾದಿನಿಯರು ಕೊಡುತ್ತಿದ್ದ ಉಪದ್ರವ,

ಮೇಲಾಗಿ ಪತಿಯು ತೋರಿಸುವ ತಿರಸ್ಕಾರ ಇವೆಲ್ಲವುಗಳು ಒಂದೇ ಕಡೆಗೆ ಕೂಡಿದ ಮೇಲೆ ಆ ಕೋಮಲ ಲತಿಕೆಯು ದುಃಖಾಗ್ನಿಯಿಂದ ಕಮರಿ ಹೋಗಿ ಬೇಗನೆ ಸ್ವರ್ಗದ ದಾರಿಯನ್ನು ಹಿಡಿದಳೆಂಬದರಲ್ಲಿ ಆಶ್ಚರ್ಯವೇನು ?

**ಕಮಲೆ**—ಅಯ್ಯೋ ! ಏನು ಆ ಹತಭಾಗ್ಯಳ ಅವಸ್ಥೆಯಾಯಿತು ? ಪುರಾಣಿಕರೇ, ನೀವು ಈ ಕಥೆಯನ್ನು ನನಗೆ ಹೇಳದೆ ಬಿಟ್ಟಿದ್ದರೆ ಬಹಳ ನೆಟ್ಟಗಾಗುತ್ತಿತ್ತು. ಇದನ್ನು ಕೇಳಿದಾರಭ್ಯ ನನ್ನ ಮನಸ್ಸು ಅತ್ಯಂತ ಉದ್ವಿಗ್ನವಾಗಿರುತ್ತದೆ. ದೇವರಲ್ಲಿ ಇದೇ ನ್ಯಾಯವೇನು ?

**ರಂಗರಾವ**—ಎಲೇ ಹುಚ್ಚೀ, ದೇವರಿಗೆ ಏಕೆ ವ್ಯರ್ಥವಾಗಿ ದೋಷವನ್ನು ಕೊಡುತ್ತೀ ? ಭಗವಂತನ ಲೀಲೆಯು ಅಗಾಧವದೆ! ಅವನ ಅಂತಸ್ಥ ಉದ್ದೇಶವು ನಮ್ಮಂಥ ಮಾನವರಿಗೆ ಹೇಗೆ ತಿಳಿದೀತು ? ಯೋಗ್ಯವಾಗಿ ವಿಚಾರ ಮಾಡಿದರೆ ಇಂಥ ಉದಾಹರಣೆಗಳ ಮೇಲಿಂದ ನಾವು ದೇವರ ಮೇಲೆ ದೃಢವಿಶ್ವಾಸವನ್ನು ಇಡಬೇಕೆಂಬ ಬೋಧವನ್ನು ತೆಗೆದುಕೊಳ್ಳತಕ್ಕದ್ದು. ಅದು ಹೇಗೂ ಇರಲಿ, ಆ ತಂದೆಯ ಕೃತ್ಯವು ನಿನ್ನ ಮನಸ್ಸಿಗೆ ಯೋಗ್ಯವಾಗಿ ತೋರಿತೇ ?

**ಕಮಲೆ**—ಇವನೆಂಥ ತಂದೆಯು ! ಅವನು ಹಿಂದಿನ ಜನ್ಮದ ವೈರಿಯೇ ಇರಬಹುದು.

**ರಂಗರಾವ**—ನಾನು ಹಾಗೇನೂ ಅನ್ನುವದಿಲ್ಲ. ಆದರೆ ಅವನು ತನ್ನ ಮಗಳ ಲಗ್ನದ ಕೆಲಸದಲ್ಲಿ ಅವಿಚಾರವನ್ನು ಮಾಡಿ ಅವಳ ಸಂಸಾರವನ್ನು ಮಣ್ಣು ಪಾಲು ಮಾಡಿದನೆಂಬುವದು ಸತ್ಯವು. ಅವನ ಮನಸ್ಸಿನಲ್ಲಿ ತನ್ನ ಮಗಳ ಅಕಲ್ಯಾಣವಾಗಬೇಕೆಂಬುವದು ಸರ್ವಥಾ ಇದ್ದಿಲ್ಲ. ಆದರೆ ದ್ರವ್ಯವಿದ್ದರೆ ಯಾವತ್ತು ದೊರಕುತ್ತದೆಂತಲೂ, ದ್ರವ್ಯವೇ ಸೌಖ್ಯದ ಮೂಲಸಾಧನವೆಂತಲೂ ಅವನು ಮೂರ್ಖತನದಿಂದ ತಿಳಿದುಕೊಂಡಿದ್ದನು. ಈಗಿನ ಕಾಲದಲ್ಲಾದರೂ ಇಂಥ ಮೂರ್ಖ ತಂದೆಗಳು ಕಡಿಮೆ ಇರುವದಿಲ್ಲ.

**ಕಮಲೆ**—ಸುಡುಗಾಡ ನುಂಗಲಿಕ್ಕೆ ಅವರೆಲ್ಲಿ ಕಡಿಮೆಯಾಗುತ್ತಾರೆ ? ನಮ್ಮಂಥ ಬಡ ಹುಡಿಗೆಯರ ಗೋಳು ಕಟ್ಟಿಕೊಳ್ಳಲಿಕ್ಕೇ ಅವರು ಜನ್ಮ ತೆಗೆದು ಕೊಂಡಿರುತ್ತಾರೆ!

**ರಂಗರಾವ**—ಕಮಲೇ, ಸಿಟ್ಟಿನ ಆವೇಶದಲ್ಲಿ ನೀನು ಎಚ್ಚರಿಕೆ ಇಲ್ಲದೆ ಬೇರೇ ಕಡೆಗೆ ತೆರಳಿದೆ. ಎಲೇ ಹುಚ್ಚೀ, "ನಮ್ಮಂಥ ಬಡ ಹುಡಿಗೆಯರು" ಎಂಬ ಉದ್ಗಾರವು ನಿನ್ನ ಬಾಯಿಂದ ಅಕಸ್ಮಾತ್ತಾಗಿ ಬಂದಿತು. ಆದುದರಿಂದ ನಿನ್ನ ತಂದೆಯು ನಿನಗೇನಾದರೂ ಈ ಪ್ರಕಾರದ ದುಃಖವನ್ನು ಕೊಟ್ಟಿರುತ್ತಾನೇನು ? ಅವನು ನಿನ್ನನ್ನು ಆ ಬಾಪೂರಾಯನಿಗೆ ಲಗ್ನಮಾಡಿಕೊಟ್ಟರೆ ನೀನು ಏನು ಮಾಡುವೆ ?

**ಕಮಲೆ**--( ತನ್ನಷ್ಟಕ್ಕೆ ) ಈಗ ನನ್ನ ಲಕ್ಷ್ಯಕ್ಕೆ ಬಂದಿತು. ಇವನು ಈ ಕಥೆಯನ್ನು ಇಷ್ಟರ ದೆಸೆಯಿಂದಲೇ ನನ್ನ ಮುಂದೆ ಹೇಳಿರಬಹುದೆಂದು ತೋರುತ್ತದೆ. ಇನ್ನು ನಾನು ಇವನಿಗೆ ಬಹಳ ಎಚ್ಚರಿಕೆಯಿಂದಲೇ ಉತ್ತರವನ್ನು ಕೊಡಬೇಕು. **(ಬಹಿರಂಗವಾಗಿ)** ಅದಿರಲಿ. ಆದರೆ ನನಗೆ ಆ ತಂದೆಯ ಬಗ್ಗೆ ಬಹಳ ಸಂತಾಪವು ಹುಟ್ಟಿರುತ್ತದೆ. ಅವನು ತನ್ನ ಮಗಳ ಕುತ್ತಿಗೆಯನ್ನು ಕೊಯ್ದನೆಂಬುವದರಲ್ಲಿ ಸಂಶಯುವಿಲ್ಲ. ಸ್ತ್ರೀಜನ್ಮವು ಬಹಳ ಕೆಟ್ಟದು. ನಾವು ಯಾವಾಗಲು ಎರಡನೆಯವರ ಕೈ ಕೆಳಗೆ ನಡೆಯತಕ್ಕವರೇ. ಸುಖವೆಲ್ಲ ಪುರುಷರ ಪಾಲಿನದು. ನಾವು ಕೇವಲ ದುಃಖದ ಪಾಲುಗಾರರು.

**ರಂಗರಾವ**—ಛೇ. ಛೇ. ಹೀಗೆ ಅನ್ನಬೇಡ. ಸ್ತ್ರೀಯರ ಸಹಾಯವಿಲ್ಲದಿದ್ದರೆ ಪುರುಷರು ಈ ಜಗತ್ತಿನಲ್ಲಿ ಯಾವ ಇಷ್ಟಾರ್ಥಗಳನ್ನೂ ಸಾಧಿಸಿಕೊಳ್ಳುತ್ತಿದಿಲ್ಲ. ಈ ಸಂಸಾರ ಯಾತ್ರೆಯಲ್ಲಿ ಸೌಖ್ಯ, ಸೌಜನ್ಯ, ಮಾಧುರ್ಯ, ಕಾಮವಿಕಾರ, ಸಂಸಾರಾಪೇಕ್ಷೆ, ಇವೆಲ್ಲವುಗಳ ಉದ್ಭವವು ಸ್ತ್ರೀಯರಿಂದಲೇ. ಇವುಗಳಿಲ್ಲದಿದ್ದರೆ ಈ ಜಗತ್ತು ಕೇವಲ ಅರಣ್ಯದಂತೆ ಭಾಸವಾಗುತ್ತಿತ್ತು. ಅಂದಮೇಲೆ ಸ್ತ್ರೀಯರ ಮಹತ್ವವು ಕಡಿಮೆಯೆಂದು ಯಾರು ಅಂದಾರು ? ಸ್ತ್ರೀಯರ ಸದ್ಯಸ್ಥಿತಿಯು ಕಷ್ಟಪ್ರಾಯವಾಗಿರುವದು ನಿಜವು. ಆದರೆ ಈ ಸ್ಥಿತಿಯನ್ನು ಸುಧಾರಿಸುವದು ಅಶಕ್ಯವೆಂದು ನನಗೆ ತೋರುವದಿಲ್ಲ.

**ಕಮಲೆ**—ನೀವು ಅನ್ನುವಂತೆ ಯಾವಾಗ್ಗೆ ಸುಧಾರಣೆಯಾಗುತ್ತದೋ ಆಗಲಿ. ಈಗಂತೂ ಸ್ತ್ರೀಯರು ಪರಾವಲಂಬಿಗಳಾಗಿ ದುಃಖದಲ್ಲಿ ತೊಳಲಾಡಬೇಕಾಗಿರುತ್ತದೆ. ಆ ಕಮಲನಯನೆಗೆ ತನ್ನ ಮುಂದೆ ದುಃಖದ ಪರ್ವತವು ನಿಂತಿರುವದು ಕಂಡಾಗ್ಯೂ ಅವಳಿಗೆ ಅದನ್ನು ತಪ್ಪಿಸುವದು ಸಾಧ್ಯವಾಯಿತೇನು ?

**ರಂಗರಾವ**—ಈ ನಿನ್ನ ಪ್ರಶ್ನೆಯು ಬಹು ಸೂಕ್ಷ್ಮವಾದದ್ದು. ಇದಕ್ಕೆ ನಾನು ಎಚ್ಚರಿಕೆಯಿಂದ ಉತ್ತರ ಕೊಡತಕ್ಕದ್ದು. ಆಕೆಗೆ ತನ್ನ ದುಃಖವನ್ನು ತಪ್ಪಿಸಿ ಕೊಳ್ಳಲಿಕ್ಕೆ ಒಂದು ಮಾರ್ಗವಿತ್ತು. ಆದರೆ ಆಕೆಯಲ್ಲಿ ಧೈರ್ಯವು ಕಡಿಮೆ ಇದ್ದು ದರಿಂದಾಗಲೀ ಅಥವಾ ಅವಳಿಗೆ ಮಾರ್ಗವನ್ನು ತೋರಿಸಿಕೊಡತಕ್ಕಂಥ ಹಿತಚಿಂ ತಕರು ಅವಳ ಹತ್ತರ ಯಾರೂ ಇಲ್ಲದ್ದರಿಂದಾಗಲೀ ಅವಳು ಆ ಮಾರ್ಗವನ್ನು ಅನುಸರಿಸಲಿಲ್ಲ.

**ಕಮಲೆ**—ಆ ಮಾರ್ಗವು ಯಾವದು?

**ರಂಗರಾವ**—ಹಾಗಾದರೆ ಕೇಳು. ಕನ್ಯೆಯು ಗುಣವತಿಯಿದ್ದು ಒಳ್ಳೇ ಕುಲೀನಳು ಇಲ್ಲದ್ದರಿಂದ, ಅಥವಾ ಕುಲೀನಳಿದ್ದು ಧನಹೀನಳು ಇದ್ದುದರಿಂದ, ಅಥವಾ ತಾಯಿತಂದೆಗಳು ಇಲ್ಲದ್ದರಿಂದ ಅಥವಾ ಉಪವರಳಾದಾಗ್ಯೂ ಆಕೆಯು ಯೋಗ್ಯತೆಗೆ ತಕ್ಕಂಥವರು ಬೇಡಲಿಕ್ಕೆ ಬಾರದೆ ಇದ್ದುದರಿಂದ, ಅಥವಾ ಆಪ್ತ ಜನರು ಲಗ್ನವನ್ನು ಮಾಡದೆ ಇದ್ದುದರಿಂದ ಅವಳ ಲಗ್ನವಾಗದೆ ಉಳಿದರೆ ಅಂಥ ವಳು ತಾನೇ ತನ್ನ ಸ್ವಯಂವರವನ್ನು ಮಾಡಿಕೊಳ್ಳತಕ್ಕದ್ದು. ಈಪ್ರಕಾರ ವಾತ್ಸ್ಯಾ ಯನಋಷಿಗಳ ಮತವಿರುತ್ತಿದ್ದು ಇದಕ್ಕೆ ಇನ್ನೂ ಅನೇಕ ಋಷಿಗಳು ಅನುಮೋ ದನವನ್ನುಕೊಟ್ಟಿರುತ್ತಾರೆ.

**ಕಮಲೆ**—ಹೀಗೆ ಶಾಸ್ತ್ರ ವಚನವಿರಬಹುದು. ಆದರೆ ನಮಗೆ ಅದರ ಉಪ ಯೋಗವೇನು? ಸಾವಿರಾರು ಹುಡಿಗೆಯರ ಮೇಲೆ ನಿಮ್ಮ ಕಥೆಯೊಳಗಿನ ಹುಡಿಗೆ ಯಂತೆ ಪ್ರಸಂಗವು ಬಂದಾಗ್ಯೂ ಒಬ್ಬ ಹುಡಿಗೆಯಾದರೂ ಈ ಪ್ರಕಾರ ಮಾಡಿರುವ ಳೇನು? ಅಥವಾ ಆ ಪ್ರಕಾರ ಮಾಡುವದಕ್ಕೆ ಪ್ರಯತ್ನ ಮಾಡಿದರೆ ಜನರು ಸುಮ್ಮನಿರುತ್ತಾರೇನು! ಇದಲ್ಲದೆ ಕಥೆಯೊಳಗಿನ ಹುಡಿಗೆಯ ತಂದೆಯು ಜೀವಂತ ಇದ್ದನು. ಮತ್ತು ಅವಳಿಗೆ ಬೇಕಾದಷ್ಟು ಮಂದಿ ಬೇಡಲಿಕ್ಕೆ ಬಂದಿ ದ್ದರು.

**ರಂಗರಾವ**—ಹೌದು. ಸರಿಯಾಗಿ ಮಾತಾಡಿದೆ. ಆದರೆ ಶಾಸ್ತ್ರಕಾರನ ವಚನವನ್ನು ಕೇವಲ ಶಬ್ದಶಃ ಅರ್ಥ ಮಾಡಬಾರದು. ಅದರ ತಾತ್ಪರ್ಯವನ್ನು ಮಾತ್ರ ಗ್ರಹಿಸಬೇಕು. ತಂದೆ-ತಾಯಿಗಳು ಜೀವಂತರಿದ್ದು ಅವರು ತಮ್ಮ ಕರ್ತ ವ್ಯವನ್ನು ನ್ಯಾಯತಃ ನೆರವೇರಿಸದಿದ್ದರೆ ಅವರು ಜೀವಂತರಿಲ್ಲವೆಂತಲೇ ತಿಳಿದುಕೊ

ಳ್ಳತಕ್ಕದ್ದು. ಉದಾಹರಣಾರ್ಥ, ತಂದೆತಾಯಿಗಳು ತಮ್ಮ ಮಗಳನ್ನು ದ್ರವ್ಯದ ಆಶೆಯಿಂದ ಮುದುಕ ಗಂಡನಿಗೆ ಲಗ್ನ ಮಾಡಿಕೊಟ್ಟರೆ ಅವರು ಜೀವಂತ ಇದ್ದರೇನು ? ಸತ್ತರೇನು ? ಎರಡರಿಂದಲೂ ಅಷ್ಟೇ ಫಲವದೆ. ಯಾವ ಶಾಸ್ತ್ರಕಾರರು ತಂದೆತಾಯಿಗಳಿಲ್ಲದಾಗ್ಗೆ ಹುಡಿಗೆಗೆ ಸ್ವಯಂವರದ ಅಧಿಕಾರವನ್ನು ಕೊಟ್ಟರು ತ್ತಾರೋ ಅವರೇ ತಂದೆತಾಯಿಗಳು ತಮ್ಮ ಅಧಿಕಾರವನ್ನು ಕ್ರೂರತನದಿಂದ ದುರಪಯೋಗ ಮಾಡಿ ತಮ್ಮ ಹುಡಿಗೆಯ ಅಕಲ್ಯಾಣ ಮಾಡತೊಡಗಿದಲ್ಲಿ ಆಕೆಗೆ ತನ್ನ ರಕ್ಷಣ ಮಾಡಿಕೊಳ್ಳಲಿಕ್ಕೆ ಸ್ವತಂತ್ರವನ್ನು ಕೊಡದೆ ಹೇಗೆ ಬಿಟ್ಟಾರು ? ಸಾರಾಂಶ:—ತಂದೆ ತಾಯಿಗಳ ಉದ್ದಿಶ್ಯಕ್ಕಿಂತ ಅವರ ಕೃತಿಯ ಕಡೆಗೆ ಹೆಚ್ಚು ಲಕ್ಷ್ಯಕೊಡಬೇಕು. ಅವರ ಕೃತಿಯಿಂದ ಹುಡಿಗೆಯ ಸೌಖ್ಯಕ್ಕೆ ಬಾಧೆಯು ಬರುತ್ತಿದ್ದರೆ ಅವಳು ತನ್ನ ಪತಿಯನ್ನು ತಾನೇ ಆರಿಸಿಕೊಳ್ಳತಕ್ಕದ್ದು.

**ಕಮಲೆ**—ನಿಮ್ಮ ಅಭಿಪ್ರಾಯವು ನಿಜವಿರಬಹುದು. ನನಗೆ ಇಷ್ಟೊಂದು ಗೂಢವಿಚಾರಮಾಡಲಿಕ್ಕೆ ಗೊತ್ತಿಲ್ಲ. ಆದರೂ ನನಗೆ ಇನ್ನೂ ಒಂದು ಸಂಶಯವು ಬರುತ್ತದೆ. ತಂದೆಯು ಆರಿಸಿದ ಪುರುಷನನ್ನು ವರಿಸದೆ ತಾನೇ ತನ್ನ ಮನಸ್ಸಿಗೆ ಬಂದಂಥ ಪುರುಷನನ್ನು ಲಗ್ನ ಮಾಡಿಕೊಳ್ಳುವದರಿಂದ ತಪ್ಪಾಗಲಿಕ್ಕಿಲ್ಲವೆಂದು ಹೇಗೆ ತಿಳಿಯಬೇಕು ? ಹುಡಿಗೆಯಕಿಂತಲು ತಂದೆಯ ಅನಭವವು ಹೆಚ್ಚಿನದು. ಆದುದರಿಂದ ಅವನು ಮಾಡುವ ಪರೀಕ್ಷೆಯು ಆಕೆಯಕಿಂತಲು ಅವಶ್ಯವಾಗಿ ಶ್ರೇಷ್ಠವಾಗಿರುವ ಸಂಭವವದೆ. ಛೇ ! ನನಗಂತೂ ಈ ಮಾರ್ಗವು ಬಹಳ ಕಠಿಣ ಕಾಣುತ್ತದೆ. ಮನೆಮಾರು ಬಿಟ್ಟು ಪರಪುರುಷನ ಬೆನ್ನುಹತ್ತಿಹೋಗಲಿಕ್ಕೆ ಒಬ್ಬಳಿಗೇ ಧೈರ್ಯವು ಹೇಗೆ ಬಂದೀತು ? ಇದಲ್ಲದೆ ಇದಕ್ಕೆ ಜನರಾದರೂ ಏನು ಅಂದಾರು ?

**ರಂಗರಾವ**—ನಿನಗೆ ಈ ತರದ ಸಂಶಯಗಳು ಬರುವದು ನಿನ್ನ ಪವಿತ್ರವಾದ ಮನಸ್ಸಿಗೆ ಭೂಷಣವೇ ಸರಿ. ಆದರೆ ನೀನೇ ವಿಚಾರಮಾಡಿ ನೋಡು. ತಂದೆಗೆ ಬಹಳ ಬುದ್ಧಿಯು ಮತ್ತು ಅನುಭವವು ಇದ್ದಾಗ್ಯೂ ಅವನು ಅವುಗಳ ಯೋಗ್ಯ ಉಪಯೋಗವನ್ನು ಮಾಡದಿದ್ದರೆ ಅವುಗಳನ್ನು ಏನು ಸುಡತಕ್ಕದ್ದು ? ಇದಲ್ಲದೆ ತಂದೆಗೆ ಬೇಕಾದಷ್ಟು ಬುದ್ಧಿ ಇದ್ದಾಗ್ಯೂ ಅವನಿಗೆ ಸ್ತ್ರೀಯರ—ಮುಖ್ಯವಾಗಿ ತರುಣ ಹುಡಿಗೆಯರ—ಸೌಖ್ಯವು ಯಾತರಿಂದಾಗುವದು ಎಂಬುದು ಏನು ಗೊತ್ತು ?

**ಕಮಲೆ**—ಹಾಗಾದರೆ ಹುಡಿಗೆಯು ತನ್ನ ಮನಸ್ಸಿಗೆ ಬಂದ ಪ್ರಕಾರ ನಡೆಯಬೇಕೋ ?

**ರಂಗರಾವ**—ಅದೂ ಅಲ್ಲ. ಅವಳು ಇಂಥ ಪ್ರಸಂಗದಲ್ಲಿ ಯಾವ ಯಾವ ಜನರ ಅನುಮತಿಯನ್ನು ತೆಗೆದುಕೊಳ್ಳಬೇಕೆಂದು ಶಾಸ್ತ್ರಕಾರರು ಹೇಳಿರುತ್ತಾರೆ. ಅದನ್ನು ಹೇಳುತ್ತೇನೆ, ಕೇಳು.

**ಕಮಲೆ**—ಅಬಬ! ಶಾಸ್ತ್ರಕಾರರು ಅದನ್ನೂ ಹೇಳಿರುತ್ತಾರೋ ? ಅವರಂಥ ಬುದ್ಧಿವಂತರು ನಿಜವಾಗಿ ಯಾರೂ ಇರಲಿಕ್ಕಿಲ್ಲ.

**ರಂಗರಾವ**—ಸಂಶಯವೇತಕ್ಕೆ ಬೇಕು? ಶಾಸ್ತ್ರಕಾರರು ಬೇರೆ ಬೇರೆ ಪ್ರಸಂಗಗಳನ್ನು ತಮ್ಮ ಲಕ್ಷ್ಯದಲ್ಲಿ ತಂದು ಯೋಗ್ಯವಾದ ನಿಯಮಗಳನ್ನು ಮಾಡಿರುತ್ತಾರೆ. ಅವರ ಅಭಿಪ್ರಾಯದ ಪ್ರಕಾರ ಯಾರ ಯಾರ ಅನುಮತಿಯನ್ನು ತೆಗೆದುಕೊಳ್ಳಬೇಕೆಂಬದನ್ನು ಹೇಳುತ್ತೇನೆ, ಕೇಳು:— ತನ್ನ ಓರಿಗೆಯವರು, ಪುರುಷನ ಗುಣಾವಗುಣಗಳನ್ನು ಬಲ್ಲಂಥ ದಾದಿಯ ಮಗಳು, ನಿಷ್ಕಪಟದಿಂದ ಮಾತಾಡುವಂಥ ಗೆಳತಿಯು, ಅಬಚಿಯು, ವಿಶ್ವಾಸಿಕ ಮುಪ್ಪಿನ ದಾಸಿಯು, ಪೂರ್ವಾಶ್ರಮದಲ್ಲಿ ಒಳ್ಳೇ ಸ್ನೇಹವಿದ್ದಂಥ ಯೋಗಿನಿಯು, ಇಲ್ಲವೆ ತನ್ನ ಅಕ್ಕನು, ಈ ಪ್ರಕಾರ ತನ್ನ ಹಿತಚಿಂತಕ ಜನರ ಆಲೋಚನೆಯನ್ನು ಕೇಳಿಕೊಂಡು ಅವರ ಅನುಮತಿಯ ಪ್ರಕಾರ ನಡೆದರೆ ಎಂದಿಗೂ ತಪ್ಪಾಗುವ ಭಯವಿಲ್ಲ. ಮತ್ತು ಜನರು ಸಹ ಏನೂ ಹೆಸರಿಡುವ ಸಂಭವವಿಲ್ಲ. ಇದಲ್ಲದೆ ಜನರು ತ್ರಿವಿಧರಿರುತ್ತಾರೆಂಬುವದು ನಿನಗೆ ಗೊತ್ತೇ ಇರುತ್ತದೆ. ಹೀಗೆ ಮಾಡಿದರೂ ಕಷ್ಟ, ಹಾಗೆ ಮಾಡಿದರೂ ಕಷ್ಟ, ಅಥವಾ ಸುಮ್ಮನೆ ಬಿಟ್ಟರೂ ಕಷ್ಟ. ಅವರಿಗೆ ಅಂಜಿ ನಡೆಯಲಿಕ್ಕೆ ಹತ್ತಿದರೆ ಒಂದೂ ಕೆಲಸವು ನಮ್ಮ ಕೈಯಿಂದಾಗಲಿಕ್ಕಿಲ್ಲ. ಈ ಎಲ್ಲ ಮಾತು ಇನ್ನು ಸಾಕು. ಆದರೆ ನಾನು ಹೇಳಿದ ಉಪದೇಶವನ್ನು ಚನ್ನಾಗಿ ಲಕ್ಷ್ಯದಲ್ಲಿಡು ಮತ್ತು ಪೂರ್ಣವಾಗಿ ವಿಚಾರಮಾಡು. ಈ ಜಗತ್ತಿನಲ್ಲಿ ಸೌಖ್ಯವನ್ನು ದೊರಕಿಸುವ ಪ್ರಸಂಗವು ಪ್ರತಿದಿನ ಬರುವದಿಲ್ಲ. ಕ್ಷಣಿಕ ಶ್ರಮಕ್ಕಾಗಿ ಅಂಜಿಕೊಂಡು ಒಮ್ಮೆ ಬಂದ ಪ್ರಸಂಗವನ್ನು ಕಳಕೊಂಡರೆ ಇಡೀ ಜನ್ಮದಲ್ಲಿ ಅಳುತ್ತ ಕುಳಿತುಕೊಳ್ಳಬೇಕಾದೀತು. ಒಳ್ಳೇದು. ಇನ್ನು ನಾನು

ಬರುತ್ತೇನೆ. ನಿತ್ಯನಿಯಮಕ್ಕನುಸರಿಸಿ ನಾನು ದೇವತಾದರ್ಶನಕ್ಕೆ ಹೋಗುವ ಹೊತ್ತಾಯಿತು.

**ಕಮಲೆ**— ಹೌದು. ನೀವು ಹೇಳಿದ ಕಥೆಯನ್ನೂ ತದನಂತರ ಹೇಳಿದ ಉಪದೇಶವನ್ನೂ ನಾನೆಂದಿಗೂ ಮರೆಯಲಾರೆನು. ಅವು ನನ್ನ ಮನಸ್ಸಿನಲ್ಲಿ ಪೂರ್ಣವಾಗಿ ನೆಟ್ಟು ಹೋಗಿರುತ್ತವೆ. ಶಿವ! ಶಿವ! ಏನು ಆ ಬಡಿವೆಯ ಅವಸ್ಥೆಯಾಯಿತು ?

(ಇಬ್ಬರೂ ಹೋಗುತ್ತಾರೆ.)

---

## ೨ನೇ ಪ್ರವೇಶ.

### ಲಕ್ಷ್ಮೀಪತಿರಾಯನ ಮನೆಯ ಪಡಸಾಲೆ.

(ಲಕ್ಷ್ಮೀಪತಿರಾಯನೂ, ಬಾಪೂರಾಯನೂ, ವೆಂಕಣ್ಣನಾಯಕನೂ, ತ್ರಾಟಿಕೆಯೂ, ಕಮಲೆಯೂ ಕುಳಿತಿರುತ್ತಾರೆ.)

**ಲಕ್ಷ್ಮೀಪತಿರಾವ**—ಬಾಪೂರಾವ, ನಿಮ್ಮ ಸಮಕ್ಷವೇ ಈ ದಿವಸ ಹತ್ತು ಘಟಿಕೆಯ ಲಗ್ನ ಮುಹೂರ್ತವನ್ನು ನೇಮಿಸಲಿಕ್ಕೆ ನಮ್ಮ ಅಳಿಯನ ಕಡೆಯಿಂದ ನಿರೂಪವು ಬಂದ ಪ್ರಕಾರ ನಾನು ಮನೆಯಲ್ಲಿ ಯಾವತ್ತು ಸಿದ್ಧತೆಯನ್ನು ಮಾಡಿರುತ್ತೇನೆ. ಉಪಾಧ್ಯಯನು ಕೈಯಲ್ಲಿ ಅಕ್ಷತೆಯನ್ನು ಹಿಡಿದುಕೊಂಡು ನಿಂತಿರುತ್ತಾನೆ. ಜೋಯಿಸನು ಘಟಿಕಾ ಪಾತ್ರೆಯ ಕಡೆಗೆ ನೋಡುತ್ತ ಕುಳಿತಿರುತ್ತಾನೆ. ಆದರೆ ಇನ್ನೂವರೆಗೆ ಅಳಿಯನೇ ಬರಲಿಲ್ಲ. ಇದಕ್ಕೆ ಮುಂದಿನ ಆಲೋಚನೆಯು ಏನು? ಅತ್ತನೋಡಿರಿ. ನಮ್ಮ ರಂಗೂ ಎಷ್ಟು ಸಿಟ್ಟಾಗಿ ಕುಳಿತಿರುತ್ತಾಳೆ! ನಮಗೆ ಜನರೊಳಗೆ ಅಲೌಕಿಕವಾಗುವ ಹೊತ್ತು ಬಂದಿತು. ಮೊದಲಿಗೆ ಅನುಮತಿಯನ್ನು ಕೊಡುವಾಗ್ಗೆ ನನಗೆ ಅನುಮಾನವು ಬಂದಿತ್ತು. ಆದರೆ ಆ ಸಮಯಕ್ಕೆ ನೀವೆಲ್ಲರೂ ನನಗೆ ಹುರಿದುಂಬಿಸಿದಿರಿ. ಇನ್ನು ಮುಂದೆ ನಾನೇನು ಮಾಡತಕ್ಕದ್ದು ?

**ತ್ರುಟಿಕಾ**—( ಮಂದಕ್ಕೆ ಗಿರಿದು ) ಈಗೇಕೆ ನೀವು ಅಳುತ್ತೀರಿ ? ಅಳುವ ಅಧಿಕಾರವು ನನ್ನೊಬ್ಬಳದೇ ಇರುತ್ತದೆ. ಅದೇ ಸಮಯಕ್ಕೆ ನಾನು ನನ್ನ ಅಸಮ್ಮತಿಯನ್ನು ತೋರಿಸಿದೆನು. ಆದರೆ ನನ್ನ ಮಾತು ಕೇಳುವವರಾರು ? ನೀವೇ ಇದೆಲ್ಲ ದುಃಖವನ್ನು ನನ್ನ ಪಾಲಿಗೆ ಉಂಟುಮಾಡಿದಿರಿ. ಈಗ ನೀವು ಬಾಹ್ಯಾತ್ಕಾರಕ್ಕೆ ಮಾತ್ರ ಅಳುವದರಿಂದ ನನ್ನ ದುಃಖವು ಹೋಗುತ್ತದೇನು ? ಅಲೌಕಿಕದ ಹೊತ್ತು ಬಂದಂತೆ ! ಅದು ಯಾರಿಗೆ ? ನನಗೇ ಹೌದಲ್ಲೋ ? ನನಗೇ ಸರಿ. ಛೀ ! ಥೂ ! ಎಲ್ಲಿಯ ತಕ್ಕನು ಬಂದಿದ್ದನೋ ಏನೋ ? ಅವನೇನು ಮಣ್ಣು ಹುಡಿ ಲಗ್ನ ಮಾಡಿಕೊಳ್ಳುತ್ತಾನೆ ? ಲಗ್ನ ಮಾಡಿಕೊಳ್ಳುವವರು ಎಂದಾದರೂ ರೀತಿಯನ್ನು ಬಿಟ್ಟು ಸತಿಯರನ್ನು ಹುಡುಕುತ್ತಾರೆಯೋ ? ಅವನು ಕೇಳುವ ರೀತಿಯು ಎಷ್ಟು ವಿಚಿತ್ರವಾದದ್ದು ! ಅವನ ಭಾಷಣವು ಎಷ್ಟು ಮೊಂಡತನದ್ದು ! ನಾನು ಒಲ್ಲೆನೆಂದಾಗ್ಯೂ ನೀನು ಒಡಂಬಟ್ಟೆಯೆಂದು ಅವನು ಸುಳ್ಳೇ ನನ್ನ ಧನ್ಯವಾದವನ್ನು ಮಾಡಿದನು. ಅವನ ಜೊಳ್ಳು ಮಾತು ಕೇಳಿ ನೀವು ಆನಂದದಿಂದ ಗೋಣು ಅಗಳಾಡಿಸುತ್ತಿದ್ದಿರಿ. ನಿಮ್ಮನ್ನು ವ್ಯರ್ಥವಾಗಿ ಹುರಿದುಂಬಿಸಲಿಕ್ಕೆ ಈ ದರಿದ್ರರ ಗಂಟು ಏನು ಹೋದೀತು ? ಅವರೆಲ್ಲರು ನಿಮ್ಮ ಪ್ರೀತಿಯ ಮಗಳಾದ ಕಮಲೆಯ ಮೇಲೆ ಹೊಂಚು ಹಾಕಿಕೊಂಡು ಕುಳಿತಿದ್ದಾರೆ. ನಾನೊಬ್ಬಳು ಅವರ ಕಾಲೊಳಗಿನ ಮುಳ್ಳಾಗಿರುತ್ತೇನೆ. ನನ್ನನ್ನು ಹೇಗಾದರೂ ಮಾಡಿ ಹೊರಗೆ ತೆಗೆಯಬೇಕೆಂಬುದೇ ಅವರ ವಿಚಾರವಿರುತ್ತದೆ. ಆದರೆ ನೀವು ಸ್ವತಃ ಈ ಬಗ್ಗೆ ಸ್ವಲ್ಪಾದರೂ ವಿಚಾರ ಮಾಡತಕ್ಕದ್ದಿತ್ತೋ ಇಲ್ಲೋ ! ಕಣ್ಣು ಮುಚ್ಚಿಕೊಂಡು ಲಗ್ನ ಮಾಡಿಕೊಡಲಿಕ್ಕೆ ನಾನೇನು ನಿಮಗೆ ಜಡವಾಗಿದ್ದೆನು ? ಅದೇ ಕಮಲೆಯ ಲಗ್ನದ ಮಾತು ಹೊರಟರೆ ನೀವು ಎಷ್ಟು ತಲೆ ಒಡೆದುಕೊಳ್ಳುತ್ತೀರಿ, ನೋಡಿರಿ! ನೀವು ನಿಮ್ಮ ಮರಣ ಪರ್ಯಂತರ ದಾರಿಯನ್ನು ನೋಡಿದಾಗ್ಯೂ ಅವನು ಇಲ್ಲಿಗೆ ಬರುವದಿಲ್ಲ. ಅವನು ನಿರ್ಲಜ್ಜನು, ಮಂಗನು, ಕಳ್ಳನು! ಇಂಥ ಹುಡಿಗೆಗೆ ತಾನು ಮೋಸ ಮಾಡಿದೆನೆಂದು ಜನರೊಳಗೆ ಪೌರುಷ ಮಾಡಿಕೊಳ್ಳುವದಕ್ಕಾಗಿ ನನ್ನನ್ನು ಲಗ್ನ ಮಾಡಿಕೊಳ್ಳಲಿಕ್ಕೆ ವಿಚಾರಿಸಿದನು. ನಾಳೆ ನಾನು ಊರೊಳಗೆ ಅಡ್ಡಾಡುವದೇ ಕಠಿಣವಾಯಿತು. ಊರೊಳಗಿನ ಉಡಾಳ ಮತ್ತು ಅಧಿಕಪ್ರಸಂಗೀ ಹುಡುಗರು ನನ್ನ ಕಡೆಗೆ ಬೊಟ್ಟು ತೋರಿಸಿ “ಆ ಹುಚ್ಚ ಪ್ರತಾಪರಾಯನ ಪಟ್ಟರಾಣಿಯು

ಬಂದಳು ನೋಡಿರಿ ! ಪತಿಯು ಯಾವಾಗ್ಗೆ ಬರುತ್ತಾನೆಂದು ಇಸಲ್ಲಿ ದಾರೀ ನೋಡುತ್ತ ಕುಳಿತಿರುವಳು " ಎಂದು ಕೂಗುವರು. ದೇವರೇ, ಇದರಕಿಂತಲೂ ನಾನು ಸಾಯುವದೇ ಲೇಸು ! ( ಅಳಲಾರಂಭಿಸುತ್ತಾಳೆ. )

**ಲಕ್ಷ್ಮೀಪತಿರಾವ**—ಮಗಳೇ, ಈ ಪ್ರಕಾರ ವ್ಯರ್ಥವಾಗಿ ಶೋಕಿಸ ಬೇಡ. ಪ್ರತಾಪರಾಯನು ಅಂಥ ಠಕ್ಕ ಮನುಷ್ಯನು ಕಾಣಿಸುವದಿಲ್ಲ. ಏನಾದರೂ ಕಾರಣದ ಸಲುವಾಗಿ ಅವನು ಬರಲಿಕ್ಕೆ ತಡವಾಗಿರಬಹುದು.

**ತ್ರಾಟಿಕಾ**—ಸಾಕು. ಸಾಕು. ಈ ಪ್ರಕಾರ ವೋರೆಯ ಮೇಲೆ ಕೈಯಾಡಿಸಿ ಮಾತಾಡಬೇಡಿರಿ. ನೀವು ನನ್ನ ಕುತ್ತಿಗೆಯನ್ನು ಪೂರ್ಣವಾಗಿ ಕೊಯ್ದು ಬಿಟ್ಟಿರಿ. **(ಅಳುತ್ತ ಹೊರಗೆ ಹೋಗುತ್ತಾಳೆ; ಕಮಲೆಯು ಆಕೆಯ ಹಿಂದಿಂದೆ ಹೋಗುತ್ತಾಳೆ.)**

**ಲಕ್ಷ್ಮೀಪತಿರಾವ** —( ಉದಾಸೀನತೆಯಿಂದ ) ಹೌದವ್ವಾ ಹೌದು. ನೀನು ಈಗ ಏನು ಮಾತಾಡಿದಾಗ್ಯೂ ನಾನು ನಿನಗೆ ದೋಷಕೊಡುವಂತಿಲ್ಲ. ಇಂಥ ಅಪಮಾನವನ್ನು ಸಹನಶೀಲರಾದ ಸಾಧುಗಳು ಸಹ ಸಹಿಸಿಕೊಳ್ಳುವದು ಅಸಾಧ್ಯ.

( 'ತಮ್ಮಾಸು' ಬರುತ್ತಾನೆ. )

**ತಮ್ಮಾ**—ಅಪ್ಪನವರೇ, ನಿಮಗೆ ಒಂದು ಬಹಳ ಆನಂದದ ಸುದ್ದಿಯನ್ನು ತಂದಿರುತ್ತೇನೆ.

**ಲಕ್ಷ್ಮೀಪತಿರಾವ**—ಅದೇನೋ ಆನಂದದ ಸುದ್ದಿ ?

**ತಮ್ಮಾ**—ನಿಮ್ಮ ಅಳಿಯನು ಬರುತ್ತಾನೆ.

**ಲಕ್ಷ್ಮೀಪತಿರಾವ**—ಅವನು ಬಂದನೇನು ?

**ತಮ್ಮಾ**—ಅವನು ಬಂದನೆಂದು ನಾನೆಲ್ಲಿ ಅಂದೆನು ?

**ಲಕ್ಷ್ಮೀಪತಿರಾವ**—ಹಾಗಾದರೆ ಏನಂದೆ ?

**ತಮ್ಮಾ**—ಅವನು ಬರುತ್ತಾನೆಂದು ಅಂದೆನು.

**ಲಕ್ಷ್ಮೀಪತಿರಾವ**—ಯಾವಾಗ್ಗೆ ಬರುತ್ತಾನೆ ?

**ತಮ್ಮಾ**—ಅವನು ನನ್ನಂತೆ ನಿಮ್ಮ ಎದುರಿಗೆ ಬಂದು ನಿಂತುಕೊಂಡಾಗ್ಗೆ.

**ಲಕ್ಷ್ಮೀಪತಿರಾವ**—ಎಲಾ ಮೂರ್ಖಾ, ಅಧಿಕಪ್ರಸಂಗೀ ! ನಿನ್ನ ಅಧಿಕ ಪ್ರಸಂಗಿತನ ಬಿಡು. ನಿನ್ನ ಆನಂದದ ಸುದ್ದಿಯೇನೆಂಬದನ್ನು ಮುಂಚೆ ಹೇಳು, ಕೇಳೋಣ.

**ತಮ್ಮಾ**— ಧನಿಯರೇ ! ಅದು ಬರೀ ಆನಂದದ ಸುದ್ದಿಯಲ್ಲ, ಬಹಳ ಚಮತ್ಕಾರದ ಸುದ್ದಿಯೂ ಇರುತ್ತದೆ.

**ಲಕ್ಷ್ಮೀಪತಿರಾವ**—ನನಗೆ ನಿನ್ನ ಮಾತೇ ತಿಳಿಯಲೊಲ್ಲದು. ಈ ರೀತಿ ನೀನು ಮಾತಾಡುವ ಕಾರಣವೇನು ?

**ತಮ್ಮಾ**—ಅಪ್ಪನವರೇ, ನಿಮ್ಮ ಅಳಿಯನು ಹೇಗೆ ಬರಲಿಕ್ಕೆ ಹತ್ತಿರುತ್ತಾನೆಂಬುದು ನೀವು ಕೇಳಿದಿರೇನು? ಅವನು ತನ್ನ ತಲೆಯ ಮೇಲೆ ಗಳಿಗಿಯಂಥ ಪಾವುಡ ಸುತ್ತಿರುತ್ತಾನೆ. ಮೈಯಲ್ಲಿ ಐದು ಬಣ್ಣದ ಬಗಲಬಂಡಿ ತೊಟ್ಟಿರುತ್ತಾನೆ. ಅದರ ಮೇಲೆ ಕನದೀ ತೇಪಿ ಹಚ್ಚಿದ ಉದ್ದಂಗಿ ತೊಟ್ಟಿರುತ್ತಾನೆ. ಹಚ್ಚಡದ ದೋತರ ಉಟ್ಟಿರುತ್ತಾನೆ. ಕಾಲೊಳಗೆ ಎರಡು ಹರಕು ಮೊಚ್ಚಿ ಇಪ್ಪತ್ತು ಕಡೆ ತೇಪಿ ಹಚ್ಚಿದ್ದವು ಮೆಟ್ಟಿರುತ್ತಾನೆ. ಟೊಂಕಕ್ಕೆ ಒಂದು ಲತ್ತೀಗುಣಿಯಂಥ ಬರ್ಚಿ ಸಿಗಿಸಿಕೊಂಡಿರುತ್ತಾನೆ. ಮತ್ತು ಒಂದು ನೀರು ಸೇದುವ ಹಗ್ಗ ನಡಕ್ಕೆ ಕಟ್ಟಿಕೊಂಡಿರುತ್ತಾನೆ. ಇಷ್ಟೆಲ್ಲ ಶೃಂಗಾರವಾಗಿ ಒಂದು ಡುಬ್ಬ ಕೆತ್ತಿ ಹುಣ್ಣು ಆಗಿ ನೆತ್ತರು ಸೋರುವ ತಟ್ಟೂದ ಮೇಲೆ ಜಾತ್ರೆಗೆ ಹೊರಟ ಜಾತಗಾರನಂತೆ ಕೂತುಕೊಂಡು ಬರಲಿಕ್ಕೆ ಹತ್ತಿರುತ್ತಾನೆ. ಆ ತಟ್ಟೂದ ಬೆನ್ನುಮೋಣಿಗಳು ನೆತ್ತರ ಆಗಿದ್ದು ಅದರ ಮೈತುಂಬೆಲ್ಲ ನೊಣ ಗುಮ್ಮೆಂದು ಮುಕ್ಕರಿರುತ್ತವೆ. ಆ ತಟ್ಟೂದ ಲಗಾಮು ನೋಡಿದರೆ ಅದು ಹತ್ತಿಪ್ಪತ್ತು ಗಂಟು ಕಟ್ಟಿರುವ ಒಂದು ಮಿಣಿ ಹಗ್ಗ ಆಗಿರುತ್ತದೆ. ಆ ತಟ್ಟೂದ ಸಬರವನ್ನು ಸಹಿತ ಒಂದೆರಡು ಕವದೀ ಕೂಡಿಸಿಕೊಂಡು ಮಾಡಿಕೊಂಡಿರುತ್ತಾನೆ. ಹಾಗೂ ಇಂಥ ತಟ್ಟೂದ ಮೇಲೆ ಕಾಮಣ್ಣನ ಹಾಗೆ ಒಳ್ಳೇ ಸೆಟಗೊಂಡು ಕೂತು ಕೈಯಲ್ಲಿ ಒಂದು ಹರಕು ದೊಡ್ಡ ಚತ್ತರಿಗಿ ಹಿಡಕೊಂಡು ಒಳ್ಳೇ ಭರದಿಂದ ಬರಲಿಕ್ಕೆ ಹತ್ತಿರುತ್ತಾನೆ. ಇದಕ್ಕೇ ನಾನು ಬರೀ ಆನಂದದ ಸುದ್ದಿಯಲ್ಲ, ಚಮತ್ಕಾರದ ಸುದ್ದಿಯೆಂದು ಅಂದೆ.

**ಲಕ್ಷ್ಮೀಪತಿರಾವ** - ( ಸ್ವಲ್ಪ ನಕ್ಕು ) ಶಹಬಾಸ ತಮ್ಮಾ ! ನೀನು ಬಹಳ ಅಲಂಕಾರಿಕ ಮಾತುಗಳನ್ನು ಆಡಲಿಕ್ಕೆ ಹತ್ತಿದೆ ! ಇರಲಿ ಬಿಡು. ಅವನ ಸಂಗಡ ಮತ್ತಾರು ಇರುತ್ತಾರೆ ?

**ತಮ್ಮಾ**—ವೇತಾಳನ ಸಂಗಡ ಮತ್ತಾರು ಇದ್ದಾರು ? ಅವನ ಆಳು ಮನುಷ್ಯನಾದ ಆ ದೆವ್ವ ನೀಲಣ್ಣನು ಇರುತ್ತಾನೆ. ಆ ನೀಲಣ್ಣನ ಮೈಯೊಳಗಿನ ಅರಿವೆಗಳಂತೂ ಅವನ ಯಜಮಾನನಕಿಂತ ಚಂದವಿರುತ್ತವೆ !

**ವೆಂಕಣ್ಣನಾಯಕ**—ಇದೇನು ಹುಚ್ಚುತನವಿದ್ದೀತು ?

**ಲಕ್ಷ್ಮೀಪತಿರಾವ** - ಅವನು ಹೇಗೇ ಬರಲಿ ! ಅವನ ಬರುವದನ್ನು ಕೇಳಿ ನನ್ನ ಜೀವದಲ್ಲಿ ಜೀವ ಬಂತು. ಯಾವಾಗ್ಗೆ ಅವನು ಇಲ್ಲಿ ಬರುವನು ?

**ತಮ್ಮಾ**—ಅವನೇನೂ ಬರುವದಿಲ್ಲ !

**ಲಕ್ಷ್ಮೀಪತಿರಾವ**—ಅವನು ಬರುತ್ತಾನೆಂದು ಈಗೀಗ ನೀನು ಹೇಳಿದಿಯಲ್ಲೋ ?

**ತಮ್ಮಾ**—ಹಾಗಲ್ಲ ಒಡೆಯರೇ. ಅವನ ತಟ್ಟೂ ಅವನನ್ನು ಬೆನ್ನಮೇಲೆ ಕೂಡ್ರಿಸಿಕೊಂಡು ಬರುತ್ತದೆ !

**ಲಕ್ಷ್ಮೀಪತಿರಾವ**—(ನಗುತ್ತ) ಹೀಗೇನು? "**ಅಳಿಯ ಅಲ್ಲ, ಮಗಳ ಗಂಡ.**"

**ತಮ್ಮಾ**—ಎರಡೂ ಒಂದೇ ಏನರಿ ? ಅವನ ತೇಜಿಯ ಮನಸ್ಸಿನಲ್ಲಿಲ್ಲದಿದ್ದರೆ ಅವನು ಇಲ್ಲಿ ಬರುವದು ಹೇಗೆ ? ಅವನು ಅದಕ್ಕೆ ಹೊಡ ಹೊಡದು ಕೊಂಡ ಮೇಲೆ ಅದು ನಾಲ್ಕು ಹೆಜ್ಜೆ ಮುಂದೆ ಇಡುತ್ತದೆ. ಮತ್ತು ಒಮ್ಮೊಮ್ಮೆ ಎಡ್ಡು ತೆಗೆದು ಸುಮ್ಮನೆ ನಿಂತುಕೊಂಡು ಬಿಡುತ್ತದೆ. ಅದರ ಕೈಯಲ್ಲಿ ಅವನಿರುತ್ತಾನೆ. ಅವನ ಕೈಯಲ್ಲಿ ಅದು ಇಲ್ಲ. ಅದಕ್ಕೇ ನಾನು ಅವನ ತಟ್ಟೂ ಬರುತ್ತದೆ, ಅವನು ಬರುವದಿಲ್ಲ ಎಂತ ಅಂದೆ. ಆ ತಟ್ಟೂ ಎಷ್ಟಾರೆ ಚಲೋ ಇರುತ್ತದೆಂತ ಹೇಳಲಿ ? ( **ಹಾಡುತ್ತಾನೆ.** )

( ಶ್ರೀ. ನೇಸರಗಿ ಕೃತ )

॥ ಹೊಡ ಹೊಡದ್ಹಾಂಗ ಕುದರಿ । ಹಿಡಿತಯ್ತಿ ಹಿಂದಕ ದಾರಿ ॥
॥ ಕಡಲಿ ತಿಂತಯ್ತಿ ಮಿತಿಮೀರಿ । ಇಡೋದಿಲ್ಲ ಮುಂದಕ ಕಾಲ ಊರಿ ॥

**ನೀಲಾ**—( ಒಳಗಿಂದ) ಎಲೇ ಅಪ್ಪಗೋಳಿರಾ ! ದಾರೀ ಬಿಟ್ಟು ನಿಂತುಕೊಳ್ಳಿರಿ. ನಮ್ಮ ಯಜಮಾನನ ಅಳಿಯನು ಬರಲಿಕ್ಕೆ ಹತ್ತಿರುತ್ತಾನೆ. ಅವನ ಕುದುರೆ ಬಹಳ ಎಟ್ಟೆ ಇರುತ್ತದೆ. ಒದ್ದೀತು. ಬೇಗ ಸರಕೊಳ್ಳಿರಿ !

**ತಮ್ಮಾ**— ಇದು ನೋಡಿರೆಪ್ಪಾ ! ಸ್ವಾರಿಗಳು ಬಂದವು.

( **ಪ್ರಕಾಶರಾಯನೂ ನೀಲನೂ ಬರುತ್ತಾರೆ.** )

**ಪ್ರತಾಪರಾವ**—ಮಾವನವರೇ, ನಿಮಗೆ ನನ್ನ ಸಾಷ್ಟಾಂಗ ನಮಸ್ಕಾರಗಳು. ಉಳಿದ ಗೃಹಸ್ಥರೇ, ನಿಮಗೂ ನನ್ನ ನಮಸ್ಕಾರಗಳು. ಮಾವನವರೇ, ಲಗ್ನದ ಸಿದ್ಧತೆಯು ಆಗಿರುವದೋ ? ನನ್ನ ಪ್ರಿಯಳಾದ ರಂಗೆಯು ಎಲ್ಲಿರುವಳು ?

**ಲಕ್ಷ್ಮೀಪತಿರಾವ**—ಮೊದಲಿಗೆ ನಿಮ್ಮ ಮೈಮೇಲಿನ ಅರಿವೆಗಳನ್ನು ತೆಗೆದು ಸ್ನಾನಮಾಡಿರಿ. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿರಿ.

**ಪ್ರತಾಪರಾವ**—ಛೇ, ಈಗೆಲ್ಲಿಯ ವಿಶ್ರಾಂತಿ ? ವಿಶ್ರಾಂತಿಯ ಮಾತು ಕೇಳಲೇಬೇಡಿರಿ. ನಾನು ದಾರಿಯಲ್ಲಿ ನದಿಯೊಳಗೆ ಸ್ನಾನ ಮಾಡಿಕೊಂಡು ಬಂದಿರುತ್ತೇನೆ. ಲಗ್ನಮುಗಿಸಿಕೊಂಡು ರಂಗೆಗೆ ಯಾವಾಗ್ಗೆ ನನ್ನ ಪ್ರಾಣಮಿತ್ರೆಯೆಂದು ಕರೆದೇನೆಂದು ನನ್ನ ಮನಸ್ಸು ಹಾತೊರೆಯುತ್ತದೆ. ಆದುದರಿಂದ ಈಗಿಂದೀಗಲೆ ಘೋರಜಗಲಿಗೆ ಹೋಗೋಣ, ನಡೆಯರಿ. ಇಲ್ಲದಿದ್ದರೆ ಮುಹೂರ್ತವು ತಪ್ಪೀತು.

**ಬಾಪೂರಾವ**—ಅಲ್ಲಿ ಈಗ ಹೋಗೇ ಹೋಗುತ್ತೇವೆ. ಆದರೆ ರಾಯರೇ, ಈ ಅರಿವೆಗಳ ತರವು ಎಲ್ಲಿಯದು ? ಇವುಗಳನ್ನು ಸ್ವಲ್ಪ ತೆಗೆದು ಬಿಡಿರಿ.

**ಪ್ರತಾಪರಾವ**—ಅರಿವೆಗಳಲ್ಲಿ ಏನಿರುತ್ತದೆ ? ವೇಳೆಯನ್ನು ವ್ಯರ್ಥವಾಗಿ ಕಳೆಯುವದು ನನ್ನ ಮನಸ್ಸಿಗೆ ಬರುವದಿಲ್ಲ. ನನ್ನ ಪ್ರಿಯಳು ಎಲ್ಲಿರುವಳು ? ಮೊದಲಿಗೆ ನನ್ನನ್ನು ಅವಳ ಕಡೆಗೆ ತೆಗೆದುಕೊಂಡುಹೋಗಿರಿ. ಆ ಮೇಲೆ ಸಾವಕಾಶದಿಂದ ಮಾತಾಡೋಣ. ಇದೇನು ? ನೀವೆಲ್ಲರು ನನ್ನ ಕಡೆಗೆ ಬಿಟ್ಟೂಬಿಡದೆ ಇಷ್ಟೇಕೆ ನೋಡುತ್ತೀರಿ ? ನಿಮಗೇನು ಹುಚ್ಚು ಹಿಡಿದಿಲ್ಲವಷ್ಟೇ ?

**ವೆಂಕಣ್ಣನಾಯಕ**—ರಾಯರೇ, ನಿಮ್ಮ ಲಗ್ನದ ಅರಿವೆಗಳನ್ನು ನೋಡಿ ನಾವು ದಿಗಿಲುಬಡಿದು ಹೋಗಿರುತ್ತೇವೆ. ಎರಡನೇದ್ದೇನೂ ಇಲ್ಲ.

**ಲಕ್ಷ್ಮೀಪತಿರಾವ**—ನಿಮ್ಮ ಯೋಗ್ಯತೆಗೆ–ನಿದಾನ ನನ್ನ ಯೋಗ್ಯತೆಗೆ–ಈ ಅರಿವೆಗಳು ಶೋಭಿಸುವದಿಲ್ಲ. ಇಂಥ ಆನಂದದ ಸಮಾರಂಭದಲ್ಲಿ ಈ ಅಮಂಗಲ ವೇಷವು ಬೇಡ.

**ಬಾಪೂರಾವ**—ರಾಯರೇ, ನೀವು ಬೇಗನೇ ಬರಲಿಲ್ಲವೆಂದು ನಿಮ್ಮ ಭಾವೀ ಕುಟುಂಬಕ್ಕೆ ಬಹಳ ಖೇದವಾಗಿರುತ್ತದೆ. ಆದರೆ ನೀವು ಈ ಅರಿವೆ

ಗಳನ್ನು ಹಾಕಿಕೊಂಡು ಅವಳ ಮುಂದೆ ಹೋದರೆ ಅವಳಿಗೆ ಮತ್ತಿಷ್ಟು ಖೇದವಾದೀತು. ಕದಾಚಿತ್ ಆಕೆಗೆ ಅಂಜಿಕೆಯು ಸಹ ಬಂದೀತು.

**ಪ್ರತಾಪರಾವ**—ಈ ಕೆಲಸದಲ್ಲಿ ನೀವೇಕೆ ಹೆಚ್ಚಿನ ಉಸಾಬರಿ ಮಾಡುತ್ತೀರಿ? ಆಕೆಯ ದೂರು ನನ್ನ ಕಡೆಗೆ ಬಂದರೆ ಅದರ ವಿಚಾರವನ್ನು ನಾನು ಮಾಡುವೆನು. ನಾನು ಬೇಕಾದ ರೀತಿಯಿಂದ ಆಕೆಯ ಸಮಾಧಾನ ಮಾಡಲಿಕ್ಕೆ ಸಮರ್ಥನಿರುತ್ತೇನೆ. ನಿಮ್ಮ ಸಾವಿರ ರೂಪಾಯಿಗಳು ಕೈಬಿಡುತ್ತವೆಂದು ನೀವು ಮನಸ್ಸಿಗೆ ಖೇದಮಾಡಿಕೊಂಡು ಈ ಪ್ರಕಾರ ಕುತ್ಸಿತತನದಿಂದ ಕೊಳಕು ಮಾತಾಡಬೇಡಿರಿ. ನಡೆಯಿರಿ. ಮುಂಚೆ ಆ ನನ್ನ ಮನಮೋಹಿನಿಯ ಕಡೆಗೆ ಹೋಗೋಣ. ನನಗಂತೂ ಇನ್ನು ಇಲ್ಲಿ ನಿಂತುಕೊಳ್ಳಲಿಕ್ಕಾಗುವದಿಲ್ಲ.

**ವೆಂಕಣ್ಣನಾಯಕ**—ಹೀಗೇಕೆ ಮಾಡುತ್ತೀರಿ? ನೀವು ಮೊದಲಿಗೆ ಈ ಬಹುಮೂಲ್ಯ ವಸ್ತ್ರಗಳನ್ನು ನಿಮ್ಮ ಮೈಯೊಳಗಿಂದ ತೆಗೆಯಿರಿ. ನಿಮ್ಮ ಮನಸ್ಸಿಗೆ ನಿಮ್ಮ ಮಾವನವರ ಮನೆಯ ವಸ್ತ್ರಗಳನ್ನು ಧರಿಸುವದು ಬಾರದಿದ್ದರೆ ನಾನು ನನ್ನ ಮನೆಯೊಳಗಿನ ವಸ್ತ್ರಗಳನ್ನು ತಂದುಕೊಡುತ್ತೇನೆ.

**ಪ್ರತಾಪರಾವ**—ಅದು ಎಂದಿಗೂ ಆಗದು. ನಾನು ಇದೇ ಅರಿವೆಗಳಿಂದಲೇ ಲಗ್ನ ಮಾಡಿಕೊಳ್ಳತಕ್ಕವನು. ಇದು ನಿಮಗೆ ಒಡಂಬಡಿಕೆಯಾಗಲಿ, ಆಗದಿರಲಿ. ರಂಗೆಯ ಲಗ್ನವು ನನ್ನ ಕೂಡೋ ನನ್ನ ಅರಿವೆಗಳ ಕೂಡೋ? ನಿಮಗೆ ನನ್ನ ಅರಿವೆಗಳನ್ನು ಬದಲಿಸಲಿಕ್ಕೆ ಬರಬಹುದು. ಆದರೆ ನನ್ನ ಸ್ವಭಾವವನ್ನು ಬದಲಿಸಲಿಕ್ಕೆ ಬರುತ್ತದೇನು? ಹಾಗೆ ನಿಮಗೆ ಬರುತ್ತಿದ್ದರೆ ನಾನು ಅವಳ ಹಿತದ ಸಲುವಾಗಿ ಮತ್ತು ನನ್ನ ಹಿತದ ಸಲುವಾಗಿ, ಇದಲ್ಲದೆ ನಮ್ಮಿಬ್ಬರ ಸುಖದ ಸಲುವಾಗಿ, ಅತ್ಯಂತ ಸಂತೋಷದಿಂದ ನಿಮ್ಮ ಮಾತಿಗೆ ಒಡಂಬಡುತ್ತಿದ್ದೆನು. ಅದು ನಿಮಗೆ ಅಸಾಧ್ಯವೇ! ಅಂದಬಳಿಕ ನಿಷ್ಕಾರಣವಾಗಿ ಅರಿವೆಗಳನ್ನು ಬದಲಿಸುವದರಲ್ಲಿ ಉಪಯೋಗವೇನು? ಅದಂತೂ ಒತ್ತಟ್ಟಿಗೆ ಇರಲಿ. ನಾನು ಎಷ್ಟು ಮೂರ್ಖನಿದ್ದೇನೆ? ನನ್ನ ಪ್ರಿಯಳು ನನ್ನ ದರ್ಶನಕ್ಕಾಗಿ ಉತ್ಕಂಠಿತಳಾಗಿರಬಹುದು. ಅವಳನ್ನು ಅಲ್ಲಿಯೇ ವ್ಯಸನದಲ್ಲಿ ಕೆಡವಿ ನಾನು ಇಲ್ಲಿ ಒಣ ಹರಟೆಯನ್ನು ಬಡಿಯುತ್ತ ನಿಂತಿರುತ್ತೇನೆ. ಮಾವನವರೇ, ಒಳಗೆ ಬರುತ್ತೀರೋ? ನಾನು ತಿರುಗಿ ಹೋಗಲೋ?

**ಲಕ್ಷ್ಮೀಪತಿರಾವ**— ನಡಿಯಿರೆಪ್ಪಾ, ಒಳಗೆ ಹೋಗೋಣ.

(ಲಕ್ಷ್ಮೀಪತಿರಾಯನೂ, ಪ್ರತಾಪರಾಯನೂ, ಬಾಪೂರಾಯನೂ, ನೀಲ್ಯಾನೂ ಒಳಗೆ ಹೋಗುತ್ತಾರೆ.)

**ವೆಂಕಣ್ಣನಾಯಕ**-ಇವನ ಈ ಹುಚ್ಚು ವೇಷದಲ್ಲಿ ಏನಾದರೂ ಅರ್ಥ ವಿದ್ದೀತು. ಇಲ್ಲದಿದ್ದರೆ ಇಂಥ ವಿಲಾಸಿಯ ಮನುಷ್ಯನು ಇಂಥ ಕುರೂಪವಾದ ವಸ್ತ್ರಗಳನ್ನು ಏಕೆ ಧರಿಸಿಯಾನು ? ( ರಂಗರಾಯನಿಗೆ ) ಹಿಂದಕ್ಕೆ ನಾನು ಹೇಳಿದ್ದು ನಿಮ್ಮ ಲಕ್ಷ್ಯದಲ್ಲಿರಬಹುದು. ನೀವು ಆಕೆಯ ಮನಸ್ಸನ್ನು ನಿಮ್ಮ ಕಡೆಗೆ ಒಲಿಸಿಕೊಂಡಾಗ್ಯೂ ಆಕೆಯ ತಂದೆಯ ಸಮ್ಮತಿಯು ಅವಶ್ಯವಾಗಿ ಬೇಕು. ಅದು ದೊರಕಬೇಕಾದರೆ ನಾನು ಯಾವನಾದರೊಬ್ಬ ಮುದುಕನನ್ನು ತಂದೆಯೆಂದು ತೋರಿಸಿ ಅವನ ಕಡೆಯಿಂದ ಲಕ್ಷ್ಮೀಪತಿರಾಯನ ಮಾತಿಗೆ ಹೂ ಅನ್ನಿಸತಕ್ಕದ್ದು. ನೀವು ಆಕೆಯನ್ನು ಓಡಿಸಿಕೊಂಡು ಹೋಗಿ ಅತ್ತ ಲಗ್ನ ತೀರಿಸಿಕೊಳ್ಳಿರಿ. ನಾನು ಇತ್ತ ಲಕ್ಷ್ಮೀಪತಿರಾಯನ ಸಮ್ಮತಿಯನ್ನು ದೊರಕಿಸಿ ಇಡುತ್ತೇನೆ.

**ರಂಗರಾವ**—ಕಮಲೆಯ ಮನಸ್ಸನ್ನು ನಾನು ಬಹುತರವಾಗಿ ನನ್ನ ಕಡೆಗೆ ಮಾಡಿಕೊಂಡಿರುತ್ತೇನೆ. ಅವಳ ಈಗಿನ ಸ್ಥಿತಿಯಲ್ಲಿ ಅವಳಿಗೆ ತನ್ನ ತಂದೆಯ ಮನಸ್ಸಿನ ವಿರುದ್ಧವಾಗಿ ನಡೆಯಲಿಕ್ಕೆ ಶಾಸ್ತ್ರಸಮ್ಮತಿಯುಂಟೆಂದು ನಾನು ಅವಳ ಮನಸ್ಸಿನಮೇಲೆ ಪೂರ್ಣವಾಗಿ ಬಿಂಬಿಸಿಕೊಟ್ಟಿರುತ್ತೇನೆ. ಆದರೂ ಅವಳು ನನ್ನ ಕೂಡ ಓಡಿ ಬರುವಷ್ಟು ಸಿದ್ಧಳಾಗಿಲ್ಲ. ಇನ್ನೂ ನಾಲ್ಕಾರು ಬುರುಡಿ ಉರುಳಿಸತಕ್ಕದ್ದದೆ. ಆ ಮೇಲೆ ಹೇಗಾಗುವದೋ ನೋಡೋಣ.

**ವೆಂಕಣ್ಣನಾಯಕ**—ಹೂ. ಇಂಥ ಕೆಲಸಕ್ಕೆ ಬೇಕಾದಷ್ಟು ಬುರುಡಿ ಉರುಳಿಸರಿ. ಅದರಿಂದ ಆಕೆಯ ಹಿತವೇ ಆಗುವದು. ಅವಳ ಮುಂದೆ "ಮುದುಕನು ದ್ರವ್ಯಲೋಭಿಯು ಇರುತ್ತಾನೆ- ಅವನು ನಿನ್ನನ್ನು ತ್ರಾಟಿಕೆಯಂತೆ ಯಾವನಾದರೊಬ್ಬ ದ್ರವ್ಯಪಿಶಾಚಿಗೆ ಮದುವೆ ಮಾಡಿಕೊಡಬೇಕೆಂದು ವಿಚಾರಮಾಡಿರುತ್ತಾನೆ. ಬಾಪೂರಾಯನಿಗೆ ಇಬ್ಬರು ಹೆಂಡರಿರುತ್ತಾರೆ. ಇದಲ್ಲದೆ ಅವನಿಗೆ ದಮ್ಮಿನ ಉಪದ್ರವವಿರುತ್ತದೆ" ಎಂದು ಬುರುಡಿಯನ್ನು ಉರುಳಿಸು. ನಾವು ಓಡಿ ಹೋಗತಕ್ಕ ವೇಳೆಯು ಸಮೀಪಿಸಿದ ಕೂಡಲೆ ನಾನು ತಮ್ಯಾನ ಕಡೆಯಿಂದ ಸೂಚನೆಯನ್ನು ಕಳುಹಿಸುವೆನು. ಹ. ದೂರ ನಿಂತುಕೋ. ಆ ಮುದುಕ ಬಾಪೂರಾಯನು ಇತ್ತ ಕಡೆಗೆ ಬಂದನೆಂದು ಕಾಣುತ್ತದೆ.

( ಬಾಪೂರಾಯನು ಬರುತ್ತಾನೆ. )

ಏನರಿ ರಾಯರೇ ! ಲಗ್ನಮಂಟಪದಿಂದ ಬಂದಿರೆಂದು ಕಾಣುತ್ತದೆ. ಇಷ್ಟೇಕೆ ಅಂಜಿರುತ್ತೀರಿ ?

**ಬಾಪೂರಾವ—** ಬಲಾಢ್ಯ ಪೈಲವಾನನ ಮುಂದೆ ಕುಸ್ತಿಯಾಡಲಿಕ್ಕೆ ನಿಂತುಕೊಂಡರೆ ಯಾವ ಪ್ರಕಾರ ಮನಸ್ಸಿನ ಅವಸ್ಥೆಯಾಗುತ್ತದೋ ಅದೇ ಪ್ರಕಾರ ನನಗೆ ಆ ಹಂದರದಲ್ಲಿ ನಿಂತುಕೊಳ್ಳಬೇಕಾದರೆ ಆಗಿಹೋಯಿತು !

**ವೆಂಕಣ್ಣನಾಯಕ—** ಅಳಿಯನು ಮತ್ತೇನಾದರೂ ಚಮತ್ಕಾರವನ್ನು ಮಾಡಿದನೋ ?

**ಬಾಪೂರಾವ—** ಅವನು ಅಳಿಯನಲ್ಲ, ಆದರೆ ಪ್ರತ್ಯಕ್ಷ ಬ್ರಹ್ಮರಾಕ್ಷಸನು.

**ವೆಂಕಣ್ಣನಾಯಕ—** ನಮ್ಮ ತ್ರಾಟಿಕಾ ಅಮ್ಮನವರು ಏನು ಕಡಿಮೆ ಇರುತ್ತಾರೆ ?

**ಬಾಪೂರಾವ—** ಏನಿರಿ, ಇನ್ನುಮೇಲೆ ನೀವು ಅವಳಿಗೆ ತ್ರಾಟಿಕಾ ಎಂದು ಕರೆಯಬೇಡಿರಿ. ಅವಳ ತ್ರಾಟಿಕಾ ಅವತಾರವು ಮುಗಿದಂತಾಯಿತು. ಆಕೆಯು ಅವನ ಮುಂದೆ ಸಭ್ಯ ಆಕಳದಂತೆ ಆಗಿರುತ್ತಾಳೆ. ಅಲ್ಲಿ ನಡೆದ ವೃತ್ತಾಂತವನ್ನು ಸ್ವಲ್ಪ ಹೇಳುತ್ತೇನೆ ಕೇಳರಿ. ಉಪಾಧ್ಯಯನು ಅವನಿಗೆ “ ನಾನನ್ನುವಂತೆ ನೀವು ಮಂತ್ರಗಳನ್ನು ಬಾಯಿಂದ ಉಚ್ಚರಿಸಿರಿ ” ಎಂದು ಹೇಳಿದ ಕೂಡಲೆ ಅವನು ಸಿಟ್ಟಿಗೆದ್ದು ಕಣ್ಣು ಕೆಂಪಗೆ ಮಾಡಿ “ ಎಲಾ ಭಟ್ಟಾ, ಲಂಬಕರ್ಣಾ, ಅವಿವೇಕೀ, ಕೃತಘ್ನಾ, ನನಗೆ ಅಪ್ಪಣೆ ಮಾಡುವವನು ನೀನು ಯಾರು ? ನನಗೆ ಈ ಜಗತ್ತಿನಲ್ಲಿ ಅಪ್ಪಣೆ ಮಾಡುವವಳು ಒಬ್ಬಳೇ ಇದ್ದಾಳೆ. ನಿನಗೇನಾದರೂ ಮಂತ್ರಗಿಂತ್ರ ಅನ್ನತಕ್ಕದ್ದಿದ್ದರೆ ನೀನೇ ಸುಮ್ಮನೆ ಅಂದುಬಿಡು. ನನ್ನ ಪ್ರಿಯಳಿಗೆ ಬಹಳ ಹೊತ್ತಿನ ತನಕ ನಿಲ್ಲುವ ಶ್ರಮವನ್ನು ಕೊಡಬೇಡ. ಅವಳು ನನಗೆ ದೃಢಾಲಿಂಗನವನ್ನು ಕೊಡಲಿಕ್ಕೆ ಹೇಗೆ ಉತ್ಸುಕಳಾಗಿರುತ್ತಾಳೆ, ನೋಡು ! ಈಶ್ವರನು ಯಾವಳನ್ನು ನನಗೆ ಬ್ರಹ್ಮಗಂಟು ಹಾಕಿರುತ್ತಾನೋ ಅವಳನ್ನು ನನ್ನಿಂದ ನೀನು ದೂರ ನಿಲ್ಲಿಸುವಿಯಾ ? ನಿನ್ನ ಎಲವು ಪುಡಿಪುಡಿಯಾಗಿ ಹೋದಾವು. ಈ ಪ್ರಕಾರ ಯಾಕೆ ಹುಚ್ಚನಂತೆ ಕಣ್ಣು ಬಿಡುತ್ತಿರುವೆ ? ಹಲ್ಲಲ್ಲಿ ನಾಲಿಗೆ ಇಟ್ಟುಕೊಂಡು ಏಕೆ ಸುಮ್ಮನೆ ನಿಂತುಕೊಂಡಿರುವೆ ? ನಿನ್ನ ಹಲ್ಲನ್ನು ಕೀಳಲೋ? ” ಎಂದು ಗಟ್ಟಿಸಿ ಮಾತಾಡಿದನು. ಇದನ್ನು ಕೇಳಿದ ಕೂಡಲೆ ಆ ಉಪಾಧ್ಯಯನು ಅವಸ

ರದಿಂದ ಒಂದೆರಡು ಮಂತ್ರಗಳನ್ನು ಹೇಳಿ "**ಸುಮುಹೂರ್ತೇ ಸಾವಧಾನ**" ಎಂದವನೇ ಮೈ ನಡುಗಿಸುತ್ತ "ರಾವಸಾಹೇಬರೇ ಇನ್ನು ನಿಮ್ಮ ಲಗ್ನವು ಮುಗಿಯಿತು" ಎಂದು ಹೇಳಿದನು. ಪ್ರತಾಪರಾಯನ ಅದ್ಭುತ ವೇಷವನ್ನೂ ಆವೇಶಯುಕ್ತಭಾಷಣವನ್ನೂ ಕೇಳಿ ಯಾವತ್ತು ಜನರ ಮೈಮೇಲಿ ಮುಳ್ಳೆದ್ದವು. ಅವರೆಲ್ಲರು ಅಂಜಂಜುತ್ತ ಅಕ್ಷತಿಗಳನ್ನು ಒಗೆದರು.

**ವೆಂಕಣ್ಣನಾಯಕ**—ಒಳ್ಳೇದು. ಇದೆಲ್ಲ ನಡೆಯುವಾಗ್ಗೆ ತ್ರಾಟಿಕೆಯು ಸುಮ್ಮನೆ ನಿಂತುಕೊಂಡಿದ್ದಳೋ ?

**ಬಾಪೂರಾವ**—ಅವಳು ಗರ್ಭಗಳಿತಳಾಗಿದ್ದಳು. ಸುಮ್ಮನೇ ನಿಂತುಕೊಳ್ಳದೇ ಏನು ಮಾಡಿಯಾಳು ? ಹುಲಿಯ ಮುಂದೆ ಕಟ್ಟಿದ ಕುರಿಯಂತೆ ಥರಥರ ನಡುಗುತ್ತಿದ್ದಳು. ಆಕೆಯ ಕಣ್ಣಲ್ಲಿ ನೀರು ಬಂದಿದ್ದವು. ಆದರೆ ಅವುಗಳನ್ನು ಹೊರಗೆ ತೆಗೆಯಲಿಕ್ಕೆ ಆಕೆಗೆ ಬಹಳ ಹೆದರಿಕೆಯಿತ್ತು. ಆ ಕಾಲಭೈರವನು ಏನು ಅಂದಾನು, ಏನು ಮಾಡಿಯಾನು ಎಂದು ಅಂಜಿಕೊಂಡು ಸುಮ್ಮನೆ ನಿಂತುಕೊಂಡಿದ್ದಳು. ಉಪಾಧ್ಯಯನು ಹೇಳಿದ್ದೆಲ್ಲ ಮಾಡುತ್ತಿದ್ದಳು. ಆದರೆ ಅವಳ ಲಕ್ಷ್ಯವೆಲ್ಲ ಪ್ರತಾಪರಾಯನ ಕಡೆಗೇ ಇತ್ತು. ಅತ್ತಕಡೆಯಿಂದ ಸ್ವಲ್ಪ ಅಸಂತೋಷದ ಸೂಚನೆಯಾದ ಕೂಡಲೆ ಬಾಯಿ ಮುಚ್ಚಿಕೊಂಡು ಮೋರೆಯನ್ನು ಕೆಳಗೆ ಮಾಡುತ್ತಿದ್ದಳು. ಆ ವೇಳೆಯಲ್ಲಿ ಆಕೆಯನ್ನು ನೋಡಿ ನನಗಂತೂ ದಯವು ಹುಟ್ಟಿತು. ಉಪಾಧ್ಯಯನು **ಸುಮುಹೂರ್ತೇ ಸಾವಧಾನ** ಎಂದಕೂಡಲೆ ನಾನು ಅಕ್ಷತಿಗಳನ್ನು ಒಗೆದು ಅಲ್ಲಿಂದ ಹೊರಟೆನು. ನಾನು ಬರಬರುವಾಗ್ಗೆ ಅವರಿಬ್ಬರ ಕಡೆಗೂ ತಿರುಗಿ ನೋಡಿದೆನು. ಅವನು ಅವಳನ್ನು ತನ್ನ ಸಮೀಪಕ್ಕ ಎಳೆದು ಎರಡೂ ಕೈಯಿಂದ ಅವಚಿಕೊಂಡು ಎಲ್ಲರ ಸಮಕ್ಷ ಆಕೆಯ ಚುಂಬನವನ್ನು ತೆಗೆದುಕೊಂಡು—"ಅಹಹ ! ನನ್ನ ಪ್ರಿಯಳಿಗೆ ಎಷ್ಟು ಶ್ರಮವಾಯಿತು? ಇವಳ ಮೈಯೆಲ್ಲ ಬೆವರಾಗಿರುತ್ತದೆ. ನನಗೆ ಇದು ಮುಂಚೇ ತಿಳದಿದ್ದರೆ ಆ ಉಪಾಧ್ಯಯನ ಸಮಾಚಾರವನ್ನು ಚೆನ್ನಾಗಿ ತೆಗೆದುಕೊಳ್ಳುತ್ತಿದ್ದೆನು. ನನ್ನ ಪ್ರಾಣಪದಕಳೇ, ಈ ಎಲ್ಲ ಕಷ್ಟವನ್ನು ಇನ್ನು ಮರೆತು ಬಿಡು. ನಿನ್ನ ಕಷ್ಟದ ದಿವಸಗಳು ಹೋದವು. ನೀನು ಇನ್ನು ಈ ಪ್ರತಾಪರಾಯನ ಪಟ್ಟರಾಣಿಯಾದೆ!" ಎಂದು ಅವಳಿಗೆ ನುಡಿದನು. (**ನೇಪಥ್ಯದ ಕಡೆಗೆ ನೋಡಿ**) ಓಹೋ ! ಅವರೆಲ್ಲರು ಇತ್ತಕಡೆಗೆ ಬಂದರೆಂದು ಕಾಣುತ್ತದೆ.

( ಪ್ರತಾಪರಾವ, ತ್ರಾಟಿಕೆ, ಕಮಲೆ, ಲಕ್ಷ್ಮೀಪತಿರಾವ, ನೀಲ್ಯಾ ಮೊದಲಾದವರು ಬರುತ್ತಾರೆ. )

**ಪ್ರತಾಪರಾವ**—ಮಿತ್ರರೇ, ನೀವೆಲ್ಲರು ನನ್ನ ಲಗ್ನಸಮಾರಂಭವನ್ನು ಸಾಂಗಪಡಿಸುವದಕ್ಕಾಗಿ ಇಲ್ಲಿಯತನಕ ಬರುವ ಶ್ರಮ ತೆಗೆದುಕೊಂಡಿರಿ. ಆದುದರಿಂದ ನಿಮ್ಮ ಉಪಕಾರಗಳನ್ನು ನಾನೆಂದಿಗೂ ಮರೆಯಲಾರೆನು. ಈ ದಿವಸ ನಿಮ್ಮೆಲ್ಲರ ಪಂಗ್ತಿ ಭೋಜನದ ಲಾಭವನ್ನು ನಾನು ಆನಂದದಿಂದ ಸ್ವೀಕರಿಸುವದು ಯೋಗ್ಯವು. ನಮ್ಮ ಮಾವನವರು ತಮ್ಮ ಮನೆಯಲ್ಲಿ ನಾನಾತರದ ಪಕ್ವಾನ್ನಗಳನ್ನು ಸಿದ್ಧಮಾಡಿಸಿರುತ್ತಾರೆ. ಪಾಕಶಾಲೆಯೊಳಗಿಂದ ಬರುತ್ತಲಿರುವ ಮಸಾಲೆಯ ಕರಿಗಡಬಿನ ಘಮಘಮಾಟವು ನನ್ನ ಘ್ರಾಣೇಂದ್ರಿಯಕ್ಕೆ ಬಂದು ತಲ್ಪಿದ ಕೂಡಲೇ ನನ್ನ ಹೊಟ್ಟೆಯಲ್ಲಿ ಎಷ್ಟು ಗಡಬಿಡಿಯು ನಡೆದಿರುತ್ತದೆಂದು ಹೇಳಲಿ ! ಆದರೆ ಉಪಾಯವಿಲ್ಲ. ಈ ಭೋಜನ ಸೌಖ್ಯವನ್ನು ಅನಭೋಗಿಸುವದಕ್ಕಾಗಿ ನಾನು ಇಲ್ಲಿ ಇರಲು ಅನುಕೂಲವಿಲ್ಲದ್ದಕ್ಕಾಗಿ ನನಗೆ ಬಹಳ ವ್ಯಸನವಾಗುತ್ತದೆ. ಇದಕ್ಕಾಗಿ ನೀವು ಎಳ್ಳಷ್ಟು ಸಹ ಹಳಹಳಿಸಕೂಡದು. ನನಗೆ ಈಗಿಂದೀಗಲೇ ಹೋಗತಕ್ಕದ್ದದೆ. ಆದುದರಿಂದ ನಾನು ನಿಮ್ಮ ಅಪ್ಪಣೆಯನ್ನು ತೆಗೆದುಕೊಳ್ಳುತ್ತೇನೆ.

**ಲಕ್ಷ್ಮೀಪತಿರಾವ**— ಇಷ್ಟು ಅಗತ್ಯದ ಕೆಲಸವೇನದೆ ? ಸಾಯಂಕಾಲದ ಭೋಜನವನ್ನು ತೀರಿಸಿಕೊಂಡು ಹೋಗಿರಿ.

**ಪ್ರತಾಪರಾವ**—ಛೇ, ಮಾವನವರೇ, ನಿಮ್ಮ ಮಾತು ಮೀರಬೇಕಾದರೆ ನನ್ನ ಜೀವವು ಬಹಳ ಕಸವಿಸಿಗೊಳ್ಳುತ್ತದೆ. ಆದರೆ ಏನು ಮಾಡಲಿ ? ನನಗೆ ಊರಲ್ಲಿ ಅತ್ಯಂತ ಅಗತ್ಯವಾದ ಕೆಲಸವಿರುತ್ತದೆ. ಅದನ್ನು ಹೇಳಲಿಕ್ಕೆ ನನಗೆ ವೇಳೆ ಇಲ್ಲ. ನಾನು ಅದನ್ನು ನಿಮಗೆ ಹೇಳಿದರೆ ನೀವೇ ನನಗೆ ಬೇಗನೆ ಹೋಗಿರೆಂದು ಆಗ್ರಹಮಾಡುವಿರಿ. ನಾನು ಬಂದದ್ದೇ ಬಹಳ ತೊಂದರೆಯಿಂದ ಬಂದೆನು. (**ತ್ರಾಟಿಕೆಯ ಕಡೆಗೆ ನೋಡಿ**) ಈ ಚುಂಬಕಮಣಿಯು ನನಗೆ ಆಕರ್ಷಣ ಮಾಡದಿದ್ದರೆ ನಾನು ಬರುತ್ತಲೇ ಇದ್ದಿಲ್ಲ. ಮಾವನವರೇ, ಈ ಆಪ್ತಮಂಡಳಿಗೆ ನನ್ನ ಸಲುವಾಗಿ ಒಂದು ಔತಣವನ್ನು ಕೊಡಿರಿ. ಹಣದ ದೆಸೆಯಿಂದ ಹಿಂದು ಮುಂದೆ ನೋಡಬೇಡಿರಿ. ನನಗೆ ಈ ರತ್ನವು ದೊರಕಿದ ಆನಂದದ ಮುಂದೆ ನನ್ನ ಹಣವು ಎಷ್ಟು ವೆಚ್ಚವಾದಾಗ್ಯೂ ನನಗೆ ಅದರ ಚಿಂತೆಯು ಇಲ್ಲ. ನೀವು ನಿಮ್ಮ ಯೋಗ್ಯತೆಗೆ

ಬೇಕಾದಂಥ ಉತ್ತಮ ಔತಣವನ್ನು ಮಾಡಿಸಿ ನೃತ್ಯಗಾಯನಗಳನ್ನಾದರೂ ಮಾಡಿಸಿರಿ. ನೀವು ನಿಮ್ಮ ವಿನೋದ ಸಮಾರಂಭದಲ್ಲಿ ಯಾವ ಕೊರತೆಯನ್ನೂ ಮಾಡಿಕೊಳ್ಳಬೇಡಿರಿ. ನಾನು ನಿಮ್ಮ ಬಳಿಯಲ್ಲಿ ಉಳಿಯುವದಿಲ್ಲೆಂಬ ಕಾರಣದಿಂದ ನೀವು ಏನಾದರೂ ಕೊರತೆಯನ್ನುಂಟು ಮಾಡಿಕೊಂಡರೆ ನನ್ನ ಮೇಲೆ ನಿಮ್ಮ ಲೋಭವು ಬಹಳ ಕಡಿಮೆ ಇರುತ್ತದೆಂದು ತಿಳಿದುಕೊಂಡೇನು. ಇನ್ನು ಹೋಗಿಬರುತ್ತೇನೆ. ನಮಸ್ಕಾರ. ಲೋಭವಿರಲಿ. ನೀಲಾ ಹೋಗು. ಕುದುರೆಯನ್ನು ಸಿದ್ಧ ಮಾಡು.

**ವೆಂಕಣ್ಣನಾಯಕ**—ವ್ಹಾ. ಹೀಗೇನು ಮಾಡುತ್ತೀರಿ? ಭೋಜನ ತೀರಿಸಿಕೊಂಡು ಹೋಗಿರಿ.

**ಪ್ರತಾಪರಾವ**—ಭೋಜನದ ಹೆಸರು ಸಹ ತೆಗೆಯಬೇಡಿರಿ.

**ಬಾಪೂರಾವ**—ನಿಂತುಕೊಳ್ಳಿರಿ. ಇಷ್ಟೇನು ನಿಮ್ಮ ಅವಸರ?

**ಪ್ರತಾಪರಾವ**—ನಿರುಪಾಯವದೆ.

**ಲಕ್ಷ್ಮೀಪತಿರಾವ**—ಸಾಯಂಕಾಲದವರೆಗೆ ನಿಂತುಕೊಳ್ಳುವದಾಗದಿದ್ದರೆ ಬಿಡಿರಿ. ಬೇಕಾದರೆ ಈಗಲೇ ಎಲೆಗಳನ್ನು ಬಡಿಸುವ ವ್ಯವಸ್ಥೆಯನ್ನು ಮಾಡುವೆನು. ಬಹಳವಾದರೆ ಎರಡು ಗಳಿಗೆಯ ಅವಕಾಶವು ಹತ್ತೀತು.

**ಪ್ರತಾಪರಾವ**—ಮಾವನವರೇ, ನನಗೆ ಸುಮ್ಮನೇ ಆಗ್ರಹ ಮಾಡಬೇಡಿರಿ.

**ಕಮಲೆ**—ಭಾವನವರೇ, ಹೀಗೇಕೆ ಅವಸರ ಮಾಡುವಿರಿ? ಎರಡು ಗಳಿಗೆ ತಡೆಯಲಿಕ್ಕೆ ಏನಾಗುತ್ತದೆ?

**ಪ್ರತಾಪರಾವ**—ನಿನ್ನ ಮಾತು ಸಹ ಮೀರಬೇಕಾಯಿತೆಂದು ನನಗೆ ಅತ್ಯಂತ ದುಃಖವಾಗುತ್ತದೆ.

**ಕಮಲೆ** ಒಳ್ಳೇದು. ನಿಮಗೆ ಕೆಲಸವಿದ್ದರೆ ಹೋಗಿರಿ; ಆದರೆ ರಂಗಕ್ಕನನ್ನಾದರೂ ಬಿಟ್ಟು ಹೋಗಿರಿ ಆಕೆಯನ್ನು ಹಿಂದುಗಡೆ ಕಳುಹಿಸಿಕೊಡುತ್ತೇವೆ.

**ಪ್ರತಾಪರಾವ**—ಒಳ್ಳೇದು, ಆಕೆಯ ಅಪೇಕ್ಷೆಯು ಇದ್ದರೆ ಆಕೆಯು ನಿಂತುಕೊಳ್ಳಲಿ ಆಕೆಯು ಕಡೆತನಕ ಇಲ್ಲಿ ನಿಂತುಕೊಂಡರೂ ನನ್ನದೆಲ್ಲಿ ಅಡ್ಡಿ ಇರುತ್ತದೆ? ನಾನೂ ಆಕೆಯೂ ಮಾತ್ರ ಒಬ್ಬರನ್ನೊಬ್ಬರು ತಿರುಗಿ ಕಾಣಲಾರೆವು.

**ಕಮಲೆ**—ಇದರ ಮೇಲೆ ಏನು ಹೇಳತಕ್ಕದ್ದದೆ? ಅಕ್ಕಾ, ನೀನಾದರೂ ಹೇಳಿ ನೋಡು.

**ತ್ರುಟಿಕೆ**—ಇತ್ತಕಡೆಗೆ ಕೇಳದಿರೇನು! ಕೈ ಮುಗಿಯುತ್ತೇನೆ. ನನ್ನ ದೆಸೆಯಿಂದಾವರೂ ಸ್ವಲ್ಪ ಹೊತ್ತು ಇರೋಣಾಗಲಿ.

**ಪ್ರತಾಪರಾವ**—ವಿಹಿತವೇ ಸರಿ.

**ತಪ್ರಿಟಿಕೆ**—ಇರುವನು ನಿಶ್ಚಯುವಾಯಿತಷ್ಟೇ ?

**ಪ್ರತಾಪರಾವ** —ಹಾಗಲ್ಲ. ನೀನು ಕೈಮುಗಿದನ್ನು ವಿಹಿತವಾಯಿತೆಂದು ನಾನಂದೆನು. ನಿನ್ನ ನಮ್ರತನವನ್ನು ನೋಡಿ ನನಗೆ ಬಹಳ ಆನಂದವಾಯಿತು. ಆದರೆ ಊರಿಗೆ ಹೊರಡುವ ವಿಷಯುವಲ್ಲಿ ನನ್ನಿಂದ ಒಂದು ಗಳಿಗೆ ಸಹ ತಡಮಾಡಲಿಕ್ಕಾಗುವದಿಲ್ಲ. ನೀಲಾ, ಕತ್ತೇ ! ನೀನು ಎಷ್ಟು ಆಲಸ್ಯ ಮಾಡುತ್ತೀ ! ಇನ್ನೂ ಕುದುರೆಯು ಮೇಲೆ ತಡಿಯುನ್ನು ಹಾಕಲಿಲ್ಲೇ ?

**ನೀಲಾ** —( ಓಡುತ್ತ ಒಳಗೆ ಬಂದು ) ಅಪ್ಪನವರೇ, ಕುದುರೆಯು ದಾಣೀ ತಿಂದು ಸಿದ್ಧವಾಗಿರುತ್ತದೆ. ಕುದುರೆಯು ಮೇಲೆ ತಡಿ ಬಿಗಿಯುವದಷ್ಟೇ ಉಳಿದಿರುತ್ತದೆ.

**ತಪ್ರಿಟಿಕೆ** — ಹೀಗೇಕೆ ಮಾಡುತ್ತೀರಿ ? ನಿಮಗೆ ಸ್ವಲ್ಪಾದರೂ ಸಮಾಧಾನವು ಇಲ್ಲೇ ? ನಿಮಗೆ ಅಷ್ಟೊಂದು ಅವಸರವಿದ್ದರೆ ಹೋಗಿರಿ. ದಾರಿಯು ತೆರವಿರುತ್ತದೆ. ನಿಮಗೆ ಯಾರೂ ಅಡ್ಡಗಟ್ಟುವದಿಲ್ಲ. ನೀವು ಏನು ಮಾಡಿದಾಗ್ಯೂ ನಾನು ಬರುವದಿಲ್ಲ ಈವೊತ್ತಷ್ಟೇ ಏಕೆ ? ನಾಳೆ, ನಾಡದ, ಆಚೇನಾಡದ, ನನ್ನ ಮನಸ್ಸಿಗೆ ಬರುವತನಕ, ನಾನು ಬರುವದಿಲ್ಲ. ತಿರುಗಿ ನಾವೆಂದಿಗೂ ಒಬ್ಬರನ್ನೊಬ್ಬರು ಕಾಣಲಿಕ್ಕಿಲ್ಲವೆಂದು ನನಗೆ ಅಂಜಿಕೆಯುನ್ನು ತೋರಿಸುವಿರೇನು ? ಕಾಣದಿದ್ದರೆ ಕಾಣಲಿಕ್ಕಿಲ್ಲ. ನಿಮಗೆ ಇಲ್ಲಿಯುವರೆಗೆ ಬರಲಿಕ್ಕೆ ಯಾರು ಒತ್ತಾಯ ಮಾಡಿದ್ದರು ! ನೀವು ಬಾರದಿದ್ದರೆ ನನ್ನ ಲಗ್ನವಾಗುವದು ನಿಲ್ಲುತ್ತಿದ್ದಿಲ್ಲ. ನಿಂತಿದ್ದರೂ ನನ್ನದೇನೂ ಅಡ್ಡಿಯಿದ್ದಿಲ್ಲ. ಎಷ್ಟು ಅನ್ಯಾಯುವಿದು ? ಈಗೀಗ ಲಗ್ನವು ಮುಗಿದಿದ್ದರೂ ಇಷ್ಟೊಂದು ಬಲಾತ್ಕಾರದ ಅಪ್ಪಣೆಯುನ್ನು ನಡೆಸುತ್ತೀರಿ ! ಹಿರಿಯುರದಾಗಲೀ ಕಿರಿಯುರದಾಗಲಿ: ನಿಮಗೆ ದಾಕ್ಷಿಣ್ಯವಿಲ್ಲ ! ಅಂದಮೇಲೆ ನಾನು ಬರುವದಿಲ್ಲೆಂದು ನಿಮಗೆ ಸ್ಪಷ್ಟವಾಗಿ ತಿಳಿಸುತ್ತೇನೆ. ಇನ್ನೂ ನಿಮಗೆ ನನ್ನ ಸ್ವಭಾವದ ಪರೀಕ್ಷೆಯಾಗಿಲ್ಲ.

**ಬಾಪೂರಾವ** —ಕಲ್ಲು ಒಡೆಯುತ್ತದೋ ಕಬ್ಬಿಣವು ಮುರಿಯುತ್ತದೋ ನೋಡೋಣ.

**ಪ್ರತಾಪರಾವ** —( ತನ್ನಷ್ಟಕ್ಕೆ ) ಓಹೋ, ಮಾತಿನಲ್ಲಿ ಎಷ್ಟು ಕಾರಿನ್ಯ ವುಂಟು ? ಒಳ್ಳೇದು. ಒಳ್ಳೇದು. ನಿನ್ನಿಂದ ಮಾತಾಡಿಸಿಕೊಳ್ಳುವನು ಇವೇ ಕಡೆಯು

ಪ್ರಸಂಗವೆಂದು ತಿಳಿ. ಈ ಮನೆ ಬಿಟ್ಟು ಹೊರಗೆ ಹೊರಟ ಕೂಡಲೆ ನಿನ್ನ ಗುಣ ವನ್ನೂ ನಿನ್ನ ತ್ರಾಟಿಕೆಯ ಹೆಸರನ್ನೂ ಸಹ ಅಳಿದು ಬಿಡುವೆನು. **(ಬಹಿರಂಗವಾಗಿ)** ನೀನು ಹೀಗೆ ಮಾತಾಡಿದ್ದಕ್ಕಾಗಿ ನನಗೇನೂ ಆಶ್ಚರ್ಯವೆನಿಸುವದಿಲ್ಲ. ಇವರೆಲ್ಲರು ನಿನಗೆ ಅದರಂತೆಯೇ ಕಷ್ಟಪಡಿಸಿದರು. ಇನ್ನು ಮುಂದೆ ನಿನಗೆ ಆ ತರದ ಕಷ್ಟ ವನ್ನು ಕೊಡಲಿಕ್ಕೆ ಯಾರ ಎದೆಯಾಗುತ್ತದೋ ನೋಡೋಣ. ನಿನಗೂ ಪ್ರತಾ ಪನಿಗೂ ಗಂಟಿರುವದು. ಮುಂಚಿನ ಸಿಟ್ಟನ್ನು ಇನ್ನು ಬಿಡು.

**ತ್ರಾಟಿಕಾ**—ಸಿಟ್ಟು ಬಿಡಬೇಕೇ ? ಏಕೆ ಬಿಡಬೇಕು ? ನನಗೆ ಬೇಕಾ ದರೆ ಸಿಟ್ಟಾದೇನು, ಬೇಕಾದರೆ ಅತ್ತೇನು, ಬೇಕಾದರೆ ನಕ್ಕೇನು. ನನಗೆ ಬೇಕಾ ದಂತೆ ಮಾಡೇನು. ಹೀಗೆ ಮಾಡು, ಹೀಗೆ ಬಿಡು ಎಂದು ನನಗೆ ಅಪ್ಪಣೆ ಮಾಡು ವವರು ಯಾರು ಇರುತ್ತಾರೆ ? ಈ ತ್ರಾಟಿಕೆಯು ಲಗ್ನ ಮಾಡಿಕೊಂಡಾಗ್ಯೂ ಅಳ ಬುರಕ ಹುಡಿಗೆಯರಂತೆ ಗಂಡನ ಆಧೀನದಲ್ಲಿದ್ದು ಆತನ ಅಪ್ಪಣೆಯಂತೆ ನಡೆಯು ವವಳಲ್ಲ. ಬೇಕಾದರೆ ಅಂಗೀಕರಿಸಿರಿ, ಇಲ್ಲದಿದ್ದರೆ ಬಿಡಿರಿ. **(ಲಕ್ಷ್ಮೀಪತಿರಾಯನ ಕಡೆಗೆ ನೋಡಿ)** ಅಪ್ಪಾ, ಯಾಕೆ ಈ ಪ್ರಕಾರ ಬಾಯಿಯ ಮೇಲೆ ಕೈ ಇಟ್ಟುಕೊ ಳ್ಳುತ್ತೀ ? ನಾನೇನು ಅನ್ಯಥಾ ನುಡಿಯುವದಿಲ್ಲ, ಕಡಕ್ಕೆ ಕಡ ತೀರಿಸುತ್ತೇನೆ. ನೀವು ಈ ತೊಂದರೆಯಲ್ಲಿ ಬೀಳಬೇಡಿರಿ. ನಿಮ್ಮ ಉಪಕಾರವು ಈಗ ಆದದ್ದೇ ಸಾಕು. ಹೆಚ್ಚಿಗೆ ಉಪಕಾರಮಾಡಲಿಕ್ಕೆ ನಡುವೆ ಬರಬೇಡಿರಿ.

**ಪ್ರತಾಪರಾವ**—ಮಾವನವರೇ, ಕೇಳಿದಿರಾ ? ನಿಮ್ಮಲ್ಲಿ ಉಳಿಯಲಿಕ್ಕೆ ಈಕೆಯ ಅಪೇಕ್ಷೆಯು ಇಲ್ಲ. ಸುಮ್ಮನೆ ಏಕೆ ಅವಳಿಗೆ ಆಗ್ರಹ ಮಾಡುತ್ತೀರಿ ? ಈಕೆಯು ಬಹಳ ತಿಳುವಳಿಕೆಯುಳ್ಳವಳಿರುತ್ತಾಳೆ. ಇಂಥ ತಿಳುವಳಿಕೆಯುಳ್ಳ ಹೆಂಗಸು ಸಿಗುವದು ಅಪರೂಪವೆಂದು ನಾನು ನಿಮಗೆ ಮೊದಲೇ ಹೇಳಿದ್ದೇನೆ. ಈಕೆಗೆ ಪತಿವ್ರತಾ ಧರ್ಮವು ಚೆನ್ನಾಗಿ ಗೊತ್ತದೆ. ಗಂಡನಿರುವಲ್ಲಿಯೇ ಈಕೆಯು ಇರತಕ್ಕವಳು. ಈಕೆಯ ಮಾತಿನ ಮೇಲಿಂದ ನಿಮಗೆ ವಿಪರೀತ ಅರ್ಥವು ಕಂಡು ಬಂದೀತು. ಆದರೆ ಹಾಗಲ್ಲ. ವಿರೋಧವು ಕಂಡುಬರುವಂಥ ಭಾಷಣವನ್ನೇ ಮಾಡತಕ್ಕದ್ದೆಂದು ನಮ್ಮ ನಮ್ಮೊಳಗೆ ಗೊತ್ತಾಗಿರುತ್ತದೆ. **(ತ್ರಾಟಿಕೆಯ ಕಡೆಗೆ ನೋಡಿ)** ಪ್ರಿಯೇ, ನೀನು ಸುಮ್ಮನೆ ಶ್ರಮ ಮಾಡಿಕೊಳ್ಳಬೇಡ.

**ತ್ರಾಟಿಕಾ**—**(ಹುಚ್ಚಿಯಂತೆ ಕಕ್ಕಾವಿಕ್ಕಿಯಾಗಿ)** ನೀವು ಅಂದಂತೇ ಆಗಲಿ. **(ಲಕ್ಷ್ಮೀ ಪತಿರಾಯನನ್ನುದ್ದೇಶಿಸಿ)** ಅಪ್ಪಾ, ಏಕೆ ದೆವ್ವ ಹಿಡಿದವನಂತೆ ಬಾಯಿತೆರೆದುಕೊಂಡು

ನಿಂತಿರುತ್ತೀ ? ಇನ್ನು ನಿನ್ನ ಉದ್ಯೋಗಕ್ಕೆ ಹೋಗು. ಸುಡುಗಾಡ ನುಂಗಲಿ. ಎಲ್ಲವು ಚೇಷ್ಟೆಯೇ ನಡೆದಿರುತ್ತದೆ.

**ಪ್ರತಾಪರಾವ**—ಗೃಹಸ್ಥರೇ, ನಮ್ಮ ರಾಣೀಸಾಹೇಬರು ಮಾಡಿದ ಅಪ್ಪಣೆಯನ್ನು ಕೇಳಿಕೊಂಡಿರಾ ? ಅದರಂತೆ ನಿಮ್ಮ ನಿಮ್ಮ ಕೆಲಸಕ್ಕೆ ಹೋಗಿರಿ. ಇಲ್ಲದಿದ್ದರೆ ನಿಮಗೆ ಬೆತ್ತದ ಪೆಟ್ಟು ಬಿದ್ದಾವು. ನೀವು ಎಷ್ಟು ದೊಡ್ಡವರಾದಾಗ್ಯೂ ನಿಮಗೆ ನಾನು ನಮ್ಮ ರಾಣೀಸಾಹೇಬರ ಅಪ್ಪಣೆಯನ್ನು ಮುರಿಯಗೊಡಲಾರೆನು. ಇಲ್ಲಿಂದ ನಡೆಯಿರಿ. ಹೊರಡಿರಿ. ನನ್ನ ಪ್ರಿಯಳು ನನ್ನ ಸಂಗಡ ಬರತಕ್ಕವಳು. (ಅವಳ ಕೈಯನ್ನು ಜಗ್ಗಿ ತನ್ನ ಕೈಯೊಳಗೆ ಇರಿಸುತ್ತಾನೆ.) ಆಕೆಯ ಇಚ್ಛೆಯ ಪ್ರಕಾರವೇ ನಾವೆಲ್ಲರು ನಡೆಯತಕ್ಕದ್ದು. ನೀವೆಲ್ಲರು ಕಣ್ಣು ಹಿಗ್ಗಿಸಿ ನನ್ನ ಕಡೆಗೆ ಬಹಳ ನೋಡುತ್ತೀರಿ ? ನಾನೂ ನನ್ನ ಪ್ರಿಯಳೂ ಈಗ ಏಕಜೀವವಾಗಿರುತ್ತೇವೆಂಬದು ನಿಮಗೆ ಚೆನ್ನಾಗಿ ಗೊತ್ತಿರಲಿ. ನಾನಿದ್ದಲ್ಲಿ ಅವಳು, ಅವಳಿದ್ದಲ್ಲಿ ನಾನು. ಅವಳು ನನ್ನ ಐಶ್ವರ್ಯವು, ನನ್ನ ರತ್ನಭಾಂಡಾರವು, ನನ್ನ ಸೌಖ್ಯದ ಆಗರವು, ಸಾರಾಂಶ—ನನ್ನ ಪಂಚಪ್ರಾಣವು ಇರುತ್ತಾಳೆ. ನನ್ನ ಐಶ್ವರ್ಯವನ್ನು ಕದಿಯುವವರಾರು ? ಅವಳನ್ನು ನನ್ನಿಂದ ದೂರಿಡುವರಾರು ? ಇಂಥ ಎದೆಗಾರನನ್ನು ಯಾವ ತಾಯಿಯು ಹಡೆದಿದ್ದಾಳೆ ? ನೀಲ್ಯಾ ! ಏನು ನೋಡುತ್ತೀ ? ಈ ಕಳ್ಳರು ನನ್ನ ಐಶ್ವರ್ಯವನ್ನು ಕದಿಯಲಿಕ್ಕೆ ಬಂದಿರುತ್ತಾರೆ. ನಿನ್ನ ಖಡ್ಗವನ್ನು ಬೇಗ ಹಿರಿ. ಇವರು ಅವಳಿಗೆ ಇಲ್ಲದ್ದೊಂದು ಬೋಧನೆ ಕೊಟ್ಟು ಅವಳ ಪಾತಿವ್ರತ್ಯವನ್ನು ಭಂಗ ಮಾಡಲಿಕ್ಕೆ ಒಳಸಂಚು ಮಾಡಿಕೊಂಡಿರುತ್ತಾರೆ. ಏನೂ ಅಡ್ಡಿಯಿಲ್ಲ. ಇವರಿಗೆ ಕೈತೋರಿಸೋಣ. ಪ್ರಿಯೇ, ನೀನು ಇನ್ನು ನೀಲ್ಯಾನ ಬೆನ್ನ ಹಿಂದೆ ನಡೆ.

(ನೀಲ್ಯಾನು ಮುಂದಿನಿಂದಲೂ ಪ್ರತಾಪರಾಯನು ಹಿಂದಿನಿಂದಲೂ ತ್ರಾಟಿಕೆಯನ್ನು ಜಗ್ಗಿಕೊಂಡು ಹೋಗುತ್ತಾರೆ. ತ್ರಾಟಿಕೆಯು ಅಳುತ್ತ ಅವರಿಬ್ಬರನ್ನೂ ಹಿಂಬಾಲಿಸುತ್ತಾಳೆ. ಜನರು ಒಬ್ಬರಿಗೊಬ್ಬರು ನೋಡುತ್ತ ನಿಲ್ಲುತ್ತಾರೆ. )

---

# ಅಂಕು ೪ನೇದ್ದು.

## ಪ್ರವೇಶ ೧.

## ಸ್ಥಳ: —ವಿಜಯಪುರ—ಪ್ರತಾಪರಾಯನ ಮನೆಯ ಮುಂದೆ.

( ನೀಲನು ಬರುತ್ತಾನೆ. )

**ನೀಲಾ**—ಈ ಕೆಲಸ ಮಾಡುವ ಸಲುವಾಗಿ ನನಗೆ ಬಲು ಬೇಸರಿಕೆಯು ಬಂದಿರುತ್ತದೆ. ಇದು ಕೆಲಸವಲ್ಲ, ಕುತ್ತಿಗೆಗೆ ಹಾಕುವ ಉರಲು! ಇವತ್ತ ಮುಂಜಾನೆಯಿಂದ ಇತ್ತಿಂದ ಅತ್ತ, ಅತ್ತಿಂದ ಇತ್ತ ಓಡಾಡಿ ನನ್ನ ಕಾಲೊಳಗಿನ ನರಗಳು ಸತ್ತು ಹೋಗಿರುತ್ತವೆ. ದಾರಿಯಾದರೂ ನೆಟ್ಟಗೆ ಇದೆಯೋ ? ಎಲ್ಲಿ ನೋಡಿದಲ್ಲಿ ಮೊಣಕಾಲಮಟ ಕೆಸರು. ಅಂದಮೇಲೆ ಕೇಳುವದೇನು ? ಈ ಕಾಲು ಮೇಲಕ್ಕೆ ತಕ್ಕೊಳ್ಳುವಲ್ಲಿ ಆ ಕಾಲು ಕೆಸರಲ್ಲಿ ಮುಣುಗುವದು. ಕುದುರೆಯಾದರೂ ನೆಟ್ಟಗೆ ನಡೆಯುತ್ತದೆಯೋ ? ನನ್ನ ಸುತ್ತ ಇದೂ ಒಂದು ವಿಧಿ ಗಂಟು ಬಿದ್ದಿರುತ್ತದೆ. ಅದನ್ನು ಎತ್ತಿ ಮೇಲಕ್ಕೆ ನಿಲ್ಲಿಸಿ ನಾಲ್ಕು ಹೆಜ್ಜೆ ಮುಂದೆ ನಡೆಸುವಷ್ಟರಲ್ಲಿ ಅದು ಎಂಟು ಹೆಜ್ಜೆ ಹಿಂದಕ್ಕೆ ಸರಕೊಳ್ಳುತ್ತದೆ. ಮೊದಲೇ ಕುದುರೆ ಇಂಥ ಚೆಲೋದು! ಅದರ ಮೇಲೆ ನಮ್ಮ ಧನಿಯು ಕೂತರಂತೂ ನಾಲ್ಕು ಮಣ ಒಜ್ಜೆಯನ್ನು ಹೇರಿದಂತೆ ಆಗುವದು. ಅವನು ತಾನೊಬ್ಬನಾದರೂ ಕೂತುಕೊಂಡಿರುವನೇ ? ಅದೂ ಇಲ್ಲ. ಅಪ್ಪನವರನ್ನು ಬೇರೆ ಕೂಡ್ರಿಸಿಕೊಂಡಿರುತ್ತಾನೆ. ಅಂದಮೇಲೆ ಕುದುರೆಯು ನಡೆಯುವದು ಹೇಗೆ ? ಲೋಲೋ ಎಂದು ಹೊಯಕೊಂಡರೂ ಅದ ಬಿಟ್ಟು ಅವನಪ್ಪನಿಗೂ ಅದು ನಡೆಯುವದಿಲ್ಲ. ಅದಕ್ಕಾಗಿ ಅವನು ಸಿಟ್ಟಿಗೆದ್ದು ಅದನ್ನು ಹಾಕಿಕೊಂಡು ಹೊಡೆಯುತ್ತಾನೆ. ಅದಾದರೂ ನನ್ನಂತೆ ಅವನ ಹೊಡತದ ಸಲುವಾಗಿ ಬೇಸತ್ತು ಹೋಗಿರುತ್ತದೆ. "**ಕದ್ದ ರೊಟ್ಟಿ ಬೇರೆ, ದೇವರ ಪ್ರಸಾದ ಬೇರೆ**" ಎಂಬಂತೆ ನನಗೆ ದಿನಾಲು ಸಿಗುವ ಹೊಡತಗಳಲ್ಲದೆ ಕುದುರೆಯ ಸಲುವಾಗಿ ಅದರ ಕೂಡ ನಾನೂ ಹೊಡತಗಳನ್ನು ತಿಂದು ತಿಂದು ಸಾಕಾಗಿರುತ್ತದೆ. ನನ್ನ ಮೈಯೆಲ್ಲ ಹಣ್ಣಾಗಿದ್ದು ನೋಯಿಸಹತ್ತಿರುತ್ತದೆ. ಇದಲ್ಲದೆ ಇವತ್ತಿನ ಚಳಿಯಾದರೂ ಸಾಮಾನ್ಯ ಚಳಿಯೇ! ಮೈಯೆಲ್ಲ ಸೆಡು ಹತ್ತಿ ಹೋಗಿರುತ್ತದೆ. ನನಗೆ ಹೊತ್ತುಕೊಳ್ಳುವದಕ್ಕೆ ಒಂದು ಗಟ್ಟಿಯಾದ ಕಂಬಳಿ ಸಹಿತ ಇಲ್ಲ. ನಮ್ಮ ಅಪ್ಪನ ಅವಸರದ ಸಲುವಾಗಿ ಅದನ್ನು ಸಹ ನನಗೆ ತರಲಿಕ್ಕೆ ಆಗಲಿಲ್ಲ. ಈ ಚಳಿಯ ದೆಸೆಯಿಂದ ನನ್ನ ಹಲ್ಲುಗಳು ಗಟಗರಿಸಿ ಹೋಗಿರುತ್ತವೆ. ನಾಲಿಗೆಯು ಬಿಗಿದು ಹೋಗಿ ಅಂಟಿನಂತೆ

ಜಿಗಟು ಆಗಿರುತ್ತದೆ. ನನ್ನ ಹೊಟ್ಟೆಯು ಸಹಿತ ನಡುಗಲಿಕ್ಕೆ ಹತ್ತಿರುತ್ತದೆ. ಇಷ್ಟಾದರೂ ನಮ್ಮಪ್ಪನಿಗೆ ನನ್ನ ಸಲುವಾಗಿ ಏನಾವರೂ ಕರುಣ ಬರುವದೇ? ಇಲ್ಲ. "ನೀಲಾ, ಮುಂಚೆ ಓಡಿ ಹೋಗಿ ಮನೆಯೊಳಗೆ ಅಗ್ಗಿಷ್ಟಿಗೀ ಮಾಡಿಸಿ ತುಂಬಿಡು. ಚಳಿ ಬಹಳ ಹತ್ತಿರುತ್ತದೆ" ಎಂದು ನನ್ನನ್ನು ಓಡಿಸಿಕೊಟ್ಟನು. (ಉಸರುಗಳೆದು) ನಾನು ಈ ಪ್ರಕಾರ ನನ್ನ ಹೊಟ್ಟೆಯೊಳಗಿನ ಕಿಚ್ಚು ತೋಡಿಕೊಳ್ಳುತ್ತ ನಿಂತರೆ ಈಗ ಆ ಯಮನು ಬಂದು ತಿರುಗಿ ನನಗೆ ಲತ್ತೀ ಹಾಕಿಯಾನು ಆದುದರಿಂದ ಬೇಗ ಹೋಗಿ ಬೆಂಕೀ ಮಾಡಿಸಿ ಕಾಸಿಕೊಳ್ಳೋಣ. ನನಗೆ ಚಳಿಯು ಬಹಳ ಹತ್ತಿರುತ್ತದೆ. (ಮೈ ನಡುಗಿಸುತ್ತಾನೆ.) ತಿಪ್ಪಾ, ಎಲೇ ತಿಪ್ಪಾ, ಎಲೇ ಮುಂಡೇಮಗನೇ, ತಿಪ್ಪಾ! ಹೊರಗೆ ಎಷ್ಟು ಚಳಿ ಬಿದ್ದಿರುತ್ತದೆ ನೋಡು. ಮಗನೇ, ಕಂಬಳೀ ಮುಸಕು ತೆಗೆದು ಹೊರಗೆ ಬಾ. ಮುದುಕನಾದ ನಾನು ಚಳಿ ಹತ್ತಿ ಸೆಟೆದು ಹೋಗಲಿಕ್ಕೆ ಹತ್ತಿರುತ್ತೇನೆ. ಸತ್ತೀಯೋ? ಜೀವಂತ ಇರುವಿಯೋ? ಉತ್ತರಮಾಡಿ ಬಾ. ಬಾಗಿಲ ತೆರೆ. ಇಲ್ಲದಿದ್ದರೆ ನಿನ್ನ ತೊಗಲು ಸುಲಿದೇನು. (ಬಾಗಿಲವನ್ನು ಸಪ್ಪಳ ಮಾಡುತ್ತಾನೆ) (ತಿಪ್ಪನು ಹೊರಗೆ ಬರುತ್ತಾನೆ.)

**ತಿಪ್ಪಾ**—ಯಾರಲೇ ಅವ ಇಷ್ಟು ಒದರುವವ? (ಕಣ್ಣು ತಿಕ್ಕುತ್ತ) ಆ. ನಮ್ಮ ಹಿರಿಯನೇನು? ಯಾವಾಗ ಬಂದೆಯೋ ನೀಲಪ್ಪಾ? ನಿನ್ನ ಧ್ವನಿಯು ಗುರುತು ನನಗೆ ಏನೂ ಹತ್ತಲಿಲ್ಲ ನೋಡು. ನಿನಗೆ ಆಗಿರುವದಾದರೂ ಏನು? ಇಷ್ಟೇಕೆ ರವಸಿಗೆದ್ದಿರುತ್ತೀ? ಮತ್ತು ಧನಿಯರನ್ನು ಎಲ್ಲಿ ಬಿಟ್ಟು ಬಂದೆ? ಅವ್ವನವರು ಎಲ್ಲಿ ಇರುತ್ತಾರೆ? ಹೋದ ಕೆಲಸವು ಎಲ್ಲ ನೀಟಾಯಿತೇ?

**ನೀಲಾ**—ಎಲೇ ಇತ್ತಲಾಗ ಬಾ ಮೊದಲು. ನಿನಗೆ ಎಲ್ಲಾ ಹೇಳುತ್ತೇನೆ. (ತಿಪ್ಪನು ಬರುತ್ತಾನೆ. ನೀಲನು ಅವನಿಗೆ ಒಂದೆರಡು ಕೋರಡೆ ಹೊಡೆಯುತ್ತಾನೆ.) ಮಗನೇ, ಕತ್ತೆಯಮಗನೇ, ನಾನು ಚಳಿಯ ಸಲುವಾಗಿ ಸಾಯಲಿಕ್ಕೆ ಹತ್ತಿರುತ್ತೇನೆ. ನಿಂದೇನು ಕಿಟಕಿಟ ಹಚ್ಚಿರುತ್ತೀ? ಅವ ಎಲ್ಲಿದ್ದಾನೆ, ಆಕೆ ಎಲ್ಲಿದ್ದಾಳೆ, ಅವನದೇನಾಯಿತು, ಆಕೆಯದೇನಾಯಿತು ಎಂದು **ಒಡಕು ಗಡಿಗೆಯಲ್ಲಿ ನೊಣ ಹೊಕ್ಕಂತೆ** ಏಕೆ ವಟವಟ ಹಚ್ಚಿರುವೆ? ಈಗಾದರೂ ಎಚ್ಚರಿಕೆಯ ಮೇಲೆ ಬಂದೆಯೋ? ಇಲ್ಲದಿದ್ದರೆ ಮತ್ತೊಂದು ಕೊಡಲೋ?

**ತಿಪ್ಪಾ**—ಬೇಡ, ಬೇಡ. ನನಗೆ ಇಷ್ಟೇ ಸಾಕು. ಆದರೆ ಇವತ್ತು ನಿನ್ನ ಮಾತು ಇಷ್ಟೇಕೆ ಬಿರಸು ಬರಲಿಕ್ಕೆ ಹತ್ತಿವೆ?

**ನೀಲಾ**—ಎಲೇ ಮಗನೆ, ನಾನು ಅಲ್ಲ, ನನ್ನ ದೆವ್ವ ನಿನ್ನ ಮುಂದೆ ನಿಂತಿರುತ್ತದೆಂದು ತಿಳಿದುಕೋ. ನಾನು ಚಳಿಯ ದೆಸೆಯಿಂದ ದಾರಿಯಲ್ಲಿ ಸತ್ತು ಹೋಗಿ ಹೆಣ ಆಗಿರುತ್ತೇನೆ. ಬೇಕಾದರೆ ನನ್ನ ಮೈಗೆ ಕೈ ಮುಟ್ಟಿ ನೋಡು. ನನ್ನ ಮೈಯೆಲ್ಲ ಆಣೇಕಲ್ಲಿನಂತೆ ಜುಣುಗುಡುತ್ತದೆ. ಬೆಂಕಿಯಂಥ ಅಪ್ಪನವರು ಸಹಿತ ಈ ಚಳಿಯ ದೆಸೆಯಿಂದ ಬೆಣ್ಣೆಯಕಿಂತ ಮೆತ್ತಗೆ ಆಗಿ ಹೋಗಿರುತ್ತಾರೆ. ಅಪ್ಪನವರ ಕಾಲಂತೂ ತಣ್ಣಗಾಗಿ ಹೋಗಿರುತ್ತವೆ.

**ತಿಪ್ಪಾ**—ಹೂ. ಬಹಳ ಕೆಟ್ಟದಾಯಿತು. ಈಗೀಗ ಮದುವೆಯಾಗಿತ್ತು. ಇಷ್ಟು ಬೇಗನೆ ಇಂಥ ಕೆಟ್ಟಪ್ರಸಂಗವು ಬರತಕ್ಕದ್ದಿದ್ದಿಲ್ಲ. **(ಎಂದು ಅಳುತ್ತಾನೆ.)**

**ನೀಲಾ**—ಥೂ ಕತ್ತೇ. ಕೈಕಾಲು ತಣ್ಣಗಾಗಿರುತ್ತವೆಂದು ನಾನು ಅಂದ ಕೂಡಲೆ ಅಪ್ಪನವರು ಸತ್ತರೆಂದು ತಿಳಿದೇನು ? ಅವರು ಜೀವದಿಂದ ಇರುತ್ತಾರೆ. ಆದರೆ ಚಳಿಯ ಸಲುವಾಗಿ ಅವರ ಕೈಕಾಲುಗಳು ಸೆಟೆದು ಹೋಗಿರುತ್ತವೆ. ಅವು ಏನೂ ಮಿಸಕಾಡುವದಿಲ್ಲ. ಮೊದಲಿಗೆ ಅವರು ಎಷ್ಟಾರೆ ಲುಟುಪುಟು ಜಿಗಿದಾಡುತ್ತಿದ್ದರು ? ಆದರೆ ನೀನು ಅದನ್ನೆಲ್ಲ ತಕ್ಕೊಂಡು ಏನು ಮಾಡುತ್ತೀ ? ಹೀಗೆ ಹರಟೆ ಹೊಡೆಯುತ್ತ ನಿಂತುಕೊಳ್ಳಬೇಡ. ಮೊದಲಿಗೆ ಹೋಗಿ ಮನೆಯಲ್ಲಿ ಉರಿ ಮಾಡಿ ಬೆಂಕೀ ಮಾಡು. ಇದಕ್ಕೆ ನೀನು ತಪ್ಪಿದರೆ ಧನಿಯು ಬಂದವನೇ ನಿನ್ನನ್ನು ಹುರಕಡ್ಲಿಯಂತೆ ಹುರಕೊಂಡು ತಿಂದಾನು. ಬಲು ಎಚ್ಚರಿಕೆ.

**ತಿಪ್ಪಾ**—ಹಿರಿಯಾ ? ನೀನು ಇವತ್ತ ಬಾವಾನ ಮಠದೊಳಗೆ ಹೋಗಿ ಚಿಲಮೀಗಿಲಮಿ ಸೇದಿ ಬಂದಿರುವೆಯಾ ? ನಾನು ಮನೆಯಲ್ಲಿ ಉರಿ ಮಾಡಿ ಮನೆಗೆ ಬೆಂಕೀ ಹಚ್ಚಬೇಕೇನು ? ಒಳ್ಳೇ ಬುದ್ಧಿವಂತಿಕೆಯ ಮಾತು ಹೇಳುತ್ತೀ.

**ನೀಲಾ**—ಯಾಕಲೆ ಮಗನೇ, ಬಹಳ ಬಾಯಿ ಬಿಡುತ್ತೀ ? ನಿಮ್ಮಪ್ಪ ಚಿಲಮಿಗಿಲಮಿ ಸೇದಿದ್ದಾನು. ನಿನ್ನ ಮೈಯೊಳಗೆ ಸೊಕ್ಕು ಬಹಳ ಬಂದಿರುವಂತೆ ಕಾಣುತ್ತದೆ. ಸ್ವಲ್ಪ ನಿಲ್ಲು. ನಿನ್ನ ಸೊಕ್ಕು ಬೇಗನೆ ಇಳಿಸುತ್ತೇನೆ. ನಾನು ನಾನು ಬಂದು ಒಂದು ತಾಸು ಹೊತ್ತಾಯಿತು. ನಾನು ಚಳಿಯ ಸಲುವಾಗಿ ನಡುಗಲಿಕ್ಕೆ ಹತ್ತಿರುತ್ತೇನೆ. ನೀನು ಚತಗೋಷ್ಟಿ ಬಡೆಯುತ್ತ ನಿಂತಿರುತ್ತೀ. ನಿನಗೇನಾದರೂ ರೀತಿನಡತೆ ಗೊತ್ತದೆಯೋ ? " ಒಳಗೆ ಬಾ ಹಿರಿಯಾ. ಕೂತುಕೋ. ಕೈಕಾಲು ಸ್ವಲ್ಪ ಒತ್ತಲಿಯೋ ? ಎಲಿ ತಂಬಾಕು ತಿನ್ನು. ಬೆಂಕೀ ಕಾಸಿಕೋ " ಅನ್ನಬೇಕಾಗಿತ್ತೋ ಇಲ್ಲೋ ? ಎಂಥ ಉಪಕಾರಗೇಡಿಯೋ ನೀನು ?

**( ಎಂದು ಕೊಡಲಿಯಿಂದ ಹೊಡೆಯುತ್ತಾನೆ. )**

**ತಿಪ್ಪಾ**—ತಪ್ಪಾಯಿತು. ತಪ್ಪಾಯಿತು. ಕ್ಷಮಿಸು. ಆದರೆ ಅಪ್ಪನವರು ಬಹಳ ಸಿಟ್ಟಿನವರು ಇರುತ್ತಾರಂತೆ. ಹೌದೋ?

**ನೀಲಾ**—ಅವರ ಸಿಟ್ಟು ಮೊದಲಿಗೆ ಬೆಂಕಿಯ ಕೆಂಡದಂತೆ ಇತ್ತು. ಈಗ ಅದು ಈ ಚಳಿಯ ದೆಸೆಯಿಂದ ಆರಿದ ಬೂದಿಯಂತೆ ಆಗಿರುತ್ತದೆ. ಆದರೆ ನೋಡು. ಬಹಳ ಮಾತಾಡಿ ವೇಳೆ ಕಳೆಯಬೇಡ. ಬೇಗನೆ ಬೆಂಕೀ ಮಾಡಿ ಅಗ್ಗಿಷ್ಟಿಗೆಯನ್ನು ತುಂಬಿಡು. ಧನಿಯು ಬಂದವನೇ ಕಾಸಿಕೊಳ್ಳಲಿಕ್ಕೆ ಅಗ್ಗಿಷ್ಟಿಗೆಯನ್ನು ಬೇಡುತ್ತಾನೆ. ಇನ್ನೂ ಬೆಂಕೀ ಮಾಡಿಲ್ಲವೆಂದು ನೀನು ಹೇಳಿದರೆ ಅವನು ಬೆಂಕಿ ಬೆಂಕಿ ಆಗುತ್ತಾನೆ, ಹಿಂದುಗಡೆ ನೋಡಿಕೋ. ಅವನ ಬಾರಕೋಲಿನ ಪೆಟ್ಟು ಬಿದ್ದರೆ ನೀನು ತಿಂಗಳಾನು ತಿಂಗಳ ಮೈಗೆ ಎಣ್ಣೀ ಹಚ್ಚಿ ಕಾಸಿಕೊಳ್ಳಬೇಕಾದೀತು.

**ತಿಪ್ಪಾ**—ನೀಲಣ್ಣಾ, ನೀನು ಇವತ್ತ ಬಹಳ ಮೋಜಿನ ಮಾತು ಆಡಲಿಕ್ಕೆ ಹತ್ತಿರುತ್ತೀ. ನಮ್ಮ ಧನಿಯು ಎಂಥವನೆಂಬುವದು ನನಗೇನು ಗೊತ್ತಿಲ್ಲವೇ?

**ನೀಲಾ**—ಎಲೇ, ಅಗ್ಗಿಷ್ಟಿಗೆಯು ಸಿದ್ಧವಿರುತ್ತದೋ ಇಲ್ಲೋ ಮೊದಲಿಗೆ ಬೊಗಳು.

**ತಿಪ್ಪಾ**—ಹಿರಿಯಾ? ಅದರದೇಕೆ ನಿನಗೆ ಚಿಂತೆ? ಧನಿಯು ಬರಲಿ, ಅಪ್ಪನವರು ಬರಲಿ, ಅವರಿಬ್ಬರ ಸಂಗಡ ಇನ್ನೂ ಹತ್ತಿಪ್ಪತ್ತು ಮಂದಿ ಬರಲಿ. ಅವರನ್ನೆಲ್ಲ ಪುಟ್ಕಾಪೂರಾ ಸುಡುವಷ್ಟು ಬೆಂಕಿಯನ್ನು ಅಗ್ಗಿಷ್ಟಿಗೆಯಲ್ಲಿ ತುಂಬಿಟ್ಟಿರುತ್ತೇನೆ. ಆದರೆ ಮದುವೆಯು ಯಾವ ಯಾವ ರೀತಿಯಿಂದ ಆಯಿತು ಎಂಬದನ್ನು ನನಗೊಂದಿಷ್ಟು ಹೇಳುವದಿಲ್ಲವೇ?

**ನೀಲಾ**—ಅದನ್ನೆಲ್ಲ ನಾನು ಹಿಂದುಗಡೆ ಹೇಳುತ್ತೇನೆ. ಬೆಂಕಿಯ ಚಿಂತೆಯಂತೂ ಬಿಟ್ಟುಹೋಯಿತು. ಇನ್ನು ಮನೆಯೆಲ್ಲ ಕಸ ಉಡುಗಿ ಸಾರಿಸಿ ಜಳಜಳ ಇಟ್ಟಿರುವಿಯೋ ಇಲ್ಲೋ ನೋಡು. ಮತ್ತು ಹಾಸಿಗೆಯನ್ನು ಬಿಸಿಲಲ್ಲಿ ಒಣ ಹಾಕಿ ಅದರ ಮೇಲೆ ಬೆಳ್ಳಗಿನ ಚಾದರವನ್ನುಹಾಸಿರುವಿಯೋ ಇಲ್ಲೋ ಚೆನ್ನಾಗಿ ನೋಡು.

**ತಿಪ್ಪಾ**—ಅವನ್ನೆಲ್ಲ ನಾನು ಮೊದಲೇ ಮಾಡಿ ಮುಗಿಸಿರುತ್ತೇನೆ. ನನ್ನ ಕೆಲಸ ಬೊಗಸೆಯಲ್ಲಿ ಜನ್ಮಜನ್ಮಕ್ಕೂ ತಪ್ಪು ಆಗಲಾರದು. ನಾನು ನಿನ್ನ ಕೈಯೊಳಗೆ ನುರಿತಿದ್ದು ನನ್ನಲ್ಲಿ ತಪ್ಪು ಆರಿಸುವವನ ಎದೆ ಏನಾದೀತು? ಆದರೆ ಮದುವೆಯಲ್ಲಿ ಏನೇನು ನಡೆಯಿತು, ಯಾರುಯಾರು ಬಂದಿದ್ದರು ಎಂಬದನ್ನು ನನಗೆ ಹೇಳಬಾರದೇ?

**ನೀಲಾ**—ಒಳ್ಳೇದು. ಹಾಗಾದರೆ ಕೇಳು. ಮದುವೆಯಂತೂ ಹಸನಾಯಿತು; ಆದರೆ ಹೋಳಿಗಿ ಮಾತ್ರ ಇಲ್ಲ. ದಾರಿಯಲ್ಲಿ ಆದ ಮೋಜು ಹೇಳುತ್ತೇನೆ, ಕೇಳು.

ಕುದುರೆಯು ದಾರೀ ನಡೆದು ನಡೆದು ಬಹಳ ದಣಿದಿತ್ತು. ಅದಕ್ಕಾಗಿ ಧನಿಯೂ ಅವ್ವನವರೂ ಕುದುರೆಯು ಮೇಲಿಂದ ಬಿದ್ದರು!

**ತಿಪ್ಪಾ**—ಅದು ಹೇಗೆ ಬಿದ್ದರು? ಮದುವೆಯ ಮನೆಯಲ್ಲಿ ಹೋಳಿಗಿಯು ಸಿಗಲಿಲ್ಲೆಂದು ಹಸಿವೆಯಾಗಿ ಬಿದ್ದರೇನು?

**ನೀಲಾ**—ಎಲಾ ಕತ್ತೆಯಮಗನೆ, ಇಷ್ಟು ನಿನಗೆ ತಿಳಿಯಲೊಲ್ಲದೇ? ಕುದುರೆಯು ದಾರಿಯನ್ನು ನಡೆಯಲಾರದೆ ಮೊದಲಿಗೆ ಬಿತ್ತು. ಅದರ ಮೇಲೆ ಅವ್ವನವರು ಬಿದ್ದರು. ಅವ್ವನವರ ಮೇಲೆ ಅಪ್ಪನವರು ಬಿದ್ದರು.

**ತಿಪ್ಪಾ**—ಅಪ್ಪನವರು ಅವ್ವನವರ ಮೇಲೆ ದಾರಿಯಲ್ಲಿಯೇ ಬಿದ್ದುಕೊಂಡರೇ?

**ನೀಲಾ**—ಮಗನೇ, ಕುದುರೆಯು ಕೆಡವಿದ ಮೇಲೆ ಬೀಳದೆ ಏನು ಮಾಡಿಯಾರು?

**ತಿಪ್ಪಾ**—ಅವ್ವನವರದೂ ಅಪ್ಪನವರದೂ ಕೈಮೈ ಕೆತ್ತಿ ಹೋಗಿ ನೆತ್ತರ ಬಂದಿದ್ದೀತಲ್ಲ? ಅಯ್ಯೋ ಪಾಪ!

**ನೀಲಾ**—ನಿನ್ನ ಕಿವಿ ಮುಂದೆ ಮಾಡು. ಹೇಳುತ್ತೇನೆ.

**ತಿಪ್ಪಾ**—(ಕಿವಿ ಮುಂದೆ ಮಾಡಿ) ಹೂಂ. ಏನು ಹೇಳುತ್ತೀ ಹೇಳು. (**ನೀಲನು ಅವನ ಕಿವಿ ಹಿಂಡಿ ಕಪಾಳ ಮೇಲೆ ಹೊಡೆಯುತ್ತಾನೆ.**) ಎಲೆಲೆಲೇ, ನೀನು ಹಿರಿಯನಾಗಿ ಈ ಪ್ರಕಾರ ನನ್ನನ್ನು ಮೋಸ ಮಾಡಬೇಕೇ?

**ನೀಲಾ**—ಕತ್ತೆಯಮಗನೆ, ನೀನು ಸಣ್ಣವನಾಗಿ ಸುಮ್ಮನೆ ಹಲ್ಲೊಳಗೆ ನಾಲಿಗೆ ಇಟ್ಟುಕೊಂಡು ಕೇಳಬೇಕೋ? ಧನಿಯರಿಗೆ ಚೇಷ್ಟೆಯನ್ನು ಮಾಡಬೇಕೋ? ನೀನು ಸುಮ್ಮನೆ ಕೇಳಿದ್ದರೆ ನಾನು ಎಷ್ಟಾರೆ ಮೋಜು ಹೇಳುತ್ತಿದ್ದೆ?

**ತಿಪ್ಪಾ**—ಅಣ್ಣಾ, ನಿನ್ನಾಣೆಯೆಂದರೂ ನಾನು ಇನ್ನು ಮೇಲೆ ಚೇಷ್ಟೆ ಮಾಡುವದಿಲ್ಲ. ಇಬ್ಬರೂ ಒಮ್ಮೆಲೆ ಹೇಗೆ ಬಿದ್ದರು? ಹೇಳು.

**ನೀಲಾ**—ನಮ್ಮ ಧನಿಯು ಅವ್ವನವರನ್ನು ತನ್ನ ಮುಂದೆ ಕುದುರೆಯ ಮೇಲೆ ಕೂಡ್ರಿಸಿಕೊಂಡು ಬರುತ್ತಿದ್ದಾಗ್ಗೆ ಕುದುರೆಯ ಕಾಲು ಕೆಸರೊಳಗೆ ಸಿಗಬಿತ್ತು.

**ತಿಪ್ಪಾ**—ಇಬ್ಬರೂ ಒಂದೇ ಕುದುರೆಯ ಮೇಲೆ ಕೂತಿದ್ದರೇ? ಹೀಗೆ ಮಾಡಲಿಕ್ಕೆ ಧನಿಗೇನು ದರಿದ್ರತನವು ಹತ್ತಿತ್ತು? ಯಾತರ ಸಲುವಾಗಿ ಇಬ್ಬರೂ ಈ ಪ್ರಕಾರ ಕೂತುಕೊಂಡಿದ್ದರು?

**ನೀಲಾ**—ಮಗನೇ, ಇಬ್ಬರೂ ತಮ್ಮ ಪ್ರೀತಿಯ ಸಲುವಾಗಿ ಒಂದೇ ಕುದುರೆಯ ಮೇಲೆ ಕೂತುಕೊಂಡಿದ್ದರು. ಇದರಲ್ಲಿ ನಿಮ್ಮಪ್ಪನದಾಗಲಿ, ನಮ್ಮಪ್ಪನದಾಗಲಿ, ಏನು ಗಂಟು ಹೋಯಿತು ? ನೀನು ಈ ಪ್ರಕಾರ ಸಿಕ್ಕಸಿಕ್ಕ ಹಾಗೆ ನಡುವೆ ಬಾಯಿ ಹಾಕಲಿಕ್ಕೆ ಹತ್ತಿದರೆ ನಾನು ನಿನಗೆ ಮುಂದಿನ ಕಥೆಯನ್ನು ಹೇಳುವದಿಲ್ಲ. ನೀನು ಸುಮ್ಮನೆ ಕೇಳಿದ್ದರೆ ಅವ್ವನವರು ಹೇಗೆ ಬಿದ್ದರು, ಅಪ್ಪನವರು ನನ್ನ ಮೇಲೆ ಹೇಗೆ ಸಿಟ್ಟಿಗೆದ್ದು ನನಗೆ ಧಪಧಪ ಹೊಡೆಯಲಿಕ್ಕೆ ಹತ್ತಿದರು, ಆಗ ಅವ್ವನವರು ಹೇಗೆ ಅಳಲಿಕ್ಕೆ ಹತ್ತಿ ಅಪ್ಪನವರ ಕಾಲು ಬಿದ್ದು ನನ್ನನ್ನು ಬಿಡಿಸಿಕೊಂಡರು ಎಂಬುದನ್ನು ಹೇಳುತ್ತಿದ್ದೆ. ಅದು ಬಹಳೇ ಮೋಜು ಇತ್ತು. ಇನ್ನು ಮೇಲೆ ನಿನಗೆ ಅದರೊಳಗಿನ ಒಂದು ಅಕ್ಷರವನ್ನು ಸಹ ಹೇಳಲಾರೆನು.

**ತಿಪ್ಪಾ**—ನೀಲಣ್ಣಾ, ನೀನು ಹೇಳದಿದ್ದರೆ ಬಿಡು. ನಿನಗೆ ನಾನು ಒಂದು ಮೋಜಿನ ಕಥೆಯನ್ನು ಹೇಳಲಿಯಾ ?

**ನೀಲಾ**—ಹ್ಞೂ. ಹೇಳು ಕೇಳೋಣ.

**ತಿಪ್ಪಾ**—ನಾನು ಕಥೆಯನ್ನು ಹೇಳುವಾಗ ನೀನು ಹ್ಞೂ ಅನ್ನುತ್ತಿರಬೇಕು. ತಿಳಿಯಿತೇ ?

**ನೀಲಾ**—ಹ್ಞೂ. ಆಗಲಿ.

**ತಿಪ್ಪಾ**—ಒಂದು ಊರಲ್ಲಿ ಒಬ್ಬ ಹಾಲಪ್ಪ ಮತ್ತು ಒಬ್ಬ ನೀಲಪ್ಪ ಈ ಪ್ರಕಾರ ಇಬ್ಬರು ಅಣ್ಣತಮ್ಮಂದಿರು ಇದ್ದರು. ನೀಲಪ್ಪ ಬಹಳ ಚಲೋ ಮನುಷ್ಯನು ಇದ್ದನು. ಅವನು ಎಲ್ಲ ಹುಡುಗರಿಗೆ ತನ್ನ ಹತ್ತರ ಕೂಡ್ರಿಸಿಕೊಂಡು ಕಥೆ ಹೇಳಿ ಅವರನ್ನು ಬಹಳ ನಗಿಸುತ್ತಿದ್ದನು. ಆದರೆ ಅವನಿಗೊಂದು ಕೆಟ್ಟ ನಡತೆಯು ಸೇರಿತ್ತು. ಆ ನಡತೆಯ ಸಲುವಾಗಿ ಜನರೆಲ್ಲರು ಬಹಳ ಬೇಸತ್ತು ಹೋಗಿದ್ದರು. ಅವನಿಗೆ ಅನೇಕ ಮಂದಿ ದಿನಾಲು ನಿನ್ನ ನಡತೆ ಬಿಡಪ್ಪಾ ನಡತೆ ಬಿಡು ಎಂತ ಹೇಳುತ್ತಿದ್ದರು. ಆದರೆ ಅವನು ಅವರ ಮಾತು ಎಂದೂ ಕೇಳಲಿಲ್ಲ.

**ನೀಲಾ**—ಅದು ಯಾವ ನಡತೆಯೋ ?

**ತಿಪ್ಪಾ**—ಎರಡನೇದ್ದು ಯಾವದು ? ಸುಳ್ಳು ಮಾತಾಡುವದು.

**ನೀಲಾ**—(ಸಿಟ್ಟಿನಿಂದ) ಮಗನೇ, ನಾನು ಸುಳ್ಳು ಮಾತಾಡುತ್ತೇನೋ ?

**ತಿಪ್ಪಾ**—"ತ್ರಾಟಿಕವ್ವನವರು ಬಹಳ ಕೆಟ್ಟವರು. ಅವರು ಮೊಸರು ಒಣ ಸಾಕಿ ಜಗಳ ತೆಗೆಯುತ್ತಾರೆ. ಮುಂದಿಗೆಲ್ಲ ಬೈಯ್ಯುತ್ತಾರೆ. ಹೊಡೆಯುತ್ತಾರೆ."ಎಂದು ಊರೆಲ್ಲ ಮಾತಾಡುತ್ತಾರೆ. ಹೀಗಿದ್ದು ನೀನು ನಿನ್ನನ್ನು ಬಿಡಿಸುವ ದೆಸೆಯಿಂದ ಅವರು ಧನಿಯ ಕಾಲು ಬಿದ್ದರೆಂದು ಹೇಳುತ್ತೀ. ಇದು ಸುಳ್ಳೋ? ಸುಳ್ಳಿನ ಅಪ್ಪೋ? ನೋಡು, ನೋಡು. ನಿನ್ನ ಮೋರೆಯು ಹೇಗೆ ಜರ್ರನೆ ಇಳಿಯಿತು ?

**ನೀಲಾ**—ಒಳ್ಳೇದು ಬಾರಲೇ. ಇದರ ಸೇಡು ಯಾವಾಗಾದರೂ ತೀರಿಸಿ ಕೊಂಡೇನು. ಈಗ ಧನಿಯು ಬರುವ ಹೊತ್ತು ಆಗಿರುತ್ತದೆ. ಮನೆಯೊಳಗೆ ನೀವೆಲ್ಲರು ಏನೇನು ಕೆಲಸ ಮಾಡಿರುತ್ತೀರಿ ನೋಡೋಣ. ನಿನ್ನ ಕೂಡ ಕೆಲಸ ಮಾಡುವ ಆಳುಗಳನ್ನು ಕರೆಸು.

**ತಿಪ್ಪಾ**—ಎಲೇ ಕಲ್ಲಾ, ಮಲ್ಲಾ, ಭೀಮಾ, ಇತ್ತಲಾಗ ಬನ್ನಿರೋ ಬನ್ನಿರಿ. ನೀಲಪ್ಪ ಹಿರಿಯನು ಬಂದಿರುತ್ತಾನೆ. ಅವನಿಗೆ ಶರಣು ಮಾಡಬರ್ರಿ. ಮತ್ತು ಧನಿಯೂ ಅವ್ವನವರೂ ಈಗ ಬರತಕ್ಕವರಿದ್ದಾರೆ. ಅವರನ್ನು ಇದಿರುಗೊಂಡು ಕರಕೊಂಡು ಬರುವದಿಲ್ಲೇನು ?

**ನೀಲಾ**—ಏನಲೇ, ಅಪ್ಪನವರನ್ನು ಇದಿರುಗೊಂಡು ಏತಕ್ಕೆ ಕರೆಯಲಿಕ್ಕೆ ಹೋಗಬೇಕು? ಅವರಿಗೇನು ಮನೆಯು ಗೊತ್ತಿಲ್ಲೇ? ಮನೆಯ ದಾರಿ ಗೊತ್ತಿಲ್ಲೇ? ಅವರನ್ನು ಇದಿರುಗೊಂಡು ಕರಕೊಂಡು ಬರಬೇಕೆಂದು ಅಪ್ಪಣೆಯನ್ನು ಮಾಡ ಲಿಕ್ಕೆ ನೀನು ಯಾರಲೇ? ಧನಿಯ ಮುಂದೆ ಲುಟುಲುಟು ಓಡಾಡಿ ಜಂಭ ಬಡೆದು ನನ್ನ ಕೆಲಸಕ್ಕೆ ಬರಬೇಕೆನ್ನುತ್ತಿ ಹೌದೋ? ನಿಲ್ಲು, ನನ್ನ ಕೈ ತೋರಿಸುತ್ತೇನೆ. (**ಕೋರಡೆಯಿಂದ ಹೊಡೆಯುತ್ತಾನೆ.**)

**ತಿಪ್ಪಾ**—ಇದೇನೋ ಹಿರಿಯಾ? ನಾನು ನಿನಗೆ ಏನು ಮಾಡಿದೆ? (**ಎಂದು ಅವನ ಮೈಗೆ ತೆಕ್ಕಿ ಬೀಳುತ್ತಾನೆ.**)

( **ಮೂರು ಮಂದಿ ಆಳುಮನುಷ್ಯರು ಬರುತ್ತಾರೆ.** )

**ಒಬ್ಬ ಆಳುಮನುಷ್ಯ**—ನಾಯಕರೇ, ಶರಣರೆಪ್ಪಾ ಶರಣು. ( **ಎರಡನೆ ಆಳುಮನುಷ್ಯನಿಗೆ**) ಏನಿರೋ ನೋಡಿರಿ. ನಾವೂ ಅವನಿಗೆ ತೆಕ್ಕಿ ಬೀಳೋಣ ನಡೆ ಯಿರಿ. ( **ಎಲ್ಲರು ತಿಪ್ಪನಿಗೆ ತೆಕ್ಕಿ ಬೀಳುತ್ತಾರೆ.** )

**ನೀಲಾ**— ಏನಿರಲೇ, ನೀವೆಲ್ಲರೂ ನನಗೆ ಹೊಡಿಯುವ ಹಂಚಿಕೆ ಮಾಡಿರುತ್ತೀರೇನು ? ಹಿಂದಕ್ಕೆ ಸರಕೊಳ್ಳಿರಿ. ಇಲ್ಲದಿದ್ದರೆ ನಿಮ್ಮೆಲ್ಲರ ಬೆನ್ನ ಮೇಲೆ ಬಾಸಾಳ ಮೂಡಿಸೇನು. ಎಚ್ಚರಿಕೆ. ನನ್ನ ಕೈಯಲ್ಲಿ ಚಬಕ ಹೇಗಿರುತ್ತದೆ ? ನೋಡಿರಿ.

**ಪ್ರತಾಪರಾವ**—(ಬಾಗಿಲದ ಹೊರಗಿನಿಂದ) ಎಲಾ ನೀಲಾ, ತಿಪ್ಪಾ, ಎಲಾ ಕೃತಘ್ನರೇ, ಚಾಂಡಾಲರೇ ! ನೀವೆಲ್ಲರು ಎಲ್ಲಿ ಹೊರಟು ಹೋದಿರಿ ?

**ಎಲ್ಲರು**— ಆ ? ಧನಿಯರು ಬಂದರೆಂದು ಕಾಣುತ್ತದೆ. ನಾವು ಅವರ ಮುಂದೆ ಹೋಗಲಿಕ್ಕೆ ಎಂದೂ ಒಲ್ಲೆವು. ( ನಾಲ್ಕು ಮುಂದಿ ನಾಲ್ಕು ಕಡೆಗೆ ಅಡಗಿಕೊಳ್ಳಲಿಕ್ಕೆ ಓಡಿಹೋಗುತ್ತಾರೆ. ನೀಲನು ಒಂದು ಮೂಲಿಯಲ್ಲಿ ಹೋಗಿ ನಿಲ್ಲುತ್ತಾನೆ. )

(ಪ್ರತಾಪರಾಯನೂ ತ್ರಾಟಿಕೆಯೂ ಬರುತ್ತಾರೆ.)

**ಪ್ರತಾಪರಾವ**— ಎಲೋ, ನನ್ನ ಯಾವತ್ತು ಆಳುಗಳು ಎಲ್ಲಿ ಹೋದರು ? ಎಲ್ಲರು ಕೃತಘ್ನರೇ ! ನಾನು ಇಲ್ಲಿಂದ ಹೊರಡುವ ಸಮಯದಲ್ಲಿ ಅವರೆಲ್ಲರಿಗೆ "ನಾವು ಬರುವ ಹೊತ್ತಿಗೆ ನೀವು ನಿಮ್ಮ ನಿಮ್ಮ ಸ್ವಚ್ಛವಾದ ಮತ್ತು ಸುಂದರವಾದ ಬಟ್ಟೆಗಳನ್ನು ತೊಟ್ಟುಕೊಂಡು ನನ್ನ ಹೃದಯಸ್ವಾಮಿನಿಯಾದ ನಿಮ್ಮ ರಾಣಿಯನ್ನು ಸ್ವಾಗತಮಾಡುವಗೋಸ್ಕರ ಬಹಿರ್ದ್ವಾರದಲ್ಲಿ ಕಾದುಕೊಂಡು ನಿಂತಿರಬೇಕು" ಎಂಬದಾಗಿ ಅಪ್ಪಣೆಯನ್ನು ಮಾಡಿದ್ದೆನು. ಈ ನನ್ನ ಗೃಹಲಕ್ಷ್ಮಿಯ ಆಗಮನದಿಂದ ಈ ಹೊತ್ತು ನನ್ನ ಭಾಗ್ಯೋದಯವಾದ ಕಾರಣ ಇವಳ ಗೃಹಪ್ರವೇಶವು ಎಂಥ ವಿಜ್ರಂಭಣೆಯಿಂದ ಜರುಗತಕ್ಕದ್ದು ! ಈ ಸಮಾರಂಭದ ಪೂರ್ವಸಿದ್ಧತೆಯನ್ನು ಮಾಡುವದಕ್ಕಾಗಿ ನಾನು ಬೇಕಂತೇ ನೀಲನನ್ನು ಮುಂದಕ್ಕೆ ಅಟ್ಟಿಕೊಟ್ಟೆನು. ಆ ಕತ್ತೆಯು ಸಹ ಎಲ್ಲಿಯೂ ಕಾಣಿಸುವದಿಲ್ಲ. ಪ್ರಿಯೇ, ಈ ಆಳು ಜನರ ಮೂರ್ಖತನಕ್ಕಾಗಿ ನನಗೆ ಬಹಳ ವ್ಯಸನವಾಗುತ್ತದೆ ! ತಡೆಯಿರಿ, ಕಳ್ಳರಿರಾ ! ಈಗ ನಾನು ಒಬ್ಬೊಬ್ಬರ ಬೆನ್ನು ತೊಗಟಿಯನ್ನು ಸುಲಿದುಬಿಡುತ್ತೇನೆ. ( ಮಗ್ಗಲಿಗೆ ನೋಡಿ ) ಈ ಮೂಲಿಯಲ್ಲಿ ಕಳ್ಳನಂತೆ ಅಡಿಗಿಕೊಂಡಿರುವವನು ಯಾವನು ? ಎಲೇ ಇವನು ನೀಲಾ ! ಕತ್ತೇ, ಇತ್ತ ಮುಂದಕ್ಕೆ ಬಾ. (ಅವನನ್ನು ಮುಂದಕ್ಕೆ ಜಗ್ಗಿ ನಾಲ್ಕು ಸಾರೆ ಚಾಬೂಕಿನಿಂದ ಹೊಡೆಯುತ್ತಾನೆ. ಆಗ ಅವನು "ನಾ ಏನು ಮಾಡಿದೆನರಿ ?" ಎಂದು ಅಳುತ್ತಾ ಓಡಿ ಹೋಗುತ್ತಾನೆ. ಮಿಕ್ಕ ಆಳುಗಳನ್ನು ಒಬ್ಬೊಬ್ಬರನ್ನೇ ಚಾಬೂಕಿನಿಂದ ಹೊಡೆಯುತ್ತ ಮುಂದಕ್ಕೆ ತರುತ್ತಾನೆ.)

**ನೀಲಾ**—ಇದು ನೋಡಿರಿ. ಈ ಎಲ್ಲ ಕಳ್ಳರನ್ನು ನಿಮ್ಮ ಮುಂದೆ ತಂದು ನಿಲ್ಲಿಸಿರುತ್ತೇನೆ. ನಾನು ಮನೆಗೆ ಬಂದು ನೋಡುವಷ್ಟರಲ್ಲಿ ಇವರು ಏನೇನೂ ಕೆಲಸ ಮಾಡಿದ್ದಿಲ್ಲ. ನಾನೇ ಬಂದು ಬೆಂಕೀ ಕಾಸಿ ಅಗ್ಗಿಷ್ಟಗಿಯನ್ನು ಇಟ್ಟೆನು. ಮನೆಯ ಕಸವನ್ನು ಉಡುಗಿದೆನು. ಕೊಡ್ರಲಿಕ್ಕೆ ಹಾಸಿದೆನು. ಮತ್ತು ಇವರನ್ನೆಲ್ಲ ಒತ್ತಟ್ಟಿಗೆ ಕೂಡಿಸಿ—"ಈಗ ಧನಿಯರು ಬರುತ್ತಾರೆ. ಅವರನ್ನು ಇದಿರುಗೊಳ್ಳಲಿಕ್ಕೆ ಹೋಗಬೇಕು. ಅವ್ವನವರನ್ನು ಊದಿಸುತ್ತಾ ಬಾರಿಸುತ್ತಾ ಕರಕೊಂಡು ಬರಬೇಕು." ಎಂದು ಹೇಳಿ ಹೇಳಿ ಬಡಕೊಂಡೆನು. ಆದರೆ ಒಬ್ಬರೂ ನನ್ನ ಮಾತು ಕೇಳಲಿಲ್ಲ. ಒಬ್ಬವನು ತಲೆ ನೋಯುತ್ತದೆ ಅಂದನು. ಇನ್ನೊಬ್ಬನು ಕಾಲು ನೋಯುತ್ತದೆ ಅಂದನು. ಮೂರನೇಯವನು ರುಮಾಲ ಹರದಿರುತ್ತದೆ ಅಂದನು. ನಾಲ್ಕನೇಯವನು ತನ್ನ ಅಂಗಿ ಕಳವಾಗಿರುತ್ತದೆ ಅಂದನು. ಅಂದಮೇಲೆ ನಾನೇನು ಮಾಡಲಿ? ನನ್ನ ಕಡೆಗೆ ಏನು ತಪ್ಪು?

**ಪ್ರತಾಪರಾವ**—ಅದೆಲ್ಲವು ನಿಜ. ಆದರೆ ನಿನ್ನನ್ನು ಕಳ್ಳರು ಕದ್ದುಕೊಂಡು ಹೋಗಲಿಲ್ಲನಷ್ಟೇ? ಅಂದಮೇಲೆ ನೀನು ಏಕೆ ರಾಣೀಸಾಹೇಬರನ್ನು ಕುದುರೆಯ ಮೇಲಿಂದ ಕೆಳಗೆ ಇಳಿಸಿಕೊಳ್ಳಲಿಕ್ಕೆ ಬರಲಿಲ್ಲ? **( ಅವನ ಮೇಲೆ ಚಾಬೂಕವನ್ನು ಎತ್ತುತ್ತಾನೆ. )**

**ನೀಲಾ**—ಬೊಗಳಿರಿ. ಕಳ್ಳರಿರಾ! ಈಗ ಏಕೆ ಸುಮ್ಮನಾದಿರಿ? ಬಾಯಲ್ಲಿ ಚಂಡು ತುರಕಿಕೊಂಡಿರುತ್ತೀರೇನು? ಈಗ ನಿಮ್ಮ ಬಾಯೊಳಗಿನ ಚಂಡು ಒಂದೇ ಹೊಡತಕ್ಕೆ ಹೇಗೆ ಹೊರಬೀಳಿಸುತ್ತೇನೆ ನೋಡಿರಿ. **( ಮುಂದಕ್ಕೆ ಹೋಗಿ ಅವರನ್ನು ಚಾಬೂಕಿನಿಂದ ಹೊಡೆಯುತ್ತಾನೆ. ಅವರು ಹೌಹಾರಿ ದಿಕ್ಕೆಟ್ಟು ಒಳಗೆ ಓಡಿ ಹೋಗುತ್ತಾರೆ. ಈ ಗದ್ದಲದಲ್ಲಿ ಪ್ರತಾಪರಾಯನ ಚಾಬೂಕು ನೀಲನಿಗೂ, ನೀಲನ ಚಾಬೂಕು ಪ್ರತಾಪರಾಯನಿಗೂ ತಾಕುತ್ತವೆ. )** ಅಯ್ಯ—ಅಯ್ಯ—ಅಯ್ಯಯ್ಯೋ! ಧನಿಯರೇ, ನಿಮ್ಮ ಚಾಬೂಕಿನ ಪೆಟ್ಟು ನನಗೆ ಬಹಳ ತಾಕಿತು. ನನ್ನ ಮೈ ಹಸುರುಗಟ್ಟಿತು.

**ಪ್ರತಾಪರಾವ**—ಎಲೇ ಕಳ್ಳಾ, ನಿನ್ನ ಕೊರಡೆಯು ನನಗೆ ತಾಕಿದ್ದನ್ನು ಮರಿಸುವದಕ್ಕಾಗಿ ಈ ಪ್ರಕಾರ ಸೋಗುಮಾಡುತ್ತಿಯಾ? ಒಳ್ಳೇದು, ಹೋಗು. ಅದರ ವಿಚಾರ ಮಾಡುವದು ಈ ಸಮಯವಲ್ಲ. ನನ್ನ ಪ್ರಿಯಳಿಗೆ ಬಹಳ ಹಸಿವೆಯಾಗಿರುತ್ತದೆ. ಮೊದಲು ಪಾಕಶಾಲೆಗೆ ಹೋಗಿ ಪಾಕವು ಸಿದ್ಧವಾಗಿದ್ದರೆ ತಾಟು ಬಡಿಸಿಕೊಂಡು ಬರಲಿಕ್ಕೆ ಅಡಿಗೆಯ ಭಟ್ಟನಿಗೆ ತಿಳಿಸು. **( ನೀಲನು ಒಳಗೆ ಹೋಗುತ್ತಾನೆ. )**

**(ತ್ರಾಟಿಕೆಯನ್ನುದ್ದೇಶಿಸಿ)** ಪ್ರಿಯೇ, ಬಾ. ನನಗೆ ಒಮ್ಮೆ ದೃಢಾಲಿಂಗನ ಕೊಡು. ಈ ಹೊತ್ತಿನಿಂದ ಈ ಮನೆಯು ನಿನ್ನದು. ಇಲ್ಲಿಯ ಸ್ವಾಮಿನಿಯು-ಅಧಿದೇವತೆಯು-ನೀನೇ ! ನಿನ್ನ ಅಂತಃಪುರದಲ್ಲಿ ನಾನು ಮಾಡಿರುವ ಶೃಂಗಾರವನ್ನು ಸ್ವರ್ಗದಲ್ಲಿಯ ಅಪ್ಸರೆಯರು ನೋಡಿದರೆ ಅವರು ಸಹ ನಿನ್ನ ಕೂಡ ಮತ್ಸರವನ್ನು ಮಾಡದೆ ಇರಲಾರರು ! ನಿನ್ನ ಮಂದಿರವೇ ನನ್ನ ದೇವಾಲಯವು! ಅಹೋರಾತ್ರಿ ಈ ಭಕ್ತನು ನಿನ್ನ ಮಂದಿರದಲ್ಲಿಯೇ ನಿನ್ನ ಆರಾಧನೆಯನ್ನು ಮಾಡುತ್ತ ಕುಳಿತುಕೊಳ್ಳುವನು ! ಒಳ್ಳೇದು. ನಾನು ಇಲ್ಲಿ ಮಾತಾಡುತ್ತ ಎಷ್ಟೊತ್ತು ನಿಂತೆನಲ್ಲ ! ನೀನು ಕ್ಷುಧೆಯಿಂದ ಬಹಳ ಪೀಡಿತಳಾಗಿರಬಹುದು. ಛೇ, ನಾನು ಎಂಥ ನಿರ್ದಯನು! ಇದು ನೋಡು. ಗುಲಾಬೀ ಹೂವಿನಂತೆ ಕೋಮಲವೂ, ಸುಂದರವೂ ಆದ ನಿನ್ನ ಗಲ್ಲಗಳು ನಿಸಗಾದ ಹಸಿವೆಯಿಂದಲೂ ಶ್ರಮದಿಂದಲೂ ಹೇಗೆ ಕಂದಿ ಹೋಗಿರುತ್ತವೆ ! ಒಳಗೆ ಹೋಗೋಣ ನಡೆ. ಪ್ರವಾಸದೊಳಗಿನ ಈ ಮಲೀನವಾದ ವಸ್ತ್ರಗಳನ್ನು ತೆಗೆದು ಹೊಸ ವಸ್ತ್ರಗಳನ್ನು ಧರಿಸಿಕೋ. ನನ್ನಲ್ಲಿರುವ ಅಸಂಖ್ಯವಾದ ಸುಂದರ ವಸ್ತ್ರಗಳನ್ನು ನೋಡಿದರೆ ನಿನಗೆ ಯಾವವು ಧರಿಸಲಿ, ಯಾವವು ಬಿಡಲಿ, ಎಂದು ಭ್ರಾಂತಿಯಾಗಿ ಹೋದೀತು ! ನೀನು ಕೈ ಕಾಲು ಮೋರೆಗಳನ್ನು ತೊಳೆದುಕೊಂಡು ಬರುವಷ್ಟರಲ್ಲಿ ತಾಟುಗಳು ಬಡಿಸಿ ಸಿದ್ಧವಾಗುವವು. ನಡೆ, ಬೇಗ ನಡೆ. ಅಹಹ ! ಮನೆಯಲ್ಲಿ ಪಕ್ವಾನ್ನದ ಘಮಘಮಾಟವು ಎಷ್ಟು ಇಡಗಿರುತ್ತದೆ ! ಇಂಥ ಹಸಿವೆಯ ಕಾಲಕ್ಕೆ ಇಂಥ ಪಕ್ವಾನ್ನಗಳು ! ಈಹೊತ್ತು ನಿಜವಾಗಿಯೂ ನನ್ನ ಆನಂದಕ್ಕೆ ಎಣೆಯೇ ಇಲ್ಲ !! **( ಒಳಗೆ ಹೋಗುತ್ತಾರೆ. ) ( ನೀಲನು ಹೊರಗೆ ಬರುತ್ತಾನೆ. )**

**ನೀಲಾ**—**(ತನ್ನಷ್ಟಕ್ಕೆ)** ಎಲೇ, ನಿನ್ನ ಮನಸ್ಸಿನಲ್ಲಿ ಇರುವದಾದರೂ ಏನು ? ಇಲ್ಲಿ ನೋಡಿದರೆ ಏನೂ ಸಿದ್ಧತೆಯು ಇಲ್ಲ. ಈಗ ಧನಿಯು ಬಂದವನೇ ನನಗೆ ಪುಣೆಯ ಶ್ಯಾಲಜೋಡಿಯನ್ನು ಕೊಡದೆ ಬಿಡಲಾರನು. ಅದೇನೂ ಇರಲಿ. ನನ್ನ ಕೈಯೊಳಗಿನ ಚಾಬೂಕು ನಮ್ಮ ಧನಿಗೆ ತಾಕಿದ ಕೂಡಲೆ ನಮ್ಮ ಧನಿಯು ನನ್ನ ಜೀವ ತಕ್ಕೊಳ್ಳುತ್ತಾನೆಂದು ನಾನು ಬಹಳ ಹೆದರಿಕೊಂಡಿದ್ದೆ. ನನ್ನ ಹಣೇಬರಹವು ನೆಟ್ಟಗಿರುವದರಿಂದ ನಾನು ಆ ಕುತ್ತಿನೊಳಗಿಂದ ಪಾರಾದೆ. ಆದರೆ ತಿಪ್ಪನು ಇನ್ನೂ ಏಕೆ ಬಂದಿರಲಿಕ್ಕಿಲ್ಲ ? **( ತಿಪ್ಪನು ಬರುವದನ್ನು ಕಂಡು )** ಎಲೇ

ತಿಪ್ಪಾ, ಬೇಗ ಬಾರೋ. ಆ ರತನಗಂಬಳಿ ತಗೊಂಡು ಬಂದು ಹಾಸು. ತಕ್ಕೆಲೋಡು ತಂದು ಇಡು. ಮೇಣಬತ್ತಿಯ ಶೇಂಡು ಹಚ್ಚು. ಮತ್ತು ಎಲೀ ಅಡಕಿಯ ತಬಕ ಇಡು. ಊದಿನ ಕಡ್ಡಿಗಳನ್ನು ಹಚ್ಚಿ ಮನೆಯಲ್ಲಿ ಸುವಾಸನೆಯನ್ನು ಇಡಗಿಸು. (ತಿಪ್ಪನು ರತ್ನಗಂಬಳಿ ಮತ್ತು ಶೇಂಡಿನ ದೀಪವನ್ನು ತೆಗೆದುಕೊಂಡು ಬರುತ್ತಾನೆ; ಬಳಿಕ ಇಬ್ಬರೂ ಕೂಡಿ ಕಂಬಳಿಯನ್ನು ಹಾಸಿ ಅದರ ಮೇಲೆ ತಕ್ಕೆ ಲೋಡುಗಳನ್ನೂ, ಎಲೆ ಅಡಕಿಯ ತಬಕವನ್ನೂ ಇಡುತ್ತಾರೆ. ಮತ್ತು ಊದಿನ ಕಡಿಗಳನ್ನು ಹಚ್ಚುತ್ತಾನೆ) ಏ ತಿಪ್ಪಾ, ಇನ್ನು ಬೇಗ ಆ ಅಡಗೀ ಭಟ್ಟನಿಗೆ ತಾಟು ಬಡಿಸಿಕೊಂಡು ಬರಲಿಕ್ಕೆ ಹೇಳು. (ತಿಪ್ಪನು ಹೋಗುತ್ತಾನೆ. ಭಟ್ಟನು ಎರಡು ತಾಟುಗಳನ್ನು ಬಡಿಸಿಕೊಂಡು ಮಡಿಯಿಂದ ತಂದು ಇಡುತ್ತಾನೆ. ಹಾಗೂ ಕುಳಿತುಕೊಳ್ಳಲಿಕ್ಕೆ ಎರಡು ಮಣೆಗಳನ್ನು ಹಾಕುತ್ತಾನೆ.) ಎಲೇ ತಿಪ್ಪಾ, ಧನಿಯೂ ಅಪ್ಪನವರೂ ಬಂದರು. ಅಡ್ಡಮಗ್ಗಲು ಸರಕೋ. (ಎಲ್ಲರೂ ಬಂದು ಮಗ್ಗಲಿಗೆ ಸರಕೊಳ್ಳುತ್ತಾರೆ.) (ಪ್ರತಾಪರಾಯನೂ ತ್ರಾಟಿಕೆಯೂ ಬರುತ್ತಾರೆ.)

**ಪ್ರತಾಪರಾವ**—ವ್ಹಾಃ ಇದೇನು? ಪಾಕಶಾಲೆಯೊಳಗಿಂದ ವಗ್ಗರಣೆಯ ವಾಸನೆಯು ಎಷ್ಟು ಉತ್ಕೃಷ್ಟವಾಗಿ ಬರುತ್ತದೆ! ನನ್ನ ಬಾಯಿಗಂತೂ ನೀರು ಬಿಟ್ಟವು. (ಮಣೆಯ ಮೇಲೆ ಕುಳಿತು) ಪ್ರಿಯೇ, ಬಾ, ಹೀಗೇಕೆ ನಿಂತುಕೊಂಡೆ? ನೀನಂತೂ ಇಲ್ಲಿಯ ಸ್ವಾಮಿನಿಯು. ಬಾ, ಇಲ್ಲಿ ನನ್ನ ಸಮೀಪದಲ್ಲಿ ಕುಳಿತುಕೋ. (ಅವಳು ಸಮೀಪಕ್ಕೆ ಬಂದು ನಾಚಿಕೊಂಡು ನಿಲ್ಲುತ್ತಾಳೆ.) ಹ. ನೀನು ಕುಳಿತುಕೊಳ್ಳದಿರುವ ಕಾರಣವು ತಿಳಿಯಿತು. ಎಲೇ ಅಡಿಗೆಯ ಭಟ್ಟಾ, ಗಾರ್ದಭಾ, ನಿನ್ನ ಬುದ್ಧಿಯು ಎಲ್ಲಿಹೋಯಿತು? ಚಾಂಡಾಲಾ, ನಿನಗೆ ಎರಡು ತಾಟುಗಳನ್ನು ತರಲಿಕ್ಕೆ ಯಾರು ಹೇಳಿದ್ದರು? ಒಂದು ತಾಟನ್ನು ಇಲ್ಲಿಂದ ಒಳಗೆ ಎತ್ತಿಕೊಂಡು ಒಯ್ಯು. (ಭಟ್ಟನು ಒಂದು ತಾಟನ್ನು ಒಳಗೆ ಒಯ್ಯುತ್ತಾನೆ.) ಈ ಹೊತ್ತು ನಾನೂ ನನ್ನ ಪ್ರಿಯಳೂ ಕೂಡಿ ಒಂದೇ ತಾಟಿನಲ್ಲಿ ಉಣ್ಣುವೆವು. ಈ ಹೊತ್ತಷ್ಟೇ ಏಕೆ? ದಿನಾಲು ಈ ಪ್ರಕಾರ ಮಾಡುವೆವು. ಏಕೆಂದರೆ ಇವಳು ನನ್ನ ಅರ್ಧಾಂಗಿಯಲ್ಲವೇ? (ಅವಳನ್ನು ಜಗ್ಗಿ ತನ್ನ ಹತ್ತರ ಕುಳ್ಳಿರಿಸಿಕೊಳ್ಳುತ್ತಾನೆ.) ನಿಜವಾಗಿ ಈ ಹೊತ್ತು ನಾನು ಬಹಳ ಧನ್ಯನಾದೆನು. ಇಂಥ ರತ್ನವು ನನಗೆ ಲಭಿಸಿದ್ದಕ್ಕಾಗಿ ನನಗೆಷ್ಟು ಆನಂದವಾಗಿರುತ್ತದೆಂದು ಹೇಳಲಿ? ಆದರೆ ಪ್ರಿಯೇ, ನೀನು ಮುಗ್ಧೆಯಂತೆ ಏಕೆ ಸುಮ್ಮನಿರುವೆ? ಮಾತಾಡುವದಿಲ್ಲೇಕೆ? ಅಬಬ! ಇವಳು ಎಷ್ಟು ಕ್ಷುಧಾಪೀಡಿತಳಾಗಿರು

ತ್ತಾಳೆ! ನಾನು ನನ್ನ ಆನಂದದಲ್ಲಿಯೇ ಮಗ್ನನಾಗಿ ಇವಳ ಈ ಸ್ಥಿತಿಯನ್ನು ಮರೆತುಬಿಟ್ಟೆನು. ಪ್ರಿಯೇ, ಈ ಹೊತ್ತು ನೀನು ನಿನ್ನ ಕೈಯನ್ನು ಮುಸರಿ ಮಾಡಿಕೊಳ್ಳಬೇಡ. ನಾನೇ ನನ್ನ ಕೈಯಿಂದ ನಿನಗೆ ಉಣ್ಣಿಸುತ್ತೇನೆ. (**ತಾಟಿನೊಳಗಿನ ಒಂದು ಪುರಿಯನ್ನು ಎತ್ತಿ**) ಎಲಾ, ಇದೇನಿರುತ್ತದೆ? ಇದೇನು ಪುರಿಯೋ? ನೀಲಾ, ಆ ಕೃತಘ್ನನಾದ ಅಡಿಗೆಯವನನ್ನು ಕರೆ. (**ಭಟ್ಟನು ಬರುತ್ತಾನೆ.**) ಎಲೋ ಅಧಿಕಪ್ರಸಂಗೀ, ಮೋಸಗಾರಾ, ಲಂಬಕರ್ಣಾ! ಈ ಪುರಿಯನ್ನು ನಿಮ್ಮ ಅಪ್ಪನಿಗಾದರೂ ತಿನ್ನಲಿಕ್ಕೆ ಆದೀತೇನು? ಇದರ ಮೇಲೆ ಗುದ್ದಲಿಯ ಪೆಟ್ಟು ಹಾಕಿದಾಗ್ಯೂ ಇದು ಮುರಿಯಲಾರದು! ಇದನ್ನು ಕರಗಸದಿಂದ ಕೊರೆದರೂ ಇದು ಚೂರಾಗಲಾರದು! ಬೆಂಕಿಯಲ್ಲಿ ಹಾಕಿದರೂ ಸುಡಲಾರದು! ಕಳ್ಳಾ, ಇದನ್ನು ನೀನೇ ಹೇಗೆ ತಿನ್ನುತ್ತೀ ತಿನ್ನು. (**ಅದನ್ನು ಅವನ ಮೈಮೇಲೆ ಒಗೆಯುತ್ತಾನೆ.**) ಮತ್ತು ಈ ಬಟ್ಟಲದಲ್ಲಿ ಏನಿರುವದು? (**ನೋಡಿದಂತೆ ಮಾಡಿ**) ಇದು ಪಾಯಸವೆಂದು ಕಾಣುತ್ತದೆ! ಇದರಲ್ಲಿ ಎಷ್ಟು ಹುಡುಕಿದಾಗ್ಯೂ ಕೈಗೆ ಒಂದಾದರೂ ಗವಲಿಯು ಹತ್ತುತ್ತದೋ? ಮೂರ್ಖಾ, ಹೆಚ್ಚು ಗವಲಿಗಳನ್ನು ಹಾಕಿ ಪಾಯಸವನ್ನು ಮಾಡಿದ್ದರೆ ನಿಮ್ಮಪ್ಪನ ಗಂಟು ಏನಾದರೂ ಕಡಿಮೆಯಾಗುತ್ತಿತ್ತೋ? ಇವೇನು? ಕರ್ಚೀಕಾಯಗಳೇ? ಅಹಹಹಾ! ಎಲೋ ಮೈಗಳ್ಳಾ, ಇಂಥ ಲತ್ತ ಕರ್ಚೀಕಾಯಿಗಳನ್ನು ತಿನ್ನಲಿಕ್ಕೆ ನಾವೇನು ಮನುಷ್ಯರೋ ಪಶುಗಳೋ? ಇವೇನು? ಮೋತೀಚೂರಿನ ಉಂಡಿಗಳೇ? ಇವು ವಿಜಾಪುರದ ಮುಲಖುಮೈದಾನದ ತೋಫಿನಲ್ಲಿ ಹಾಕತಕ್ಕಂಥ ಮದ್ದಿನ ಗುಂಡುಗಳಿರುತ್ತವೆ! ನೀಚಾ, ನಮ್ಮ ಬಾಯಿಗಳನ್ನು ತೋಫು ಎಂದು ತಿಳಿದೆಯಾ? ಇನ್ನು ಇವೇನು? ಕೋಡಬಳೆಗಳೇ? ಅಬಬಬ! ಎಲೋ ಕಳ್ಳಾ, ನನ್ನ ಪ್ರಿಯಳು ನಾಯಿಯೆಂದು ತಿಳಿದು ಇವುಗಳನ್ನು ಎಲವಿನಂತೆ ಗಟ್ಟಿಯಾಗಿ ಮಾಡಿಕೊಂಡು ಬಂದೆಯಾ? ಸಾಕು. ಅದೇನೂ ನಾನು ಕೇಳುವದಿಲ್ಲ. ನೀನು ಬಹಳಸೊಕ್ಕಿಗೆ ಬಂದಿರುತ್ತೀ. ನಿನ್ನ ಮೈ ಬಿಸಿಮಾಡಿ ನಿನ್ನ ಎಲವುಗಳನ್ನೇ ಮೊದಲು ಹೊರಗೆ ತೆಗೆಯುತ್ತೇನೆ. ಭಟ್ಟಾ, ಬಾ. ಹೀಗೆ ಮುಂದೆ ಬಂದು ನಿಂತುಕೋ.

(**ಭಟ್ಟನು ನಡಗುತ್ತ ಮುಂದೆ ಬಂದು ನಿಲ್ಲುತ್ತಾನೆ.**)

**ತ್ರಾಟಿಕಾ**—ಇದೇನು ಗದ್ದಲವು? ಮೊದಲಿಗೆ ಊಟವನ್ನು ಮುಗಿಸಿ ಆ ನಂತರ ಬೇಕಾದರೆ ಅವನಿಗೆ ಶಿಕ್ಷೆಯನ್ನು ಮಾಡಬಹುದು. ನನಗಂತೂ ಅವನಿಗೆ

ಶೀಕ್ಷೆಯನ್ನು ಮಾಡುವ ಕಾರಣವೇ ತೋರುವದಿಲ್ಲ. ಪದಾರ್ಥಗಳೇನೂ ಕೆಟ್ಟ ವಾಗಿಲ್ಲ. ಇವುಗಳ ವಾಸನೆಯಂತೂ ಬಹಳ ಚೆನ್ನಾಗಿ ಬರುತ್ತದೆ. ಈ ಪುರಿ ಯೇನೂ ಕೆಟ್ಟದಾಗಿರುತ್ತದೆಂದು ನನಗೆ ಕಾಣುವದಿಲ್ಲ. **(ಒಂದು ಪುರಿಯನ್ನು ಎತ್ತಿ ಕೈಯಲ್ಲಿ ಹಿಡಿದುಕೊಳ್ಳುತ್ತಾಳೆ).**

**ಪ್ರತಾಪರಾವ**—ಹಹಹ! ಪ್ರಿಯೇ, ಇದೇನು? ನಾನು ನಿನ್ನ ಸೇವೆ ಯನ್ನು ಮಾಡಲಿಕ್ಕೆ ತತ್ಪರನಿರಲು ನೀನು ಇಷ್ಟೊಂದು ಶ್ರಮವನ್ನು ಏಕೆ ತೆಗೆದು ಕೊಳ್ಳುವೆ? **(ಅವಳ ಕೈಯೊಳಗಿನ ಪುರಿಯನ್ನು ತೆಗೆದುಕೊಂಡು)** ಇದೇ ಪುರಿಯು ಏನು ನೀನು ನೆಟ್ಟಗಿರುತ್ತದೆಂದು ಹೇಳಿದ್ದು? ಇದಕ್ಕೆ ಹೊಲಸು ತುಪ್ಪದ ದುರ್ಗಂಧ ವಾಸ ನೆಯು ಎಷ್ಟು ಬರುತ್ತದೆ! **(ಆ ಪುರಿಯನ್ನು ಒಗೆಯುತ್ತಾನೆ.)**

**ತ್ರಾಟಿಕಾ**—ನಿಮಗೆ ದುರ್ಗಂಧ ವಾಸನೆಯು ಬರುತ್ತಿದ್ದರೆ ನೀವು ಅದನ್ನು ತಿನ್ನಬೇಡಿರಿ. ನನಗಂತೂ ಬಹಳ ಹಸಿವೆಯಾಗಿರುತ್ತದೆ. ಆದುದರಿಂದ ಪದಾರ್ಥ ಗಳು ಹೇಗಿದ್ದರೂ ಅವುಗಳನ್ನು ನಾನು ತಿನ್ನುವವಳೇ. ನಾಲ್ಕು ದಿವಸದ ತಂಗುಳ ಪದಾರ್ಥಗಳಿದ್ದರೂ ನನಗೆ ನಡೆಯುವವು.

**ಪ್ರತಾಪರಾವ**— ಪ್ರಿಯೇ, ನಿನಗೆ ಅವು ನಡೆಯಬಹುದು. ನೀನು ಅಂಥ ತಿಳುವಳಿಕೆಯವಳೇ ಇರುವೆ! ಆದರೆ ಜನರು ನನಗೇನು ಅಂದಾರು? ಈ ಹೊತ್ತೇ ನಿನ್ನ ಗೃಹಪ್ರವೇಶವಿದ್ದು ಈ ರೀತಿ ಅಡಿಗೆಯ ಸಂಭ್ರಮವು! ಅಂದ ಮೇಲೆ ನಮ್ಮ ಸಂಸಾರವು ಸುಮುಹೂರ್ತದಲ್ಲಿಯೇ ಸಂಭ್ರಮವನ್ನು ಹೊಂದಿ ದಂತಾದೀತು! ಏನು ಮಾಡಲಿ? ನನ್ನ ಮೈಯೆಲ್ಲ ಉರಿಯಲಿಕ್ಕೆ ಹತ್ತಿರುತ್ತದೆ. ಈ ಭಟ್ಟನಿಗೆ ಈ ಹೊತ್ತೇ ಈ ಪ್ರಕಾರ ಅಜಾಗರೂಕತೆಯಿಂದ ಪದಾರ್ಥಗಳನ್ನು ಸಿದ್ಧಮಾಡುವ ಬುದ್ಧಿಯು ಹೇಗೆ ಹುಟ್ಟಿತೋ ದೇವರೇ ಬಲ್ಲ! ನೀನು ನನ್ನ ಸಮೀಪದಲ್ಲಿ ಇರುವಿಯೆಂದು ತಿಳಿದು ಇವನಿಗೆ ಸುಮ್ಮನೆ ಬಿಡುತ್ತೇನೆ. ಇಲ್ಲ ದಿದ್ದರೆ ಇವನ ಬೆನ್ನು ಸುಲಿದು ಬಿಡುತ್ತಿದ್ದೆನು. ಎಲಾ ಕತ್ತೇ, ಈಗ ನಿನ್ನ ಒಡೆ ಯಳು ಏನು ನುಡಿದಳೆಂಬುವದನ್ನು ನೀನು ಕಿವಿಯಿಂದ ಕೇಳಲಿಲ್ಲೆಂದು ಕಾಣು ತ್ತದೆ. ಈ ತಾಟನ್ನು ಇಲ್ಲಿಂದ ಎತ್ತು. ಹೂ, ಇನ್ನೂ ಎತ್ತುವದಿಲ್ಲವೇ? ಹಾಗಾದರೆ ಈ ಇನಾಮನ್ನು ತೆಗೆದುಕೋ. **(ಭಟ್ಟನು ತಾಟನ್ನು ಎತ್ತಲಿಕ್ಕೆ ಮುಂದೆ ಬರುತ್ತಾನೆ. ಆಗ ಅವನ ಮೈಮೇಲೆ ತಾಟನ್ನೂ ಬಟ್ಟಲುಗಳನ್ನೂ ಒಗಿಯುತ್ತಾನೆ.)**

**ತ್ರ್ಯಾಟಿಕಾ—** ಇದೇನು, ಈ ಪ್ರಕಾರ ಹುಚ್ಚರಂತೆ ಮಾಡುವದು ? ಪದಾರ್ಥಗಳಿಗೆ ಏನಾಗಿದೆ ? ಏನಾದರೂ ನಿಮಿತ್ಯ ತೆಗೆದು ಸುಗ್ರಾಸವನ್ನು ಸಿಟ್ಟಿನಿಂದ ಒಕ್ಕೊಡುವದಕ್ಕೆ ಏನೆನ್ನಬೇಕು ? ಎಲ್ಲವು ಹುಡುಗಾಟಿಕೆಯೇ ! ನಾನು ಸುಮ್ಮನೆ ಕುಳಿತಂತೆ ನೀವು ಹೆಚ್ಚೆಚ್ಚು ಮಾಡುತ್ತೀರಿ. ಮೆತ್ತಗೆ ಕಂಡಲ್ಲಿ ಮೊಳಕೈಯಿಂದ ಅಗಿಯುವದು ! ನನಗೆ ಇದು ಎಷ್ಟೆಷ್ಟೂ ತಡೆಯಲಿಕ್ಕಿಲ್ಲ. ಎಲಾ, ಯಾರು ಅಲ್ಲಿ ? ಭಟ್ಟಾ, ನನಗೆ ಒಂದು ತಾಟು ಬಡಿಸಿಕೊಂಡು ಬಾ. ನಾನು ನಿನ್ನ ಪದಾರ್ಥಗಳನ್ನು ಸಂತೋಷದಿಂದ ಸೇವಿಸುತ್ತೇನೆ. ( **ಪ್ರತಾಪರಾಯನ ಕಡೆಗೆ ನೋಡಿ** ತಿರುವಿ) ನಿಮಗೆ ಬೇಡಾಗಿದ್ದರೆ ನೀವು **ರಾಯಪ್ಪನಾಯಕರ ಫಲಹಾರ** ಮಾಡಿ ಮಲಗಿಕೊಳ್ಳಿರಿ. ಕೆಟ್ಟ ದಾರಿಯನ್ನು ನಡೆದುದರಿಂದ ನನಗೆ ಬಹಳ ದಣುವಾಗಿರುತ್ತದೆ. ಇದಲ್ಲದೆ ಬಹಳ ಹಸಿವೆಯಾಗಿರುತ್ತದೆ. ಆದುದರಿಂದ ನನ್ನ ಹೊಟ್ಟೆಯಲ್ಲಿ ಹಾವು ಚೇಳುಕಡಿಯಲಿಕ್ಕೆ ಹತ್ತಿರುತ್ತವೆ. ಇದಕ್ಕಾಗಿ ನೀವು ಸ್ವಲ್ಪಾದರೂ ವಿಚಾರವನ್ನು ನಿಮ್ಮ ಮನಸ್ಸಿನಲ್ಲಿ ತಂದಿರಾ ? ಇದು ನೋಡಿರಿ. ನಾನಂತೂ ಊಟಮಾಡದೆ ಈ ಸ್ಥಳದಿಂದ ಮೇಲಕ್ಕೆ ಏಳುವದಿಲ್ಲ. ನಾನು ಈಗ ಇಲ್ಲಿಯ ಒಡೆಯಳಿರುತ್ತೇನೆ.

**ಪ್ರತಾಪರಾವ—** ( ನಕ್ಕು ) ಪ್ರಿಯೇ, ನೀನು ಇಲ್ಲಿಯ ಒಡೆಯಳಿರುವದರಿಂದಲೇ ನನಗೆ ಈ ಭಟ್ಟನ ಮೇಲೆ ಇಷ್ಟೊಂದು ಸಂತಾಪವು ಹುಟ್ಟಿರುತ್ತದೆ. ನೀನು ಇವತ್ತೇ ಬಂದಿರುವಿಯಾದ್ದರಿಂದ ಮಧುರವಾದ ಸುಗ್ರಾಸವನ್ನು ಸಿದ್ಧ ಮಾಡಬೇಕೆಂಬದು ಈ ಮುಂಡೇಮಗನಿಗೆ ತಿಳಿಯಬಾರದಿತ್ತೇ ? ಈ ಕಳ್ಳನ ಹೆಣ ಮಲಗಿಸುತ್ತೇನೆ. ಎಲಾ ಅಧಮಾ ! ಆ ಎಲ್ಲ ಅನ್ನವನ್ನು ಒಕ್ಕೊಟ್ಟುಬಿಡು. ಇಂಥ ಕೆಟ್ಟ ಮತ್ತು ಹಸಿಬಿಸಿ ಅನ್ನವನ್ನು ನನ್ನ ಕೋಮಲಾಂಗಿಗೆ ತಿನ್ನಿಸಿ ಅವಳನ್ನು ಬೇನೆ ಕೆಡವಬೇಕೆನ್ನುತ್ತೀಯಾ ? ನಾನು ಈಗಿಂದೀಗ ಒಳಗೆ ಹೋಗಿ ನನ್ನ ಕೈಯಿಂದಲೇ ಉತ್ಕೃಷ್ಟವಾದ ಗಂಜಿಯನ್ನು ಕಾಸಿಕೊಂಡು ಬರುತ್ತೇನೆ. ಅದು ಪಚನಕ್ರಿಯೆಗೆ ಬಹಳ ಉತ್ತಮವಾದುದು. ನಿಜವಾಗಿಯೂ ಹೇಳಬೇಕಾದರೆ ನಿನಗೂ ನನಗೂ ಈಹೊತ್ತು ಅನ್ನದ ಅಗತ್ಯವೆಲ್ಲಿರುತ್ತದೆ ? ನನಗಂತೂ ನಿನ್ನ ಮೋರೆಯ ಕಡೆಗೆ ನೋಡುತ್ತ ಸುಮ್ಮನೆ ಕುಳಿತುಕೊಳ್ಳಬೇಕೆಂಬ ಅಪೇಕ್ಷೆಯಾಗಿರುತ್ತದೆ. ನನಗೆ ಹಸಿವೆ ನೀರಡಿಕೆಗಳು ಮರೆತುಹೋಗಿರುತ್ತವೆ. ಪ್ರಿಯೇ, ಒಳಗೆ ನಮ್ಮ ಕೋಣೆಯಲ್ಲಿ ಹೋಗಿ ಕುಳಿತುಕೊಳ್ಳೋಣ ನಡೆ. ( **ಅಲ್ಲಿಯೇ ಆಕೆಯ ಕೈಯನ್ನು**

ನೀರಿನಿಂದ ತೊಳಿಸಿ ಒಳಗೆ ಕರೆದುಕೊಂಡು ಹೋಗುತ್ತಾನೆ. ) ( ನೀಲನು ಮುಂದೆ ಬರುತ್ತಾನೆ. )

**ನೀಲಾ**—ಆಯಿತು. ಇನ್ನು ನಮ್ಮ ಒಡೆಯನ ಆಳಿಕೆಯು ಆರಂಭವಾಯಿತು. ಇವನು ಇವೊತ್ತು ಅವ್ವನವರಿಗೆ ತಿನ್ನಲಿಕ್ಕಾಗಲಿ ಉಣ್ಣಲಿಕ್ಕಾಗಲಿ ಏನೂ ಕೊಡುವದಿಲ್ಲ. ನೀರು ಕುಡಿಯಲಿಕ್ಕೆ ಸಹ ಕೊಡುವದಿಲ್ಲ. ಅವರನ್ನು ಪುಟ್ಟಾಪೂರಾ ಉಪವಾಸ ಕೆಡವಿ ದಾರಿಗೆ ತರುವನು. ಅವ್ವನವರು ಹಸಿವೆಯ ದೆಸೆಯಿಂದ ಬಹಳ ಬಡಕೊಳ್ಳಲಿಕ್ಕೆ ಹತ್ತಿರುತ್ತಾರೆ. ಅವರ ಮೋರೆಯಂತೂ ಗುಬ್ಬಿಯಂತೆ ಸಣ್ಣಾಗಿ ಹೋಗಿರುತ್ತದೆ. ಇವನು ತನಗಂತೂ ಹಸಿವೆ ನೀರಡಿಕೆ ಏನೂ ಆಗಿಲ್ಲೆಂದು ಅನ್ನುತ್ತಾನೆ. ಇವನಿಗೇನು ಬೇನೆ? ಹತ್ತತ್ತು ಇಪ್ಪಿಪ್ಪತ್ತು ದಿವಸ ಉಪವಾಸ ಬಿದ್ದರೂ ಇವನು ಮಣಿಯುವಂತೆ ಇಲ್ಲ. ಇವನು ಸುಮ್ಮನೆ ಚೇಷ್ಟೆಯಿಂದ ಎಷ್ಟೋ ಸಾರೆ ಉಪವಾಸ ಬಿದ್ದು ನನಗೂ ಉಪವಾಸ ಕೆಡವಿರುತ್ತಾನೆ! ( ತಿಪ್ಪನು ಬರುತ್ತಾನೆ. ) ಏಲೇ ತಿಪ್ಪಾ! ಮತ್ತೇನು ಸುದ್ದಿ? ಧನಿಯು ಎಲ್ಲಿ ಕೂತಿರುತ್ತಾನೆ? ಅವ್ವನವರು ಏನು ಮಾಡುತ್ತಾರೆ?

**ತಿಪ್ಪಾ**—ನೀಲಣ್ಣಾ, ಅದನ್ನೇನೂ ಕೇಳಬೇಡ. ಅವ್ವನವರ ಮೋರೆ ನೋಡಿ ನನಗೆ ಬಹಳ ಕೆಡಕು ಅನ್ನಿಸಿರುತ್ತದೆ. ನನ್ನ ಕಣ್ಣಲ್ಲಿಯೂ ನೀರು ಬರುತ್ತವೆ. ಈಗ ಇಬ್ಬರೂ ಮೇಲುಪ್ಪರಿಗಿಯ ಮೇಲೆ ಕುಳಿತಿರುತ್ತಾರೆ. ಆ ಬಡಿವೆಯು ನಿದ್ದೆಗೆಟ್ಟು ಬಹಳ ಹಣ್ಣಾಗಿರುತ್ತಾಳೆ. ಅವನು ಆಕೆಯ ಮುಂದೆ ಏನೇನೋ ಹರಟಿ ಹೊಡೆಯುತ್ತ ಕುಳಿತಿರುತ್ತಾನೆ. ಅವಳು ಏನೂ ಉತ್ತರ ಕೊಡದೆ ಬಾಯಿ ಮುಚ್ಚಿಕೊಂಡು ಸುಮ್ಮನೆ ಕುಳಿತಿರುತ್ತಾಳೆ. ಅವನಿಗೆಲ್ಲಿ ಆಕೆಯು ಮಾತಾಡುವದು ಬೇಕಾಗಿರುತ್ತದೆ? ಅವನು ತನ್ನಷ್ಟಕ್ಕೆ ಏನೇನೋ ಒಟಗುಡಲಿಕ್ಕೆ ಹತ್ತಿರುತ್ತಾನೆ. ಮತ್ತು ನಡನಡುವೆ ಒದರಾಡುತ್ತಾನೆ; ಚೀರಾಡುತ್ತಾನೆ. ಇದರ ದೆಸೆಯಿಂದ ಆಕೆಯು ಬಹಳ ಹೆದರಿ ಹೋಗಿರುತ್ತಾಳೆ. ಇತ್ತಲಾಗೂ ಅತ್ತಲಾಗೂ ಓಡಿ ಹೋಗಲಿಕ್ಕೆ ಆಕೆಗೆ ದಾರಿಯೇ ಇಲ್ಲ. ನಮ್ಮ ಧನಿಯು ಬಾಗಿಲದ ಮುಂದೆ ಕೂತುಕೊಂಡು ಬಿಟ್ಟಿರುತ್ತಾನೆ. ಇವನು ಗಂಡನಲ್ಲ, ಪ್ರತ್ಯಕ್ಷ ಯಮನು! ನಾನಂತೂ ದೇವರಾಣೆಯೆಂದರೂ ಇಂಥವನ ಹೆಂಡತಿಯಾಗಲಿಕ್ಕಿಲ್ಲ!

**ನೀಲಾ**—ಛೀ ಮಗನೇ, ಗಂಡಸರೆಂದಾದರೂ ಹೆಂಡತಿಯಾಗುತ್ತಾರೋ? ಧನಿಯು ತನ್ನ ಹೆಂಡತಿಗೆ ಬೇಕಾದ್ದು ಮಾಡಿಕೊಳ್ಳಲಿ. ನಮ್ಮಪ್ಪಂದೂ ನಿಮ್ಮಪ್ಪಂದೂ ಏನು ಗಂಟು ಹೋಗುತ್ತದೆ ? ಆ ಹೆಂಗಸು ನಿನಗೆ ಮಾತ್ರ

ಬಡವಿಯಂತೆ ಕಾಣುತ್ತಾಳೆ. ಆಕೆಯ ಗುಣಗಳನ್ನು ನೀನೇನು ಬಲ್ಲಿ? ಆಕೆಯು ತನ್ನ ತವರುಮನೆಯಲ್ಲಿ ತನ್ನ ತಂಗಿಗೂ ಅಪ್ಪನಿಗೂ ಬಹಳ ಬೇಸರಿಕೆಯನ್ನು ಕೊಟ್ಟಿದ್ದಳು. ಆಕೆಯ ಜಗಳದ ಸಲುವಾಗಿ ಅವರಿಬ್ಬರಿಗೂ ತಲೆ ಹಿಡಿದುಹೋಗಿತ್ತು. ಎಲಾ. ಇತ್ತಲಾಗಿಂದ ಜಗಿತವನ್ನು ಕೊಡೋಣ ನಡೆ. ಧನಿಯು ಇತ್ತಲಾಗೇ ಬರುವಂತೆ ಕಾಣುತ್ತದೆ ನೋಡು. ಒತ್ತರ ಮಾಡು ! (ಇಬ್ಬರೂ ಹೋಗುತ್ತಾರೆ.) (ಪ್ರತಾಪರಾಯನು ಬರುತ್ತಾನೆ.)

**ಪ್ರತಾಪರಾವ** – ಒಳ್ಳೇದಾಯಿತು. ನನ್ನ ಆಳುವಿಕೆಯ ಆರಂಭವಂತೂ ಬಹಳ ಸೊಗಸಾಗಿ ಆದಂತಾಯಿತು ! ಅವಳನ್ನು ನಮ್ರ ಮಾಡುವದಕ್ಕಾಗಿ ಮಾಡತಕ್ಕಂಥ ಪ್ರಯತ್ನವನ್ನು ನಾನು ಒಳ್ಳೇ ಚತುರತನದಿಂದ ಪ್ರಾರಂಭಿಸಿದೆನು ! ಈ ಬಹಾದ್ದುರನಿಗೆ ಈ ಕೆಲಸದಲ್ಲಿ ಜಯವು ದೊರಕದೆ ಎಂದಿಗೂ ಉಳಿಯದೆಂಬುವದು ನಿಶ್ಚಯವು !! ಈ ಪ್ರಕರಣವು ಸ್ವಲ್ಪ ಜಡವಾಗಿರುವದು ನಿಜವು. ಅವಳ ಕಣ್ಣುಗಳ ಕಡೆಗೆ ನೋಡಿದರೆ ಅವು ಗಿಡಗನ ಕಣ್ಣುಗಳಂತೆ ಭಯಂಕರವಾದ ಸಿಟ್ಟಿನಿಂದ ಯಾವಾಗಲು ಉರಿಯುವಂತೆ ಕಾಣುತ್ತವೆ ! ಅವಳು ಎಷ್ಟು ಟುರುಪುರು ಹಾರಾಡಿದರೂ ಅವಳ ಮೈಯೊಳಗಿನ ಉನ್ಮತ್ತತನವನ್ನು ಕಡಿಮೆ ಮಾಡಿ, ಅವಳಿಗೆ ಯೋಗ್ಯ ಶಿಕ್ಷಣವನ್ನು ಕೊಟ್ಟು, ಅವಳು ನನಗೆ ಸಂಪೂರ್ಣ ಅಂಕಿತಳಾಗಿ ನಡೆಯುವಂತೆ ನಾನು ಅವಳನ್ನು ಮಾಡೇ ಮಾಡುವೆನು. ಆದರೂ ಅವಳ ಮೈಯೊಳಗಿನ ಒಗರನ್ನು ಪೂರ್ಣವಾಗಿ ಕಳೆದು ಬಿಡುವದು ಉಪಯೋಗವಲ್ಲ. ಆ ಒಗರಿನಲ್ಲಿಯೇ ಯಾವತ್ತು ಸತ್ವವಿರುವದು ! ತೀರಾ ಒಗರು ಕಳಕೊಂಡು ತನ್ನ ಸ್ವಂತ ತಿಳುವಳಿಕೆಯನ್ನು ಯಾವದಕ್ಕೂ ಉಪಯೋಗಿಸದೆ ಗಂಡನು ಮಾಡಿದ ಅನ್ಯಾಯದ ಆಜ್ಞೆಗಳನ್ನು ಸಹ ಪಾಲಿಸುವಂಥ ಹೇಡಿಯಾದ ಹೆಂಗಸಿನಿಂದ ಏನು ಉಪಯೋಗವು ? ಆದುದರಿಂದ ಅವಳು ನನ್ನನ್ನು ಅಂಜಿಸಿ ನನ್ನ ಮೇಲೆ ತನ್ನ ಅಧಿಕಾರವನ್ನು ನಡೆಸದಿದ್ದರೆ ಸಾಕು. ಇಷ್ಟೇ ಮಾತ್ರ ನಾನು ಅವಳಿಗೆ ಕಲಿಸತಕ್ಕವನಿದ್ದೇನೆ. ಇದಕ್ಕೆ ಮೊದಲನೇ ಉಪಾಯವೆಂದರೆ, ಅವಳನ್ನು ಉಪವಾಸ ಕೆಡವುವದು. ಹೊಟ್ಟೆಯು ಪೂರ್ಣವಾಗಿ ತುಂಬಿದ ಮೇಲೆ ಯಾರು ಯಾರನ್ನು ವಿಚಾರಿಸುತ್ತಾರೆ? ಪೂರ್ಣ ಉಪವಾಸ ಕೆಡವದಿದ್ದರೂ ಚಿಂತಿಲ್ಲ. ಅರಹೊಟ್ಟೆ ಸಾಕು. ಎರಡನೇ ಉಪಾಯವೆಂದರೆ, ಅವಳನ್ನು ನಿದ್ರೆಗೆಡಿಸುವದು.

ಇವೆರಡನ್ನೂ ನಾನು ಬಿಟ್ಟೂಬಿಡದೆ ಮಾಡಿದರೆ ಸ್ವಲ್ಪ ದಿವಸಗಳಲ್ಲಿಯೇ ಅವಳು ಜೆಕ್ಕಿನಕಿಂತಲು ಹೆಚ್ಚು ನಮ್ರಳಾಗಿ ಹೋಗುವಳೆಂಬದರಲ್ಲಿ ಏನೂ ಸಂಶಯವಿಲ್ಲ. ಈಗೀಗ ಅವಳು ಸ್ವಲ್ಪ ಗಂಜಿಯನ್ನು ಕುಡಿದು, ಪಲಂಗದ ಮೇಲೆ ಅಡ್ಡಾಗಿರ ಬಹುದು. ಇಷ್ಟರಲ್ಲಿ ನಮ್ಮ ಸ್ವಾರಿಯೇ ಅಲ್ಲಿ ಹೋಗುವದು. ಆಮೇಲೆ ಅವಳು ಸ್ವಾಭಾವಿಕವಾಗಿ ಪಲಂಗದ ಮೇಲಿಂದ ಎದ್ದು ಕೆಳಗೆ ನಿಂತುಕೊಳ್ಳುವಳು. ಆಗ ನಾನು "ಗಾದಿಯು ಪೈಗೆ ನಡುವದು. ಮಗ್ಗಲ ಹಾಸಿಗೆಯನ್ನು ಒಗೆದಿಲ್ಲ. ತಲೆಗಿಂಬು ಎಣ್ಣೆಯಿಂದ ಮತ್ತು ಬೆವರಿನಿಂದ ಹೊಲಸಾಗಿರುತ್ತದೆ" ಎಂದು ಒಂದಿ ಲ್ಲೊಂದು ಕಾರಣವನ್ನು ಹೇಳಿ ಹಾಸಿಗೆಯನ್ನು ಕೆಳಗೆ ಒಕ್ಕೊಟ್ಟು ಬರೇ ಒಂದು ಕಂಬಳಿಯನ್ನು ಇಟ್ಟುಕೊಳ್ಳುವೆನು. ಅದರ ಮೇಲೆ ಸಹ ಆಕೆಗೆ ನಿದ್ರೆ ಬರ ಲಿಕ್ಕೆ ಹತ್ತಿದರೆ ಹೇಗಾದರೂ ಮಾಡಿ ಆಕೆಯ ನಿದ್ರೆಯನ್ನು ಕೆಡಿಸಲಿಕ್ಕೆ ಪ್ರಯತ್ನ ಮಾಡುವೆನು. ಮೇಲಿಂದ ಮೇಲೆ ಅವಳಿಗೆ "ಪ್ರಿಯೇ" "ಸುಂದರೀ" ಎಂದು ಮೈ ಹಿಡಿದು ಅಗಳಾಡಿಸಿ, "ನಿದ್ರೆಹತ್ತಿತೇನು?" "ಮೈಮೇಲೆ ಚೆನ್ನಾಗಿ ಹೊತ್ತು ಕೋ" ಎಂದು ಮಾತಾಡಿಸುತ್ತ ಅವಳಿಗೆ ನಿದ್ರೆಮಾಡುವದನ್ನು ತಪ್ಪಿಸುವೆನು. ಹಗಲು ಹೊತ್ತು ಆದ ಆಯಾಸದಿಂದ ಆಕೆಗೆ ಯಾವಾಗ್ಗೆ ಮೈ ಹಚ್ಚಿ ಹಾಸಿಗೆಯ ಮೇಲೆ ಬಿದ್ದುಕೊಂಡೇನು ಎಂದು ಅನ್ನಿಸಿದ್ದೀತು! ಆದರೆ ಆಕೆಗೆ ಈ ಹೊತ್ತು ನಿದ್ರೆಗೆಡಿಸಲಿಕ್ಕೇಬೇಕು! ನಾನು ನನ್ನ ಹೆಂಡತಿಯನ್ನು ಇಷ್ಟೊಂದು ಕಠೋರತನ ದಿಂದ ನಡೆಸುತ್ತೇನೆಂದು ಜನರು ನನಗೆ ಹೆಸರು ಇಡಬಹುದು. ಆದರೆ ಈ ಕಠೋರತನವು ನನ್ನ ಮತ್ತು ನನ್ನ ಹೆಂಡತಿಯ ಹಿತಕ್ಕಾಗಿಯೇ ಇರುತ್ತದೆ. ಜಗ ಳಗಂಟಿಯಾದ ಹೆಂಡತಿಯನ್ನು ಮಾರ್ಗಕ್ಕೆ ತರಲಿಕ್ಕೆ ಸೌಮ್ಯವಾದ ಮತ್ತು ಮನು ತೆಯ ಉಪಾಯವು ಇದೇ! ಇದಕ್ಕಿಂತ ಉತ್ತಮವಾದ ಉಪಾಯವು ಯಾರಿಗಾ ದರೂ ಸ್ವಾನುಭವದಿಂದ ಗೊತ್ತಿದ್ದರೆ ಅವರು ಅದನ್ನು ತಿಳಿಸಿದರೆ ಅವರು ನನ್ನ ಮೇಲೂ ನನ್ನಕಿಂತ ಕಡಿಮೆ ಧೈರ್ಯವಿರುವ ಗಂಡಂದಿರ ಮೇಲೂ ಬಹಳ ಉಪ ಕಾರ ಮಾಡಿದಂತಾದೀತು!! (ಹೋಗುತ್ತಾನೆ.)

---

# ಪ್ರವೇಶ ೨ನೇದ್ದು.

## ಕುಸುಮಪುರ—ಲಕ್ಷ್ಮೀಪತಿರಾಯನ ಮನೆಯ ಹಿಂದಿನ ತೋಟ.

( ಕಮಲೆಯೂ ರಂಗರಾಯನೂ ಬರುತ್ತಾರೆ. )

**ಕಮಲೆ**—( ಕೈಯೊಳಗಿನ ಪತ್ರದ ಕಡೆಗೆ ನೋಡಿ ) ನನಗಂತೂ ಬಹಳ ಆಶ್ಚರ್ಯವಾಗುತ್ತದೆ. ಹೀಗೆ ಮಾಡಲಿಕ್ಕೆ ಅವನಿಗೆ ಧೈರ್ಯವಾದರೂ ಹೇಗೆ ಆಗಿದ್ದೀತು ?

**ರಂಗರಾವ**—ನಿನ್ನಂಥ ಸುಂದರಿಯ ಸಲುವಾಗಿ ಯಾರೇನು ಮಾಡಲಿಕ್ಕಿಲ್ಲ? ನಾನಾದರೂ ಬೇಕಾದುದು ಮಾಡುತ್ತಿದ್ದೆನು.

**ಕಮಲೆ**—ಛೀ, ಏನಾದರೂ ಬಾಯಿಗೆ ಬಂದದ್ದು ಮಾತಾಡುತ್ತೀರಿ. ನೀವು ಆ ಸುಬ್ಬ ಹೇಡಿಯಂತೇ ಏನು ? ಚೇಷ್ಟೆಯಿಂದ ಮಾತಾಡಿದಾಗ್ಯೂ ನಿಮ್ಮ ಯೋಗ್ಯತೆಗೆ ಸ್ವಲ್ಪ ಒಪ್ಪುವಂತೆ ಮಾತಾಡಿರಿ.

**ರಂಗರಾವ**—ಕಮಲೇ, ನನ್ನ ಮಾತಿನ ಅರ್ಥವನ್ನು ನೀನು ತಿಳಿದುಕೊಳ್ಳಲಿಲ್ಲ. ಅವನು ತನ್ನ ಯೋಗ್ಯತೆಯ ಕಡೆಗೆ ಲಕ್ಷ್ಯಕೊಡದೆ ಈ ಧೈರ್ಯದ ಕೆಲಸವನ್ನು ಮಾಡಿದ್ದು ಮೂರ್ಖತನವೇ ಸರಿ. ಆದರೆ ಕ್ಷಣ ಹೊತ್ತಿನ ತನಕ ನಾನೇ ಆ ಭೀಮರಾಯನೆಂತಲೂ ನಿಮ್ಮ ತಂದೆಯು ನನಗೆ ನಿನ್ನನ್ನು ಮದುವೆ ಮಾಡಿಕೊಡಲಿಕ್ಕೆ ಒಡಂಬಡುವದಿಲ್ಲೆಂದು ನೋಡಿ ನಾನು ನಿನ್ನ ಮನಸ್ಸನ್ನು ಒಲಿಸಿಕೊಳ್ಳುವದಕ್ಕೆ ಈ ಪ್ರಕಾರ ಪ್ರಯತ್ನ ಮಾಡಿದ್ದೆನೆಂತಲೂ ತಿಳಿದುಕೋ. ಆಗ್ಗೆ ನೀನು ಇದೇ ರೀತಿಯಿಂದ ನನ್ನ ಪ್ರಯತ್ನವನ್ನು ನಿರಾಕರಿಸುತ್ತಿದ್ದೆಯಾ ?

**ಕಮಲೆ**—ಇದೆಂಥ ಸೋಜಿಗದ ಪ್ರಶ್ನೆಯು ? ನನಗೆ ಇಂಥಾದ್ದೇನೂ ತಿಳಿಯುವದಿಲ್ಲ. ತಾವು ಇಲ್ಲದೆ ಇರುವದನ್ನು ಏಕೆ ಕಲ್ಪಿಸಬೇಕು ? ಇಲ್ಲದ್ದಕ್ಕಾಗಿ ಮೂಲತಃ ವಿಚಾರ ಮಾಡುವ ಗೊಡವೆ ಏತಕ್ಕೆ ? ಇಲ್ಲದಿದ್ದರೆ ಸುಮ್ಮ ಸುಮ್ಮನೆ ತಮಗೆ ಇಷ್ಟವಾಗಿರುವದು ಇಷ್ಟವಿಲ್ಲವೆಂದು ತಿಳಿದು ಮನಸ್ಸಿಗೆ ಕಷ್ಟ ಮಾಡಿಕೊಂಡಂತಾಗುವದು.

**ರಂಗರಾವ**—ಹಾಗಲ್ಲ. " ಇಲ್ಲ " ಅಥವಾ " ಉಂಟು " ಎಂಬದರ ವಿಚಾರವು ಈಗ ಬೇಕಾಗಿಲ್ಲ. ನನಗೆ ನಿನ್ನ ಮನಸ್ಸಿನ ಪರೀಕ್ಷೆಯನ್ನು ಮಾಡತಕ್ಕದ್ದದೆ. ನಿಮ್ಮ ತಂದೆಯು ನಿನ್ನನ್ನು ಆ ಬಾಪೂರಾಯನಿಗೆ ಕೊಡಬೇಕೆಂದು ನಿಶ್ಚಯ ಮಾಡಿದನೆಂತಲೂ ಆತನನ್ನು ಮದುವೆ ಮಾಡಿಕೊಳ್ಳುವದಕ್ಕೆ ನಿನ್ನ ಮನಸ್ಸು ಒಡಂಬಡುವದಿಲ್ಲೆಂತಲೂ ತಿಳಿ. ಇಂಥ ಸ್ಥಿತಿಯಲ್ಲಿ ನಿನ್ನ ಮೇಲೆ ಪ್ರೀತಿ ಮಾಡತಕ್ಕಂಥ ಒಬ್ಬ ಸುಂದರ ತರುಣ ಮನುಷ್ಯನು ನಿನಗೆ ತಿಳಿಯದಂತೆ ನಿನ್ನ ಮನಸ್ಸಿನ ಮತ್ತು ಗುಣದ ಪರೀಕ್ಷೆಯನ್ನು ಮಾಡುವ ಉದ್ದಿಶ್ಯ ವೇಷಾಂತರದಿಂದ ನಿನ್ನ ಹತ್ತರ ಬಂದು ಇದ್ದುಕೊಂಡು ತನ್ನ ಹೃದ್ಗತವನ್ನು ನಿನಗೆ ತಿಳಿಸಿದರೆ ಆಗ ಅವನಿಗೆ ನೀನೇನು ಉತ್ತರ ಕೊಡುವೆ ?

**ಕಮಲೆ**— ಅವನು ಕುಲೀನನು, ಸುಶೀಲನು, ಚತುರನು ಮತ್ತು ಜ್ಞಾನಿಯು ಇರುತ್ತಾನೋ ಇಲ್ಲೋ ಎಂಬುವದನ್ನು ತಿಳಿಯದೆ ನಾನೇನು ಉತ್ತರ ಕೊಡಲಿ ?

**ರಂಗರಾವ**— ನೀನು ಕ್ಷಣಹೊತ್ತಿನ ತನಕ ನಾನು ಅವನೇ ಎಂದು ತಿಳಿದುಕೋ.

**ಕಮಲೆ**—ಸಾಕಿನ್ನು ಈ ಚೇಷ್ಟೆ. ನನಗೆ ಈ ತರದ ವಿಚಿತ್ರ ಪ್ರಶ್ನೆ ಮಾಡಬೇಡಿರಿ. ನಿಮ್ಮ ಸ್ವಭಾವವು ಯಾವಾಗಲು ವಿಚಿತ್ರ ಪ್ರಶ್ನೆ ಮಾಡುವದೇ ಇರುತ್ತದೆ. ಅದಿರಲಿ. ನೀವು ಮೊನ್ನೆ ನನ್ನ ಮುಂದೆ ಹೇಳಿದ ಕಥೆಗೂ ಈಗ ನೀವು ಹೇಳುವ ಕಲ್ಪಿತ ಕಥೆಗೂ ಬಹಳ ಸಾಮ್ಯ ಉಂಟಲ್ಲೋ ?

( ಅವನ ಕಡೆಗೆ ಓರೆಗಣ್ಣಿನಿಂದ ನೋಡುತ್ತಾಳೆ. )

**ರಂಗರಾವ**—ಇರಬಹುದು. ಆದರೆ ಅದರದೇನು ಈಗ ಕಾರಣವಿರುವದು?

**ಕಮಲೆ**— ನೀವು ಆ ಕಥೆಯನ್ನು ಹೇಳಿದ ತರುವಾಯ ಶಾಸ್ತ್ರದೊಳಗಿನ ಆಧಾರವನ್ನು ತೆಗೆದು ನನಗೆ ಸ್ವಯಂವರದ ಬಗ್ಗೆ ಏನೋ ಹೇಳಿದ್ದಿರಲ್ಲವೇ ? ನಾನು ಅದನ್ನು ಮರೆತಿಲ್ಲ. ನನ್ನ ಮನಸ್ಸಿನೊಳಗೆ ಅದು ಯಾವಾಗಲು ಕಟೆಯುತ್ತದೆ.

( ನಾಚಿಕೊಂಡು ಮುರಕು ಮಾಡುತ್ತಾಳೆ. )

**ರಂಗರಾವ** – ಶಾಹಬಾಶ, ನೀನು ಬಹಳ ಚತುರಳಿರುತ್ತೀ. ನಿನ್ನ ಮನಸ್ಸಿನಲ್ಲಿ ನನ್ನ ಉಪದೇಶವು ಇಷ್ಟು ನಟ್ಟಿದ್ದೀತೆಂದು ನನಗೆ ಗೊತ್ತಿದ್ದಿಲ್ಲ.

**ಕಮಲೆ—** ಇಷ್ಟೇನೂ ನನ್ನ ಸ್ತುತಿಯನ್ನು ಮಾಡುವ ಕಾರಣವಿಲ್ಲ. ಶಿಷ್ಯರ ಮನಸ್ಸಿನಲ್ಲಿ ಯಾವದೊಂದು ವಿಷಯವನ್ನು ಚೆನ್ನಾಗಿ ಬಿಂಬಿಸಿಕೊಡಬೇಕಾದರೆ ಗುರುವಿನಲ್ಲಿ ಅಂಥ ವಿದ್ವತ್ತೆಯೂ ಚಾತುರ್ಯವೂ ಬೇಕಾಗುತ್ತವೆ.

**ರಂಗರಾವ—** ಒಳ್ಳೇದು, ಅದಿರಲಿ. ನಿನ್ನೆ ಆ ಭೀಮವ್ವನು ತಂದುಕೊಟ್ಟ ಪತ್ರಕ್ಕೆ ನೀನು ಈ ಹೊತ್ತು ಉತ್ತರವನ್ನು ಕೊಡುವೆಯಾ?

**ಕಮಲೆ—** ನನ್ನ ಮನಸ್ಸಿನಲ್ಲಿ ಆ ಸಂಗತಿಯನ್ನು ನಮ್ಮ ತಂದೆಯ ಮುಂದೆ ತಿಳಿಸಬೇಕೆಂದು ಬಂದಿತ್ತು. ಆದರೆ ನೀವು ಹೇಳಿದ್ದರ ಮೇಲಿಂದ ನಾನು ಅದನ್ನು ಅವನ ಮುಂದೆ ತಿಳಿಸಲಿಲ್ಲ. ಮುಂದೆ ಏನು ಮಾಡಬೇಕೆಂಬುವದನ್ನು ನೀವೇ ಹೇಳಿರಿ. ನನಗೆ ತಿರುಗಿ ಬಂದು ಕಾಣೆಂದು ನಾನು ಅವಳಿಗೆ ಹೇಳಿದ್ದೆನು. ಅವಳು ಈಗ ಬಂದಾಳು.

**ರಂಗರಾವ—** ಒಳ್ಳೇದು. ಹಾಗಾದರೆ ಆ ಪತ್ರದಲ್ಲಿ ಏನು ಬರೆದಿರುತ್ತ ದೆಂಬುವದನ್ನು ನನಗೆ ಓದಿ ತೋರಿಸು.

**ಕಮಲೆ—** ಛೀ. ಏನಾದರೂ ಹೇಳುತ್ತೀರಿ. ನಾನೇನೂ ಅದನ್ನು ಓದಿ ತೋರಿಸುವದಿಲ್ಲ.

**ರಂಗರಾವ—** ನಿನ್ನ ಮೇಲೆ ಪ್ರೀತಿ ಮಾಡುವಂಥ ಕುಲೀನ, ಸುಶೀಲ, ಮತ್ತು ಚತುರ ಮನುಷ್ಯನು ಆ ಪತ್ರವನ್ನು ಬರೆದಿದ್ದಾನೆಂದು ತಿಳಿ. ಅಂದಮೇ ಲಾದರೂ ಅದನ್ನು ಓದಿ ತೋರಿಸುವಿಯೇನು?

**ಕಮಲೆ—** ಪುನಃ ನಿಮ್ಮ ಚೇಷ್ಟೆಗೆ ಆರಂಭವಾಯಿತೇನು? ದಯಮಾಡಿ ಸ್ವಲ್ಪ ತಡೆಯಿರಿ. ಆ ಪತ್ರವನ್ನೇ ನಿಮ್ಮ ಮುಂದೆ ಓದಿ ಬಿಡುತ್ತೇನೆ:— "ನನ್ನ ಹೃದಯರೂಪೀ ಮಾನಸ ಸರೋವರದಲ್ಲಿ ವಿಹಾರ ಮಾಡುತ್ತಿರುವ ಹಂಸ ರೂಪೀ ಪ್ರಿಯ ಕಮಲೆಯ ಸನ್ನಿಧಾನಕ್ಕೆ—

( " **ಕೋನಗಲಿ ಗಯೀಶ್ಯಾಮ** " ಎಂಬ ಧಾಟಿಯಂತೆ )

( ಶ್ರೀ. ನೇಸರಗಿಕೃತ )

॥ **ಪದ** ॥ ನೀನಪಹರಿಸಿದೆಯೆ । ಮನಸವಾ ॥ ಪಲ್ಲ ॥

ಮೊದಲೊಳುನಿನ್ನಯ । ಸದಮಲಪದವು । ಹೃದಯದೊಳುದಿಸಿದುದೆ ॥೧॥

ನಗುತಕೆಲುತಲಿತಿ । ಮೃಗಧೃತಲೋಚನೆ । ಬಗೆದೆನುನಿನ್ನನುನಾ ॥ ೨ ॥
ಸ್ವೀಕರಿಸೆಸೀ । ನಿಕಿಂಕರನನು । ವ್ಯಾಕುಲವೆನ್ನೊಳೇಕೆ ॥ ೩ ॥

ನಿನ್ನ ನಮ್ರಪೂರ್ವಕ ಸೇವಕ
**ರಂಗರಾವ.**"

ಆಯಿತೇ ನಿಮ್ಮ ಮನಸ್ಸಿನ ತೃಪ್ತಿ ?

**ರಂಗರಾವ**— ನಿಜವಾಗಿಯೂ ನಿನ್ನ ಕಂಠವು ಕೋಕಿಲೆಯಂತೆ ಬಹಳ ಮಂಜುಳವಿರುತ್ತದೆ ! ಇಂಥ ಒಂದು ಪ್ರಸಂಗದಿಂದಲೇ ನನಗೆ ಹೇಗೆ ತೃಪ್ತಿಯಾದೀತು ?

**ಕಮಲಿ**—ಸಾಕು ಸಾಕು. ನಿಮ್ಮ ಪ್ರಶಂಸೆಗೆ ನಾನು ಪಾತ್ರಳಲ್ಲ.

**ರಂಗರಾವ**—ಇರಲಿ ಬಿಡು. ಅದಕ್ಕೆ ಉತ್ತರವನ್ನು ನಾನು ಬರೆದಿದ್ದೇನೆ. ಬೇಕಾದರೆ ಇದನ್ನು ಕಳುಹಿಸಿಕೊಡು. ( **ಉತ್ತರವನ್ನು ತನ್ನ ಕೈಯಲ್ಲಿ ಹಿಡಿದು ತೋರಿಸುತ್ತಾನೆ.** )

**ಕಮಲಿ**—( **ಆತುರದಿಂದ** ) ಅದೇನದು ? ನಾನು ಓದುತ್ತೇನೆ. ಇತ್ತ ತನ್ನಿರಿ. ( **ಆ ಉತ್ತರವನ್ನು ಕೈಯಲ್ಲಿ ತೆಗೆದುಕೊಂಡು ಓದುತ್ತಾಳೆ.** )

"ಮಹಾ ಮೂರ್ಖ ಶಿರೋಮಣಿಯಾದ ಭೀಮರಾಯನ ಮಸ್ತಕಕ್ಕೆ ಚರಣಸಂಪುಷ್ಪಸೇವಾಪೂರ್ವಕ ಉತ್ತರ.

( **"ಬಲಾದೇ ಸಖಿ" ಎಂಬ ಧಾಟಿಯಂತೆ**)
( ಶ್ರೀ. ನೇಸರಿಗಿಕೃತ )

ನೀನೆಲೊಮೂಢಶಿರೋಮಣಿಯು ॥ ಪಲ್ಲ ॥
ಮೊದಲೊಳುನೋಡಲು । ಅಧಮನೆಂದುನೀ ।
ವಿದಿತವಾದುದೆಲವೊ ॥ ೧ ॥
ಪರಿಚಿತನಾಗಲು । ಪರಿಚಯವಾದುದು ।
ದುರುಳಭಾವವೆಲವೊ ॥ ೨ ॥
ಮಂದಮತಿಯೆನೀ । ನೆಂದಿಗಿದೇಸ್ಥಿತಿ ॥
ಯಿಂದಿಹುದುಚಿತವೆಲೊ ॥ ೩ ॥

" ನಿಮ್ಮ ಕೃಪಾಪ್ರಸಾದದಿಂದ ದೂರಿರಲಿಕ್ಕೆ ಪ್ರಯತ್ನಿಸುವ
**ಕಮಲಿ** "

ಇದೇ ಏನು ಕಳಿಸಿಕೊಡತಕ್ಕಂಥ ಉತ್ತರವು ? ನಾ ಒಲ್ಲೆ, ತಾಯಿ, ಇಂಥ ಉತ್ತರ ಕಳುಹಿಸಿಕೊಡಲಾರೆ. ಇದು ಜನರ ಕೈಯಲ್ಲಿ ಸಿಕ್ಕರೆ ಜನರು ನನಗೇ ನಂದಾರು ?

**ರಂಗರಾವ**—ಜನರೇನನ್ನುವರು ? ಆ ಮೂರ್ಖನ ಅಪಮಾನವನ್ನು ನೀನು ಯಥಾಯೋಗ್ಯವಾಗಿ ಮಾಡಿದಿ ಯೆಂದು ನುಡಿದು ನಿನ್ನ ಚಾತುರ್ಯವನ್ನು ವಿಶೇಷವಾಗಿ ಪ್ರಶಂಸೆ ಮಾಡುವರು !

( ಭೀಮರಾಯನು ದಾಸಿಯ ವೇಷದಿಂದ ಬರುವನು. )

**ಭೀಮರಾವ**— ಅವ್ವನವರೇ, ಆ ಪತ್ರಕ್ಕೆ ಉತ್ತರವನ್ನು ಬರೆದು ಕೊಡುವಿರಾ ?

**ಕಮಲೆ**—ಇದು ತೆಗೆದುಕೋ. ಆ ಪತ್ರದ ಮೇಲೆಯೇ ಉತ್ತರ ಬರೆದಿರುತ್ತೇನೆ. ( ಪತ್ರವನ್ನು ಕೊಡುತ್ತಾಳೆ. )

**ಭೀಮರಾವ**—ಹೀಗೇನು ? (ಉತ್ತರವನ್ನು ಓದುತ್ತಾನೆ.) ಒಳ್ಳೇದೊಳ್ಳೇದು. ಏ ಹುಡಿಗೀ, ನೀನು ನಿಶ್ಚಯವಾಗಿ ಈ ಪುರಾಣಿಕನಿಗೆ ಮರುಳಾಗಿರುತ್ತೀ! ನಿಲ್ಲು. ಇದನ್ನೆಲ್ಲ ನಿಮ್ಮಪ್ಪನಿಗೆ ಹೋಗಿ ತಿಳುಹಿಸುತ್ತೇನೆ.

**ರಂಗರಾವ**—( ಭೀಮರಾಯನ ತಲೆಯಮೇಲಿನ ಸೆರಗು ಒಮ್ಮೆಲೆ ಹಾರಿಹೊಡೆದು ) ವ್ಹಾಃ ಭೀಮವ್ವನು ಒಮ್ಮೆಲೆ ಭೀಮರಾವ ಆದಳು; ಬಹಳೇ ಚಮತ್ಕಾರವು! ನನಗೆ ಈ ಬಗ್ಗೆ ನಿನ್ನೆಯೇ ಸಂಶಯವು ಬಂದಿತ್ತು.

**ಭೀಮರಾವ**—ನಿನ್ನ ಮೇಲೆ ನನಗೆ ಮೊದಲಿನಿಂದಲೇ ಸಂಶಯವಿತ್ತು. ಈಗ ಅದು ನಿಶ್ಚಯವಾದಂತಾಯಿತು. ಸ್ವಲ್ಪ ನಿಲ್ಲು. ಈಗಲೇ ಆ ಲಕ್ಷ್ಮೀಪತಿರಾಯನ ಕಡೆಗೆ ಹೋಗಿ ಆ ಮುದುಕನ ಕಡೆಯಿಂದ ನಿಮ್ಮಿಬ್ಬರ ಪಾರಪತ್ಯವನ್ನು ಚೆನ್ನಾಗಿ ಮಾಡಿಸುತ್ತೇನೆ.

**ರಂಗರಾವ**—(ಸೆರಗು ಹಿಡಿದು ಜಗ್ಗಿ) ಎಲಾ, ಎತ್ತಕಡೆಗೆ ಹೊರಟೆ ? ನೀನು ಮಾಡಿದ ಅಪರಾಧದ ಬಗ್ಗೆ ಮೊದಲು ಪ್ರಾಯಶ್ಚಿತ್ತ ಭೋಗಿಸು. ಆಮೇಲೆ ಬೇಕಾದತ್ತ ಅಳುತ್ತ ಹೋಗು. ( ಅವನ ಮೇಲೆ ಕೈ ಎತ್ತುತ್ತಾನೆ. )

**ಕಮಲೆ**—ಅವನಿಗೆ ಹೊಡೆಯಬೇಡಿರಿ. ಅಕ್ಕನು ಇಲ್ಲಿದ್ದರೆ ಅವನ ಸಮಾಚಾರವನ್ನು ಚೆನ್ನಾಗಿ ತೆಗೆದುಕೊಳ್ಳುತ್ತಿದ್ದಳು. ನಿಮ್ಮ ಕೆಲಸವು ಅನಾಯಾಸದಿಂದ ಆಗುತ್ತಿತ್ತು.

**ಭೀಮರಾವ**— ಏನನ್ನುತ್ತೀರಿ? ನೀವು ತ್ರ್ಯಾಟಕವ್ವನಿಗೆ ಹೇಳುತ್ತೀರಾ? ಬೇಡಪ್ಪಾ, ಬೇಡ. ಆ ಮಹಾತ್ಮಳ ಹೆಸರು ಸಹ ಬೇಡ! ಅವಳ ಪ್ರಸಾದವು ನನಗೆ ಸಾಕು ಸಾಕಾಗಿ ಹೋಗಿರುತ್ತದೆ. ನಾನು ಸುಮ್ಮನೆ ನನ್ನ ದಾರೀ ಹಿಡಿದು ಹೋಗುತ್ತೇನೆ. ನನ್ನನ್ನು ಬಿಡಿರಿ. ನಾನು ನಿಮ್ಮ ಕಾಲು ಮುಗಿಯುತ್ತೇನೆ. (ಅಂಜಂಜುತ್ತ ಅತ್ತಿತ್ತ ನೋಡಿ, ರಂಗರಾಯನ ಕಾಲು ಬೀಳುತ್ತಾನೆ.)

**ರಂಗರಾಯನು**—(ಒಂದು ಸಾರೆ ಒದ್ದು) ಹೋಗು ಷಂಢಾ, ಇನ್ನೊಮ್ಮೆ ಇಂಥ ಮೂರ್ಖತನವನ್ನು ಮಾಡವಂತೆ ಬಹಳ ಎಚ್ಚರಿಕೆಯಿಂದ ನಡೆ!

**ಭೀಮರಾವ**— (ಸಿಟ್ಟಿನಿಂದ ಅವನ ಕಡೆಗೆ ನೋಡುತ್ತ ದೂರ ಹೋಗಿ) ನೋಡಿ ಕೊಳ್ಳುತ್ತೇನೆ. ಈ ಸೇಡು ತೀರಿಸದೆ ನಾನೆಂದಿಗೂ ಬಿಡಲಿಕ್ಕಿಲ್ಲ. (ಎಂದು ಅನ್ನುತ್ತ ಓಡಿ ಹೋಗುತ್ತಾನೆ.)

**ಕಮಲೆ**— ನನಗೆ, ತಾಯಿ, ಅಂಜಿಕೆ ಬಹಳ ಬರಹತ್ತಿರುತ್ತದೆ. ಈ ಸುಟ್ಟ ಮೋರೆಯವನು ಅಪ್ಪನ ಮುಂದೆ ಹೋಗಿ ಚಾಡಿ ಹೇಳಿವರೆ ಮುಂದೆ ನನ್ನ ಗತಿ ಏನಾದೀತು?

**ರಂಗರಾವ**— ನೀನು ಬಹಳ ಅಂಜುಬುರಕಿ ಕಾಣುತ್ತೀ. ಅವನು ಒಂದು ವೇಳೆ ಹೋಗಿ ಹೇಳಿದರೂ ಏನಾಗಬೇಕಾಗಿದೆ?

**ಕಮಲೆ**— ಹಾಗೇ ಸರಿ. ಪರದುಃಖವು ಶೀತಲವು! ಅಪ್ಪನು ಸಿಟ್ಟಾದರೆ ಏನು ಮಾಡಿಯಾನು ಏನು ಮಾಡಲಿಕ್ಕಿಲ್ಲ ಎಂಬದರ ನಿಯಮವಿಲ್ಲ! ಒಮ್ಮೆಲೇ ನನ್ನನ್ನು ಆ ಸುಡುಗಾಡ ಬಾಪೂರಾಯನಿಗೆ ಲಗ್ನಮಾಡಿಕೊಟ್ಟಾನು!

**ರಂಗರಾವ**— ಆದರೆ ಮುಂದೇನು?

**ಕಮಲೆ**— ಮುಂದೇನಂಬುವದು ನಿಮಗೆ ತಿಳಿಯುವದಿಲ್ಲೇ? ಇವನಿಗಿಂತಲು ಹೆಣದ ಕೂಡ ಲಗ್ನ ಮಾಡಿಕೊಳ್ಳುವದು ಏನು ಕೆಡಕು?

**ರಂಗರಾವ**— ಛೇ. ಛೇ. ಹಾಗೆ ಮಾಡಬಾರದು. ಬಾಪೂರಾಯನು ಸ್ವಲ್ಪ ವಯಸ್ಸು ಆದವನು ಇರುವದು ನಿಜವು. ಆದರೆ ಸಂಸಾರದ ಸ್ವಾರಸ್ಯವು ವಯಸ್ಸು ಆದವರಿಗೆ ತಿಳಿದಷ್ಟು ಅವಿವೇಕಿಗಳಾದ ತರುಣರಿಗೆ ತಿಳಿಯುವದಿಲ್ಲ. ಇದಲ್ಲದೆ ಅವನು ಮನೆಯಿಂದ ಉಂಡು ತಿಂದು ಸುಖಿಯಾಗಿರುತ್ತಾನೆ. ಅವನು

ನಿನ್ನ ಮೈಮೇಲೆ ಬೇಕುಬೇಕಾದಷ್ಟು ಆಭರಣಗಳನ್ನು ಇಡಿಸುವನು. ಅವನಲ್ಲಿ ಆಳುಮಂದಿಗೇನೂ ಕೊರತೆಯಿಲ್ಲ. ಅವನು ನಿನ್ನನ್ನು ತನ್ನ ಜೀವದಕಿಂತ ಹೆಚ್ಚಾಗಿ ನೋಡುವನು !

**ಕಮಲೆ** — ಎಷ್ಟಾರೆ ಚೇಷ್ಟೆ ಮಾಡುತ್ತೀರಿ ? ನನಗಂತೂ ಜೀವವು ಬೇಡಾಗಿ ಹೋಗಿರುತ್ತದೆ.

**ರಂಗರಾವ**— ಇಷ್ಟರಲ್ಲಿ ಜೀವವು ಬೇಡಾಯಿತೇ ? ಅಂದ ಮೇಲೆ ನೀನು ಯಾವ ರೀತಿಯಿಂದ ಜೀವ ಕೊಡುತ್ತೀ ಹೇಳು. **(ಸ್ವಲ್ಪ ತಡೆದು)** ಈ ಚೇಷ್ಟೆಯು ಒತ್ತಟ್ಟಿಗಿರಲಿ. ಜೀವ ಕೊಡುವದು ಮಹತ್ಪಾಪವು ! ಆ ಪ್ರಕಾರ ಮಾಡಿದರೆ ದೇವರು ಎಂದೆಂದಿಗೂ ಕ್ಷಮಿಸಲಾರನು.

**ಕಮಲೆ** — ಹಾಗಾದರೆ ನಾನೇನು ಮಾಡಲಿ ?

**ರಂಗರಾವ** — ಇಷ್ಟೇಕೆ ನಿರಾಶೆಯಾಗುತ್ತೀ ? ನಿನ್ನೆ ನಾನು ಸಹಜವಾಗಿ ರಂಗರಾಯನೆಂಬ ತರುಣ ಮನುಷ್ಯನನ್ನು ಕಂಡೆನು. ಅವನು ನಿನ್ನನ್ನು ಬೇಡುವದಕ್ಕಾಗಿ ನಿಮ್ಮ ತಂದೆಯ ಹತ್ತರ ಹೋಗಿದ್ದನು. ಆದರೆ ನಿಮ್ಮ ತಂದೆಯು ನಿನ್ನನ್ನು ಬಾಪೂರಾಯನಿಗೆ ಕೊಡುವದು ನಿಶ್ಚಯವಾಗಿರುತ್ತದೆಂದು ಅವನ ಮುಂದೆ ಹೇಳಿದನೆಂದು ಅವನೇ ನನಗೆ ತಿಳಿಸಿದನು. ಆದರೂ ಬಾಪೂರಾಯನು —

**ಕಮಲೆ**—ಪುನಃ ಆ ಸುಟ್ಟ ಮೋರೆಯವನ ಹೆಸರು ನನ್ನ ಮುಂದೆ ತೆಗೆಯಬೇಡರಿ. ನಾನು ಇಲ್ಲಿ ಇದ್ದರೆ ನನ್ನನ್ನು ಅಪ್ಪನು ಅವನಿಗೇ ಲಗ್ನಮಾಡಿ ಕೊಡುವದು ನಿಶ್ಚಯವು ! ಆದುದರಿಂದ ನಾನು ಎಲ್ಲಿಯಾದರೂ ಹೊರಟು ಹೋದರೆ ನೆಟ್ಟಗಾಗುವದು.

**ರಂಗರಾವ** — ನೀನೊಬ್ಬಳೇ ಓಡಿ ಹೋಗುವಿಯೇನು ? ನಿನ್ನ ಅವಸ್ಥೆಯು ಮುಂದೆ ಏನಾದೀತೆಂಬುವದನ್ನು ವಿಚಾರ ಮಾಡಿರುವಿಯಾ ? ನಿನಗೆ ಜನಾಪವಾದದ ಅಂಜಿಕೆಯು ಎಳ್ಳಷ್ಟಾದರೂ ಇಲ್ಲೇ ?

**ಕಮಲೆ** — ನಾನು ಜನಾಪವಾದಕ್ಕೆ ಹೆದರಿ ನನ್ನ ಜನ್ಮವನ್ನು ಮಣ್ಣುಪಾಲು ಮಾಡಬೇಕೆ ? ಅದೇನೂ ನನ್ನ ಕೈಯಿಂದಾಗದ ಮಾತು. ಇನ್ನು ಇಲ್ಲಿಂದ ಹೊರಟು ಹೋಗುವ ಹೊರತು ಎರಡನೇ ಮಾರ್ಗವೇ ಇಲ್ಲ !

**ರಂಗರಾವ**—ನಿನ್ನ ನಿಶ್ಚಯವು ಇನ್ನು ಗಟ್ಟಿಯಾಯಿತೇ ? ಇನ್ನು ಮೇಲೆ ನೀನು ನಿನ್ನ ನಿಶ್ಚಯವನ್ನು ತಿರುಗಿಸುವದಿಲ್ಲವಷ್ಟೇ ?

**ಕಮಲೆ**—ಗಟ್ಟಿ. ಗಟ್ಟಿ. ಎಂದೆಂದಿಗೂ ತಿರುಗಿಸುವದಿಲ್ಲ, ನೀವು ಮಾತ್ರ ನನಗೆ ಅಡ್ಡ ಬರಬಾರದು. ಇಷ್ಟೇ ನಾನು ನಿಮಗೆ ಸೆರಗೊಡ್ಡಿ ಬೇಡಿ ಕೊಳ್ಳುತ್ತೇನೆ.

**ರಂಗರಾವ**—ಹಾಗಾದರೆ ನನ್ನ ನಿಶ್ಚಯವನ್ನು ನೀನು ಕೇಳಿಕೋ. ನಿನ್ನ ಸಂಗಡ ನಾನು ಬಾರದೆ ಎಂದೆಂದಿಗೂ ಇರಲಾರೆನು !

**ಕಮಲೆ**—ಅಂದರೇನು ?

**ರಂಗರಾವ**— ಎರಡನೇದ್ದೇನು ? ಹಿಂದೆ ನಿನಗೊಂದು ಪ್ರಶ್ನೆಯನ್ನು ವಿಚಾರಿಸಿದ್ದೆನು. ಅದು ನಿನ್ನ ನೆನಪಿನಲ್ಲಿರುತ್ತದೋ ?

**ಕಮಲೆ**—ಇದೇನು ಚೇಷ್ಟೆಯ ಹೊತ್ತೇ ?

**ರಂಗರಾವ**—ಕಮಲೇ, ನಾನು ನಿಜವಾದದ್ದನ್ನೇ ಆಡುತ್ತೇನೆ. ನಾನು ಚೇಷ್ಟೆ ಮಾಡುವದಿಲ್ಲ. ನಿನ್ನ ಕಿವಿಯೊಳಗೆ ಹೇಳುತ್ತೇನೆ, ಕೇಳು. (ಆಕೆಯ ಕಿವಿಯಲ್ಲಿ ಹೇಳುತ್ತಾನೆ.)

**ಕಮಲೆ**—ಇದು ನಿಜವೇ ?

**ರಂಗರಾವ**—ನಿನ್ನ ಕೊರಳಾಣೆಯೆಂದರೂ ನಿಜವು. ನನ್ನ ಮೇಲೆ ನೀನು ನಂಬಿಗೆಯನ್ನಿಡು. ನಾನು ನಿನ್ನ ಗೂಡ ಎಂದಿಗೂ ಅನ್ಯಥಾ ನಡೆಯಲಿಕ್ಕಿಲ್ಲ.

**ಕಮಲೆ**—ನನಗೆ, ತಾಯಿಾ, ಏನೂ ತಿಳಿಯಲೊಲ್ಲದು. ಹೇಗಾದರೂ ಮಾಡಿ ನೀವು ನನ್ನನ್ನು ಈ ಸಂಕಟದೊಳಗಿಂದ ಪಾರುಮಾಡಿರಿ. ನಾನು ನಿಮ್ಮ ಮಾತಿನ ಹೊರತಿಲ್ಲ.

**ರಂಗರಾವ** —ಇದು ನಿನ್ನ ವಚನವಷ್ಟೇ ? ನೋಡು, ಚೆನ್ನಾಗಿ ವಿಚಾರ ಮಾಡು. ಇಲ್ಲದಿದ್ದರೆ ನಾನು ಸುಮ್ಮಸುಮ್ಮನೆ ಬಲಿ ಬಿದ್ದೇನು.

**ಕಮಲೆ**—ನಾನು ನಿಮಗೆ ಬೇಕಾದ ಆಣೆಯನ್ನು ಕೊಡುತ್ತೇನೆ. ಈ ಪಾದದ ಸಾಕ್ಷಿಯೆಂದರೂ ಸುಳ್ಳು ಹೇಳುವದಿಲ್ಲ-

**ರಂಗರಾವ**—ಹಾಗಾದರೆ ನೀನು ನಿರ್ಭೀತಿಯಿಂದ ಇರು. ಈ ಕೆಲಸ ವಲ್ಲಿ ನೀನು ಅಬಚಿಯ ಸಹಾಯ ತೆಗೆದುಕೊಳ್ಳುವದು ತೀರಾ ಆವಶ್ಯವದೆ.

**ಕಮಲೆ**—ಅದು ನನಗೆ ಕೂಡಿತು. ನನ್ನ ಮೇಲೆ ಅವಳ ಪ್ರೀತಿಯು ವಿಶೇಷವಿರುತ್ತದೆ.

**ರಂಗರಾವ**— ಹಾಗಾದರೆ ಇನ್ನು ಹೋಗು. ನಾನು ಅದರದೆಲ್ಲ ಚೆನ್ನಾಗಿ ವ್ಯವಸ್ಥೆಯನ್ನು ಮಾಡುತ್ತೇನೆ. ನೀನು ಇಲ್ಲಿ ನಿಂತುಕೊಂಡು ಬಹಳ ಹೊತ್ತಾಯಿತು. ಅಜಚಿಯು ಮನೆಗೆ ಬಂದಿರಬಹುದು. (ಕಮಲೆಯು ಹೋಗುತ್ತಾಳೆ.) ದೇವರೇ! ನಿನ್ನ ಕೃಪೆಯಿಂದ ನನಗೆ ನಿಶ್ಚಯವಾಗಿ ಯಶಸ್ಸು ಸಿಗುವ ಸಂಭವವು ಕಾಣುತ್ತದೆ. ಯೋಗ್ಯವಾಗಿ ವಿಚಾರ ಮಾಡಿದರೆ ಆ ಭೀಮರಾಯನ ಮೂರ್ಖತನದಿಂದಲೇ ನನಗೆ ಬಹಳ ಸಹಾಯವಾಯಿತೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಆದರೆ ಇನ್ನೂ ವೆಂಕಣ್ಣನಾಯಕನು ಏಕೆ ಬಂದಿರಲಿಕ್ಕಿಲ್ಲ? ಒಳ್ಳೇದು. ನಾನೇ ಅವನ ಸ್ಥಳಕ್ಕೆ ಹೋಗಿ ಇಲ್ಲಿ ನಡೆದ ಎಲ್ಲ ವೃತ್ತಾಂತವನ್ನು ಅವನ ಮುಂದೆ ತಿಳುಹಿಸುವೆನು. ಇದನ್ನು ಕೇಳಿದರೆ ಅವನಿಗೆಷ್ಟು ಆನಂದವಾದೀತು?

---

## ಪ್ರವೇಶ ೩ನೇದ್ದು.

### ಕುಸುಮಪುರ-ಒಂದು ರಾಜಬೀದಿ.

(ವೆಂಕಣ್ಣನಾಯಕನೂ, ತಮ್ಮನೂ ಬರುತ್ತಾರೆ.)

**ವೆಂಕಣ್ಣನಾಯಕ**—ಹೌದೇನು? ಕೆಲಸವು ಸಿದ್ಧಿಗೆ ಮುಟ್ಟಿತೆನ್ನುತ್ತೀಯಾ?

**ತಮ್ಮಾ**—ಸಿದ್ಧಿಗೆ ಹೋಗದೆ ಹೇಗೆ ಉಳಿದೀತು? ಈ ತಮ್ಮನು ಹೋದ ಮೇಲೆ ಕೆಲಸವನ್ನು ಪೂರ್ಣ ಮಾಡಿಕೊಳ್ಳದೆ ಎಂದಿಗಾದರೂ ಹಾಗೇ ಬಂದಾನೇ? ಬಹಳೊತ್ತಿನತನಕ ನಾನು ದಾರಿಯಲ್ಲಿ ಕಣ್ಣಿಗೆ ಕಣ್ಣು ಹಚ್ಚಿಕೊಂಡು ಕೂತಿದ್ದೆ. ಹೊತ್ತು ಮುಣುಗಿ ಕತ್ತಲ ಆಗುತ್ತ ಬಂದಿತ್ತು. ಯಾರೂ ಅಲ್ಲಿ ಬರಲಿಲ್ಲವೆಂದು ನಾನು ಬೇಸತ್ತು ಮನೆಗೆ ಬರಬೇಕೆಂದು ಹೊರಟಿದ್ದೆನು. ಅಷ್ಟರಲ್ಲಿ ಒಬ್ಬ ಮುದುಕನು ಅಲ್ಲಿಗೆ ಬಂದನು. ಅವನಿಗೆ ಇಲ್ಲದ್ದೊಂದು ಗುಳಿಗೇ ಹೊಡದು ಅವನನ್ನು ನನ್ನ ಸಂಗಡ ಕರಕೊಂಡು ಬಂದಿರುತ್ತೇನೆ. ಅವನು ನನ್ನ ಹಿಂದೆ ಬರಲಿಕ್ಕೆ ಹತ್ತಿರುತ್ತಾನೆ. ಅಕೋ, ಅತ್ತ ಕಡೆ ನೋಡಿರಿ. ಅವನು ಕೋಲು ಊರುತ್ತ ಹೇಗೆ ಜಂಭದಿಂದ ಬರಲಿಕ್ಕೆ ಹತ್ತಿರುತ್ತಾನೆ?

**ವೆಂಕಣ್ಣನಾಯಕ**—ಶಾಹಬಾಸ! ಮುದಕನಂತೂ ನೆಟ್ಟಗೆ ಕಾಣು ತ್ತಾನೆ. ಇವನನ್ನು ನಮ್ಮ ಕೆಲಸಕ್ಕೆ ಉಪಯೋಗ ಮಾಡಿಕೊಳ್ಳಬೇಕು. (ಮುದುಕನು ಬರುತ್ತಾನೆ.) ಅಜ್ಜನವರೇ, ನಿಮಗೆ ಸಾಷ್ಟಾಂಗ ಪ್ರಣಾಮವನ್ನು ಮಾಡುತ್ತೇನೆ.

**ಮುದುಕ**—ಬಾಳಾ, ನಿನಗೆ ಉದ್ದಂಡಾಯುಷ್ಯವಾಗಲಿ. ಚಿನಿವಾಲಗಟ್ಟಿಗೆ ಹೋಗುವ ಹಾದಿಯು ಇದೇ ಇರುತ್ತದೋ ?

**ವೆಂಕಣ್ಣನಾಯಕ**—( ತನ್ನಷ್ಟಕ್ಕೆ ) ಮುದುಕನಂತೂ ಬಹಳ ಅಂತಃಕರಣದವನೆಂದು ಕಾಣಿಸುತ್ತದೆ. ಮೊದಲೇ ನನಗೆ 'ಬಾಳಾ' ಎಂದು ಕರೆದನು. ( ಬಹಿರಂಗವಾಗಿ ) ಅಜ್ಜನವರೇ, ನೀವು ಪರಊರವರಂತೆ ಕಾಣಿಸುತ್ತೀರಿ. ನೀವು ಯಾವ ಊರವರು ?

**ಮುದುಕ**—ನಾನು ಮಣಿಪುರದವನು. ರಾಮೇಶ್ವರದ ಯಾತ್ರೆಗೆ ಹೊರಟಿದ್ದೇನೆ.

**ವೆಂಕಣ್ಣನಾಯಕ**—ಏನಂದಿರಿ ? ನೀವು ಮಣಿಪುರದವರೇ ? ಅಯ್ಯೋ. ಬಹಳ ಕೆಟ್ಟದಾಯಿತು ! ( ಎಂದು ಉಸುರು ಹಾಕುತ್ತಾನೆ. )

**ಮುದುಕ**—ಯಾಕರೆಪ್ಪಾ, ಹೀಗೇಕೆ ಉಸರು ಹಾಕುತ್ತೀರಿ ? ನಾನು ಮಣಿಪುರದವನಿದ್ದರೇನಾಯಿತು ?

**ವೆಂಕಣ್ಣನಾಯಕ**— ಏನಾಯಿತು ? ಸರ್ವನಾಶವೇ ಘಾತವಾಯಿತು ನೀವು ಯಾವ ಕೆಟ್ಟ ಮುಹೂರ್ತದಲ್ಲಿ ಊರು ಬಿಟ್ಟಿರೋ ತಿಳಿಯದು !

**ತಮ್ಮಾ**—( ತನ್ನಷ್ಟಕ್ಕೆ ) ಅಲಲ ! ಎಷ್ಟು ಪರಿ ಡಾಂಭಿಕತನವಿದು ? ಹೇಗೆ ಮರಗಿದಂತೆ ತೋರಿಸುತ್ತಾನೆ ? ಇವನು ಅವನಿಗಿಂತ ಎಷ್ಟು ಪರಿ ಚಿಂತೆ ಮಾಡುತ್ತಾನೆಂದು ಅರಿಯದವರು ತಿಳಕೊಳ್ಳಬೇಕು !

**ಮುದುಕ**—ಏನಿರಿ, ನಾನು ಕೆಟ್ಟ ಮುಹೂರ್ತದಲ್ಲಿ ಊರು ಬಿಟ್ಟೆನೆಂದು ನೀವು ಉದ್ಗಾರ ಹೊರಡಿಸಿದ ಕಾರಣವೇನು ?

**ವೆಂಕಣ್ಣನಾಯಕ**—ಅದನ್ನೇನೂ ನನಗೆ ವಿಚಾರಿಸಬೇಡಿರಿ. ಆದರೆ ನಿಮಗೆ ಈ ಪ್ರಕಾರ ನೋಡೀ ನೋಡೀ ಮೃತ್ಯುವಿನ ಬಾಯಲ್ಲಿ ಬಂದು

ಬೀಳಲಿಕ್ಕೆ ಯಾರು ಬುದ್ಧೀ ಕೊಟ್ಟರು ? ನನ್ನ ಮಾತು ಕೇಳಿ ನಿಮಗೆ ಇಷ್ಟೊಂದು ಆಶ್ಚರ್ಯವಾದುವರ ಮೇಲಿಂದ ನಮ್ಮ ನಿಮ್ಮ ಅರಸರ ನಡುವೆ ದ್ವೇಷ ಬೆಳೆದಿರುವದು ನಿಮಗೆ ಗೊತ್ತಿದ್ದಂತೆ ಕಾಣಿಸುವದಿಲ್ಲ !

**ಮುದುಕ**—ಛೇ. ನನಗೆ ಅದೇನೂ ಗೊತ್ತಿಲ್ಲ. ನಾನು ಈಗ ನಾಲ್ಕೈದು ತಿಂಗಳುಗಳಿಂದ ಪ್ರವಾಸದಲ್ಲಿಯೇ ಇರುತ್ತೇನೆ. ಯಾವ ಕಾರಣದಿಂದ ಈ ದ್ವೇಷವು ಬೆಳೆಯಿತು ? ಹಾಗೂ ಆ ದ್ವೇಷದಿಂದ ನನಗೆ ಇಲ್ಲಿ ಬಂದುದಕ್ಕೆ ಅಂಜಿಕೆಯೇನು? ಸ್ವಲ್ಪ ಹೇಳಿರಿ, ನೋಡೋಣ.

**ವೆಂಕಣ್ಣನಾಯಕ**—ಹೇಳುತ್ತೇನೆ ಕೇಳಿರಿ. ನಮ್ಮ ಊರೊಳಗಿನ ಕೆಲವು ವ್ಯಾಪಾರಸ್ಥರು ನಿಮ್ಮ ಅರಸನ ಸೀಮಾಂತರದಲ್ಲಿದ್ದಾಗ್ಗೆ ನಿಮ್ಮ ಅರಸನು ಅವರ ಹತ್ತರ ಇದ್ದುಬಿದ್ದುದನ್ನೆಲ್ಲ ಸುಲಕೊಂಡು ಅವರಿಗೆ ಹೊಡದು ಬಡದು ತನ್ನ ರಾಜ್ಯದೊಳಗಿಂದ ಹೊರಗೆ ಹಾಕಿದನು. ಈ ವರ್ತಮಾನವು ನಮ್ಮ ಅರಸನಿಗೆ ಮುಟ್ಟಿದ ಕೂಡಲೆ ಅವನು ಈ ನಮ್ಮ ಸೀಮಾಂತರದಲ್ಲಿ ಮಣಿಪುರದವರು ಯಾರಾದರೂ ಸಿಕ್ಕರೆ ಅವರನ್ನು ಒಮ್ಮೆಲೇ ಶೂಲಕ್ಕೇರಿಸಬೇಕೆಂದು ಅಪ್ಪಣೆಯನ್ನು ವಿಧಿಸಿರುತ್ತಾನೆ.

**ಮುದುಕ**—ಇದು ನಿಜವೇನು ? ದೇವರೇ, ನನ್ನ ಮೇಲೆ ಎಂಥ ಕೆಟ್ಟ ಪ್ರಸಂಗವನ್ನು ತಂದೆ ? ನಾನು ಹೊರಟ ಮುಹೂರ್ತವು ನಿಶ್ಚಯವಾಗಿ ಕೆಟ್ಟದಿರಬಹುದು. ನನ್ನ ಯಾತ್ರೆಯು ಇಲ್ಲಿಯೇ ಮುಗಿಯಿತು. ನಾನು ನನ್ನ ಮಕ್ಕಳು ಮರಿಗಳ ಪಾಲಿಗೆ ಹೊರತಾದೆನು. ಅಯ್ಯೋ ವಿಧಿಯೇ ! ( ಎಂದು ಉಸರುಬಿಡುತ್ತ ನೆಲಕ್ಕೆ ಕುಕ್ಕರಿಸುತ್ತಾನೆ. )

**ವೆಂಕಣ್ಣನಾಯಕ**—ಇಂಥ ಕೆಟ್ಟ ಪ್ರಸಂಗವು ನಿಮ್ಮ ಮೇಲೆ ನಿಮ್ಮ ಮುಪ್ಪಿನ ಕಾಲದಲ್ಲಿ ಬಂದುದಕ್ಕಾಗಿ ನನಗೆ ನಿಶ್ಚಯವಾಗಿ ಬಹಳ ವ್ಯಸನವಾಗುತ್ತದೆ. ( ದೋತರದಿಂದ ತನ್ನ ಕಣ್ಣೀರು ಒರಿಸಿಕೊಳ್ಳುತ್ತಾನೆ. )

**ತಮ್ಮಾ**—(ಮಗ್ಗಲಿಗೆ) ಇವನ ಠಕ್ಕತನವು ಎಷ್ಟಿರುತ್ತದೆ ? ಇವನ ಕಣ್ಣೊಳಗೆ ಒಂದು ಹನಿಯಾದರೂ ನೀರು ಬಂದಿದ್ದರೆ ಆಣೆ.

**ಮುದುಕ**—ಬಾಳಾ, ಈಗ ನೀನೇ ನನ್ನ ಜೀವ ಬದುಕಿಸು. ಹೇಗಾದರೂ ಮಾಡಿ ನನ್ನನ್ನು ಈ ಸಂಕಟದಿಂದ ಪಾರುಮಾಡು. ನಿನ್ನ ಉಪಕಾರವನ್ನು

ನಾನು ಜನ್ಮ ಜನ್ಮಾಂತರದಲ್ಲಿ ಮರೆಯಲಿಕ್ಕಿಲ್ಲ. ನನ್ನ ಮಕ್ಕಳು ಮರಿಗಳು ನಿನ್ನನ್ನು ನಿರಂತರವಾಗಿ ಹಾಡಿ ಹರಿಸುವರು.

**ವೆಂಕಣ್ಣನಾಯಕ**— ನಿಮ್ಮನ್ನು ನೋಡಿ ನನಗೆ ಬಹಳ ಕನಿಕರಹುಟ್ಟುತ್ತದೆ. ಆದರೆ ನಾನೇನು ಮಾಡಲಿ ? ಯಾವನಾವರೂ ಮಣಿಪುರದ ಗೃಹಸ್ಥನು ಇಲ್ಲಿಗೆ ಬಂದುದನ್ನು ನಾನು ನೋಡೀ ನೋಡೀ ಆತನನ್ನು ನಮ್ಮ ಅರಸನ ಓಲಗಕ್ಕೆ ಒಪ್ಪಿಸದೆ ಬಿಟ್ಟರೆ ನನಗೆ ಸಹ ದೇಹಾಂತಶಿಕ್ಷೆಯಾಗುವದು. ಈ ಪ್ರಸಂಗದಲ್ಲಿ ಯಾರ ಆಟವೂ ನಡೆಯದು. ನಿಮ್ಮನ್ನು ಜೀವದಿಂದ ಉಳಿಸಬೇಕಾದರೆ ನಾನೇ ಮೊದಲಿಗೆ ನನ್ನ ಜೀವಕ್ಕೆ ಎರವಾಗಬೇಕಾಗುವದು. ಧರ್ಮ ಮಾಡುವಾಗ್ಗೆ ಕರ್ಮವು ಅಡ್ಡಬರುವದು. ಒಂದು ವೇಳೆ ನಿಮ್ಮನ್ನು ಒಯ್ದು ನಮ್ಮ ಅರಸನ ಓಲಗಕ್ಕೆ ಒಪ್ಪಿಸಿದರೆ ನಿಮ್ಮನ್ನು ಕೊಲ್ಲಿಸಿದ ಪಾಪವು ನನ್ನ ತಲೆಯ ಮೇಲೆ ಬರುವದು. ಇದಕ್ಕೇನು ಮಾಡಬೇಕೆಂಬ ವಿಚಾರವು ನನಗೆ ತೋಚಲೊಲ್ಲದು.

**ಮುದುಕ**—ಹಾಗಾದರೆ ನನ್ನ ಆಯುಷ್ಯವು ಇಂದಿಗೇ ಮುಗಿಯಿತೋ ? ಬಾಳಾ, ಹೇಗಾದರೂ ಮಾಡಿ ನನ್ನ ಜೀವವನ್ನು ಉಳಿಸಿ ನಿನ್ನ ಪಾಲಿಗೆ ಪುಣ್ಯ ಕಟ್ಟಿಕೋ.

**ವೆಂಕಣ್ಣನಾಯಕ**—ಒಳ್ಳೇದು. ಆದರೆ ನಿಮಗೆ ದಾರಿಯೊಳಗೆ ಆ ಮಾವಿನ ತೋಟದ ಸಮೀಪದಲ್ಲಿಯ ಪೋಲಿಸ ಚವಕಿಯವರು ಕೇಳಲಿಲ್ಲೇ ?

**ಮುದುಕ**—ಅಲ್ಲಿಯ ಸಿಪಾಯರು ತಂಬಾಕು ಸೇದುವಲ್ಲಿ ತೊಡಗಿದ್ದರು. ಇದಲ್ಲದೆ ನನ್ನ ಹತ್ತರ ಸಾಮಾನುಗಳ ಗಂಟು ಏನೂ ಇದ್ದಿಲ್ಲ. ಅದೆಲ್ಲ ನನ್ನ ಹಿಂದೆ ಬರುವ ನನ್ನ ಆಳುಮಗನ ಕಡೆಗೆ ಇರುತ್ತದೆ. ನನ್ನ ಸಂಗಡ ಆ ಬಡವನೂ ಸಾಯುವ ಹೊತ್ತು ಬಂದಿತು, ಕಂಡಿಯಾ !

**ವೆಂಕಣ್ಣನಾಯಕ** – ಆ ಚವಕಿಯ ಸಿಪಾಯರು ನಿಮ್ಮನ್ನು ನೋಡದೆ ಇದ್ದದ್ದು ಒಂದು ರೀತಿಯಿಂದ ಬಹಳ ನೆಟ್ಟಗಾಯಿತು. ಈಗ ನೀವು ನನ್ನ ಸಂಗಡ ನನ್ನ ಮನೆಗೆ ನಡೆಯಿರಿ. ನನ್ನ ತೀರ್ಥರೂಪರಾದ ಲಕ್ಷ್ಮಣರಾಯರೆಂಬವರು ಮಯೂರಪುರದಿಂದ ಇಲ್ಲಿ ಎರಡು ಮೂರು ದಿನಸಗಳಲ್ಲಿ ಬರತಕ್ಕವರಿದ್ದಾರೆ.

ಅವರೇ ನೀವೆಂಬದಾಗಿ ನಾನು ಊರಲ್ಲಿ ಸುದ್ದೀ ಹರವುತ್ತೇನೆ. ಆದರೆ ನೀವು ಮಾತ್ರ ನಾನು ಹೇಳಿದಂತೆ ನಡೆಯಬೇಕು. ಈ ಮಾತಿಗೆ ನೀವು ಒಪ್ಪುವಿರಾ ?

**ಮುದುಕ**—ಬಾಳಾ, ನನ್ನ ಒಪ್ಪಿಗೆಯನ್ನು ಏನು ಕೇಳುತ್ತೀ ? ನಾನು ಸುಳ್ಳೇ ನಿನ್ನ ತಂದೆಯೆಂದು ಹೇಳಿ ಒಣ ಪ್ರತಿಷ್ಠೆಯನ್ನು ಪಡೆದುಕೊಳ್ಳದೆ ನಿನ್ನ ಮೇಲೆ ನಿಜವಾದ ತಂದೆಯಂತೆ ಪ್ರೀತಿ ಮಾಡುವೆನು. ನೀನು ನನಗೆ ಜೀವದಾನ ಕೊಟ್ಟೆ. ಇದಕ್ಕಿಂತಲು ನನಗೆ ಹೆಚ್ಚಿಗೇನು ಬೇಕು ?

**ತಮ್ಮಾ**— ( ಮಗ್ಗಲಿಗೆ ) ಭಲೆ ವೆಂಕಣ್ಣಾ ! ಮುದುಕನಿಗೆ ಎಷ್ಟು ಬೇಗನೆ ನಿನ್ನ ಗುಳಿಗೆಯು ನಾಟಿತು ? ಅವನಿಗೆ ಏನು ನೀನು ಮಳ್ಳುಗಬ್ಬು ತಿನ್ನಿಸಿದಿಯೋ ದೇವರಿಗೇ ಗೊತ್ತು ! ಈ ಮುದುಕನು ಇನ್ನು ನಮ್ಮ ಧನಿಯ ಅಪ್ಪನು ಆಗು ತ್ತಾನೆ. ಇವನು ಎಲ್ಲಿಯಾದರೂ ಕುಂಟಲಿಗನು ಇದ್ದರೆ ಏನು ಗತಿ ? ಇವನಿಗೆ ನಾನು ಹೇಗೆ ಕೈಮುಗಿಯಬೇಕು? ಅದು ನನ್ನ ಕಡೆಯಿಂದ ಎಂದೆಂದಿಗೂ ಆಗದು.

**ವೆಂಕಣ್ಣನಾಯಕ**—( ತಮ್ಮನಿಗೆ ಹೊರಗೆ ) ಎಲೇ ತಮ್ಮಾ, ಅಗಸಿಯು ಹತ್ತರ ಇವನ ಆಳು ಮನುಷ್ಯನು ಬರುತ್ತಿರಬಹುದು. ಅವನನ್ನು ಅತ್ತಿಂದತ್ತ ಎಲ್ಲಿಯಾದರೂ ಒಯ್ದು ಇಟ್ಟು ಬಿಡು. ಅವನದೂ ಇವನದೂ ಗಂಟು ಬೀಳ ಗೊಡಬೇಡ. (ಮುದುಕನಿಗೆ) ಅಪ್ಪಾ, ನಡೆಯರಿನ್ನು.

**ಮುದುಕ**—ಮಗನೇ ನಡೆ. ಹೋಗೋಣ.

**ತಮ್ಮಾ**—ಅಬಬ ! ಇವರಿಬ್ಬರೂ ಎಂಥ ಬೇಗನೆ ತಂದೆ ಮಕ್ಕಳಾದರು ! ಈ ವೆಂಕಣ್ಣನು ದಾರಿಯಲ್ಲಿಯೇ ಅಪ್ಪನನ್ನು ಹುಟ್ಟಿಸಿಕೊಂಡನು. ಅಪ್ಪಗಳು ಈಗ ಬಹಳ ಅಗ್ಗವಾಗಿರುತ್ತಾರೆಂದು ಕಾಣುತ್ತದೆ. ನಾನೂ ಒಬ್ಬ ದುಡ್ಡಿದ್ದ ಅಪ್ಪ ನನ್ನು ಹುಡುಕಿಕೊಂಡು ಬಿಟ್ಟರೆ ಎರಡನೆಯವರ ಹತ್ತರ ದುಡಿಯುವ ಕಟಕಟ ಯಾದರೂ ತಪ್ಪೀತು ! ( ನಗುತ್ತ ಹೋಗುತ್ತಾನೆ. )

---

## ಪ್ರವೇಶ ೪ ನೇದ್ದು.

## ವಿಜಯಪುರ--ಪ್ರತಾಪರಾಯನ ಮನೆಯ ಕೋಣೆ.

( ತ್ರಾಟಿಕೆಯೂ ನೀಲನೂ ಬರುತ್ತಾರೆ. )

**ನೀಲಾ**— ಅಪ್ಪನವರೇ, ನಾನೇನು ಮಾಡಲಿ? ನೀವೇ ಹೇಳಿರಿ. ನೀವು ಉಪವಾಸಬಡುವದನ್ನು ನೋಡಿ ನನ್ನ ಜೀವವು ಬಹಳ ಮರಗುತ್ತದೆ. ನಾನು ಏನಾದರೂ ಫಲಹಾರವನ್ನು ನಿಮಗೆ ತಂದು ಕೊಡಬೇಕೆಂದು ನನ್ನ ಮನಸ್ಸಿನಲ್ಲಿ ಬಹಳ ಉಂಟು. ಆದರೆ ನಾನು ತಂದುಕೊಟ್ಟದ್ದನ್ನು ನಮ್ಮ ಧನಿಯು ನೋಡಿದರೆ ಅವನು ನನ್ನನ್ನು ದನಬಡದಂತೆ ಬಡಿದಾನೆಂತಲೇ ನಾನು ಬಹಳ ಹೆದರುತ್ತೇನೆ.

**ತ್ರಾಟಿಕಾ**—( ತನ್ನಷ್ಟಕ್ಕೆ ) ದೇವರೇ, ನಾನು ಇನ್ನೇನು ಮಾಡಲಿ? ನನ್ನ ಗಂಡನು ನನಗೆ ದಿನದಿನಕ್ಕೆ ಹೆಚ್ಚೆಚ್ಚು ಉಪದ್ರವ ಕೊಡಹತ್ತಿರುತ್ತಾನೆ. ಅವನು ನನ್ನನ್ನು ಮದುವೆಮಾಡಿಕೊಂಡದ್ದು ನನ್ನನ್ನು ಕೊಲ್ಲುವದಕ್ಕಾಗಿಯೇ ಎಂದು ಕಾಣುತ್ತದೆ! ಮನೆಯಲ್ಲಿ ಗಂಡನೂ ನನ್ನಮಾತು ಕೇಳುವದಿಲ್ಲ; ಆಳು ಮನುಷ್ಯರೂ ಕೇಳುವದಿಲ್ಲ. ನಾನು ಹೆಸರಿಗೆ ಮಾತ್ರ ಮನೆಯ ಯಜಮಾನತಿಯು. ನನ್ನ ಅಪ್ಪಣೆಯನ್ನು ಕೇಳುವವರು ಒಬ್ಬರೂ ದಿಕ್ಕಿಲ್ಲ. ನನಗೆ ಒಬ್ಬರಿಗೂ ಬಾಯಿ ತೆಗೆಯುವ ಪ್ರಸಂಗವು ಇಂದಿನ ತನಕ ಬಂದಿದ್ದಿಲ್ಲ. ಈಗ ಮಾತ್ರ ಬಂದಿರುತ್ತದೆ. ಹೊಟ್ಟೆಗೆ ಅನ್ನವಿಲ್ಲದಿದ್ದರೂ ಚಿಂತಿಲ್ಲ. ಸ್ವಸ್ಥವಾಗಿ ಒಂದು ಗಳಿಗೆ ಹೊತ್ತು ಮಲಗಿಕೊಂಡೇನಂದರೆ ಅದು ಸಹ ಗತಿಯಿಲ್ಲ. ಮನೆಯಲ್ಲಿ ಹಗಲಿರುಳು ಒದರಾಟ ಚೀರಾಟಗಳು ನಡೆದಿರುವದರಿಂದ ಕಣ್ಣಿಗೆ ಕಣ್ಣು ಹಚ್ಚಲಿಕ್ಕೆ ಸಹ ನನಗೆ ಅನುಕೂಲವಿಲ್ಲ. ಗಂಡನ ಬೈಗಳುಗಳನ್ನು ತಿಂದು ಹೊಟ್ಟೆತುಂಬಿಸಿಕೊಳ್ಳುವದು, ಮತ್ತು ಕಣ್ಣು ತೆರೆದುಕೊಂಡು ನಿದ್ದೆಮಾಡುವದು ಪ್ರತಿದಿವಸ ನಡೆದಿರುತ್ತವೆ. ಇಷ್ಟೆಲ್ಲ ಸೌಭಾಗ್ಯವಿದ್ದರೂ ಇವುಗಳನ್ನು ನನ್ನಮೇಲಿನ ಪ್ರೀತಿಯಗೋಸ್ಕರವೇ ಮಾಡುತ್ತೇನೆಂಬಂತೆ ನನ್ನ ಗಂಡನು ನಟಿಸುತ್ತಾನೆ! ನಾನು ಹೊಟ್ಟೆತುಂಬ ಉಂಡರೆ ಮತ್ತು ಕಣ್ಣು ತುಂಬ ನಿದ್ದೆ ಮಾಡಿದರೆ ಎಲ್ಲಿ ಸತ್ತು ಹೋಗುತ್ತೇನೋ ಎಂಬದಾಗಿ ಅವನಿಗೆ ಬಹಳ ಚಿಂತೆಯು ಹತ್ತಿರುತ್ತದೆ. ಇದಕ್ಕೇ ನನಗೆ ಬಹಳ ಸಿಟ್ಟು ಬರುತ್ತದೆ! ನನ್ನಿಂದಂತೂ ಈ ಉಪವಾಸವನ್ನು ಇನ್ನು ಮೇಲೆ ತಡೆಯು

ವದಾಗದು. ಈ ಆಳಿನ ಮುಂದೆ ಸ್ವಲ್ಪ ಮಾತಾಡಿ ನೋಡುತ್ತೇನೆ. ಅವನು ನನ್ನ ಮಾತು ಕೇಳುತ್ತಾನೋ ಏನೋ ನೋಡೋಣ. ಬಹಳಮಾಡಿ ಕೇಳಲಿಕ್ಕಿಲ್ಲ. (ನೀಲಾನಿಗೆ ಉದ್ದೇಶಿಸಿ) ನೀಲಣ್ಣಾ, ನನಗೆ ಹಸಿವೆಯು ಬಹಳ ಆಗಿರುತ್ತದೆ. ನನಗೆ ಏನಾದರೂ ಸ್ವಲ್ಪ ತಿನ್ನಲಿಕ್ಕೆ ತಂದು ಕೊಡು. ಏನು ತಂದುಕೊಟ್ಟರೂ ನಡೆದೀತು. ಅದು ತಿನ್ನತಕ್ಕಂಥ ಪದಾರ್ಥವು ಇದ್ದರೆ ತೀರಿತು.

**ನೀಲಾ**—(ಮಗ್ಗುಲಿಗೆ) ಅಬಬ! ಈಗ ಅವ್ವನವರು ಹೇಗೆ ಮೆತ್ತಗಾಗಿರುತ್ತಾರೆ! ಅವರು ನನಗೆ ನೀಲಣ್ಣಾ ಎಂದು ಕರೆಯುತ್ತಾರೆ. ನೀಲಣ್ಣಾ ಎಂದು ಕರೆದರೆ ತಿನ್ನ ಲಿಕ್ಕೆ ಸಿಕ್ಕೀತೇ? ನನ್ನ ಧನಿಯು ಯಮದೂತನಿಗಿಂತ ನಿರ್ದಯನಿರುತ್ತಾನೆ. ಅವನು ನನ್ನ ಬೆನ್ನ ತೊಗಲು ಸುಲಿದು ಬಿಟ್ಟಾನು! (ಬಹಿರಂಗವಾಗಿ) ಅವ್ವನವರೇ, ನಿಮ್ಮನ್ನು ನೋಡಿ ನನ್ನ ಹೊಟ್ಟೆಯಲ್ಲಿ ಬಹಳ ಕಸವಿಸಿಯಾಗುತ್ತದೆ. ಈ ಧನಿ ಯನ್ನು ಒಂದು ಕೈ ನೋಡಿ ಬಿಡಬೇಕೆಂದು ನನಗೆ ಒಮ್ಮೊಮ್ಮೆ ಸಿಟ್ಟು ಬರುತ್ತದೆ. ಆದರೆ ಅವನು ಬಹಳ ಅಡಮುಟ್ಟನು ಇರುತ್ತಾನೆ. ಇದ್ದರೂ ಇರಲಿ. ನಿಮಗೆ ಏನಾದರೂ ತಿನ್ನಲಿಕ್ಕೆ ತಂದು ಕೊಡುತ್ತೇನೆ. ಎರಡು ಪೇರಲಹಣ್ಣು ತಂದು ಕೊಡಲೇನು?

**ಶ್ರಾಟಿಕಾ**—ತರಲೇನು ಎಂದು ಏನು ಕೇಳುತ್ತೀ? ಆ ಹಣ್ಣಿನ ಹೆಸರು ತೆಗೆದ ಕೂಡಲೆ ನನ್ನ ಬಾಯೊಳಗೆ ನೀರು ಬರಲಿಕ್ಕೆ ಹತ್ತಿದವು! ತಕ್ಕೊಂಡು ಬಾ. ಬೇಗನೆ ತಕ್ಕೊಂಡು ಬಾ.

**ನೀಲಾ**—ಆದರೆ ಅವ್ವನವರೇ, ಪೇರಲಹಣ್ಣು ಬಹಳ ಶೀತ. ಅವನ್ನು ತಿಂದರೆ ನಿಮಗೆ ಥಂಡಿಯಾಗಿಹೋದೀತು. ಬೇಡಪ್ಪಾ ಬೇಡ! ಇದು ನಮ್ಮ ಧನಿಗೆ ತಿಳಿದರೆ ನನ್ನ ಕಿವಿಯು ಗಡ್ಡಿಯನ್ನೇ ಕಿತ್ತಾನು.

**ಶ್ರಾಟಿಕಾ**—ಎಲಾ, ಅವು ಶೀತ ಅಲ್ಲ; ಏನೂ ಅಲ್ಲ. ನಿನಗೆ ಯಾರಾ ದರೂ ವಿಪರೀತವಾಗಿ ಹೇಳಿರಬಹುದು. ಹೋಗು, ಬೇಗನೆ ಪೇರಲಹಣ್ಣು ತೆಗೆ ದುಕೊಂಡು ಬಾ. ಎರಡಿಲ್ಲದಿದ್ದರೆ ಒಂದಾದರೂ ತೆಗೆದುಕೊಂಡು ಬಾ.

**ನೀಲಾ**—ಛೀ. ಛೀ. ಛೀ. ಅವ್ವನವರೇ! ಈಗ ಅದರ ಹೆಸರು ಸಹಿತ ತೆಗೆಯಬೇಡಿರಿ. ನಾನು ನಿಮ್ಮ ಮುಂದೆ ಅದರ ನೆನಪು ತೆಗೆಯತಕ್ಕದ್ದಿದ್ದಿಲ್ಲ. ಆದರೆ ಅವ್ವನವರೇ, ನಿಮಗೆ ಪೇರಲಹಣ್ಣು ಸೇರುತ್ತವೇನು?

**ತ್ರಾಟಿಕಾ**—ಹೌದು. ಅವು ಬಹಳ ಮಧುರ ಫಲಗಳು. ಅವುಗಳ ರುಚಿಯು ಬಹಳವಿರುವದು. ಹೋಗು, ಸುಮ್ಮನೆ ಮಾತಾಡುತ್ತ ನಿಲ್ಲಬೇಡ, ಮುಂಚೆ ಹೋಗಿ ತೆಗೆದುಕೊಂಡು ಬಾ.

**ನೀಲಾ**—ಆದರೆ ಅವನ್ನು ತಿಂದರೆ ಪಿತ್ತ ಆಗುವದಿಲ್ಲೇನು? ಅವನ್ನು ತಿಂದು ನೀವು ಜಡ್ಡು ಬಿದ್ದರೆ ನಾನು ಜೀವದಿಂದಾದರೂ ಉಳಿದೇನೇ! ಒಲ್ಲೆ ರವ್ವಾ ಒಲ್ಲೆ.

**ತ್ರಾಟಿಕಾ**— ನೀಲಣ್ಣಾ, ಅವುಗಳನ್ನು ತಿಂದರೆ ಪಿತ್ತವಾಗುವದಿಲ್ಲ. ನಾನೇನು ಬುಟ್ಟಿತುಂಬ ತಿನ್ನಬೇಕಾಗಿರುತ್ತದೆ? ಹೋಗು, ತಡಮಾಡಬೇಡ. ಬೇಗನೆ ತೆಗೆದುಕೊಂಡು ಬಾ.

**ನೀಲಾ**—ಅದೇನೂ ಈಗ ಆಗಲಿಕ್ಕಿಲ್ಲ ಬಿಡಿರಿ. ಈಗ ಅಡವಿಯಲ್ಲಿ ಯಾರು ಹೋಗಿ ತರಬೇಕು? ಅವೇನೂ ಆಗದ ಮಾತು. ಆದರೆ ತುಪ್ಪ ಚಟ್ನಿ ಹಚ್ಚಿದ ಅವಲಕ್ಕಿ ನಿಮಗೆ ಸೇರುತ್ತವೇನು?

**ತ್ರಾಟಿಕಾ**—ವ್ಹಾಃ ಅಷ್ಟಾದರೆ ಮತ್ತೇನೂ ಬೇಡ. ಹೋಗು. ಅದನ್ನು ಬೇಗನೆ ತೆಗೆದುಕೊಂಡು ಬಾ.

**ನೀಲಾ**—ನಮ್ಮ ಚಟ್ನಿಯಲ್ಲಿ ಬಳ್ಳೊಳ್ಳಿ ಕೂಡಿಸಿರುತ್ತಾರೆ. ಬಳ್ಳೊಳ್ಳಿಯ ವಾಸನೆಯು ನಿಮ್ಮಂಥ ಬ್ರಾಹ್ಮಣ ಹೆಣ್ಣುಮಕ್ಕಳಿಗೆ ತಡೆಯಲಿಕ್ಕಿಲ್ಲ. ಅದರ ವಾಸನೆಗೆ ನೀವು ವಾಂತಿ ಮಾಡಿಕೊಂಡೀರಿ. ಮತ್ತು ಆ ಚಟ್ನಿಯು ಬಹಳ ಕಾರ ಹತ್ತೀತು. ಅದನ್ನು ನೀವು ನಾಲಿಗೆಯ ಮೇಲೆ ಇಟ್ಟುಕೊಂಡರೆ ನಿಮ್ಮ ನಾಲಿಗೆಯು ಸುಟ್ಟೀತು.

**ತ್ರಾಟಿಕಾ**—ಹಾಗಾದರೆ ಬರೀ ಅವಲಕ್ಕಿ ತೆಗೆದುಕೊಂಡು ಬಾ.

**ನೀಲಾ**—ಅವ್ವನವರೇ, ದೇಶದೊಳಗೆ ಯಾರಾದರೂ ತುಪ್ಪ ಚಟ್ನಿ ಇಲ್ಲದೆ ಅವಲಕ್ಕಿ ತಿನ್ನುತ್ತಾರೆಯೋ? ಒಣ ಅವಲಕ್ಕಿ ಮುಕ್ಕಿದರೆ ಹೊಟ್ಟೆ ಕಡೆದೀತು.

**ತ್ರಾಟಿಕಾ**—ಹಾಗಾದರೆ ಎರಡೂ ಕೂಡಿಸಿದ್ದು ತೆಗೆದುಕೊಂಡು ಬಾ. ಅಥವಾ ಒಣವು ತೆಗೆದುಕೊಂಡು ಬಾ. ಅಥವಾ ಮತ್ತೇನಾದರೂ ತೆಗೆದುಕೊಂಡು ಬಾ. ಸುಮ್ಮನೆ ನಿಂತು ವೇಳೆ ಕಳೆಯಬೇಡ. ಹಸಿವೆಯು ಬಹಳ ಆಗಿರುತ್ತದೆ. ಹೋಗು, ಹೋಗು.

**ನೀಲಾ**—ಅಪ್ಪನವರೇ, ಮತ್ತೇನಾದರೂ ತೆಗೆದುಕೊಂಡು ಬಾ ಎಂದು ಹೇಳುತ್ತೀರಿ. ಅಂಪಮೇಲೆ ಬರೀ ಚಟ್ಟಿಯನ್ನು ತಂದು ಕೊಡಲೇನು? ಒಂದು ವೇಳೆ ಅದನ್ನು ತರುವಾಗ್ಗೆ ನಮ್ಮ ಧನಿಯು ನನ್ನನ್ನು ನೋಡಿದರೆ ಅವನಿಗೇನು ಉತ್ತರ ಕೊಡಲಿ ?

**ತ್ರಾಟಿಕಾ**—ಠಕ್ಕಾ! ಇಲ್ಲಿಂದ ಹೊರಟು ಹೋಗು! ಇಲ್ಲದ್ದೊಂದು ಹೇಳಿ ನನಗೆ ಸುಮ್ಮನೇ ಆಶೆ ತೋರಿಸುತ್ತೀಯಾ? (**ಅವನಿಗೆ ಹೊಡೆಯುತ್ತಾಳೆ; ಅವನು ಓಡಿ ಹೋಗುತ್ತಾನೆ.**) ದೇವರೇ, ಇನ್ನುಮೇಲೆ ನನ್ನ ಗತಿಯು ನೆಟ್ಟಗಾದೀತೆಂದು ಕಾಣು ವದಿಲ್ಲ. ಎಲ್ಲರು ಪಾಷಾಣಹೃದಯರು! ಕಲ್ಲಿಗೆ ಸಹಿತ ಒಂದು ವೇಳೆ ದಯವು ಹುಟ್ಟೀತು. ಆದರೆ ಈ ಕಟಕರಿಗೆ ಎಂದೂ ದಯವು ಹುಟ್ಟಲಿಕ್ಕಿಲ್ಲ! ನನಗೆ ತಿನ್ನಲಿಕ್ಕೆ ಇಲ್ಲದಿದ್ದರೂ ಇಲ್ಲ. ಇವರು ಸುಮ್ಮನೆ ನನ್ನನ್ನು ಕಾಡಿಸುವದೇಕೆ ? ನನಗೆ ಸುಮ್ಮನೆ ಆಶೆ ತೋರಿಸಿ, ನನ್ನ ಬಾಯಲ್ಲಿ ನೀರು ಬರುವಂತೆ ಮಾಡಿ ನನ್ನ ಆಶಾಭಂಗ ಮಾಡುವದು ಎಂಥಾ ಕ್ರೂರತನವು! ನನ್ನ ಪೂರ್ವಜನ್ಮದ ವೈರಿಗಳು ಈಗ ಈ ರೀತಿಯಿಂದ ನನ್ನ ಮೇಲೆ ಸೇಡು ತೀರಿಸಿಕೊಳ್ಳಹತ್ತಿದ್ದಾರೆ! ನನ್ನನ್ನು ಕಾಡಿಸುವಾಗ ಈ ರಂಡೇಮುಕ್ಕಳಿಗೆ ಎಷ್ಟು ಆನಂದವಾಗುತ್ತದೆ! ಎಲ್ಲರೂ ಎಂಥ ದುಷ್ಟರು! ಎಂಥ ನೀಚರು! (**ಪರದೆಯ ಕಡೆಗೆ ನೋಡಿ**) ಆಹಹ! ಶನೇಶ್ವರನು ಬಂದನು. ನನಗೆ ಇನ್ನೂ ಏನಾದರೂ ಪೀಡಿಸಲಿಕ್ಕೇ ಇವನು ಬರುತ್ತಿರಬಹುದು! ಇವನ ಕೈಯಲ್ಲಿ ಏನೋ ಬಡಿಸಿ ತಂದಂಥ ತಾಟು ಕಾಣುತ್ತದೆ. ಆದರೆ ಅದರಿಂದ ನನಗೆ ಉಪಯೋಗವೇನು? ಅದರಲ್ಲಿಯ ಪದಾರ್ಥಗಳು ಸಿಗುವದು ನನ್ನ ದೈವದಲ್ಲಿ ಎಲ್ಲಿ ಉಂಟು ?

(**ಪ್ರತಾಪರಾಯನು ಪಕ್ವಾನ್ನ ತುಂಬಿದ ತಾಟು ಹಿಡಿದುಕೊಂಡು ಬರುತ್ತಾನೆ. ಅವನ ಸಂಗಡ ಭೀಮರಾಯನೂ ಬರುತ್ತಾನೆ.**)

**ಪ್ರತಾಪರಾವ**—(**ತ್ರಾಟಿಕೆಯ ಕಡೆ ನೋಡಿ ತನ್ನಷ್ಟಕ್ಕೆ**) ಇವಳು ಬಹುತರವಾಗಿ ನಮ್ರವಾಗಿರುವಂತೆ ಕಾಣುತ್ತದೆ. ಉಪವಾಸವಿಡುವದು ಮತ್ತು ನಿದ್ರೆಗೇಡುಮಾಡುವದು ಇವೆರಡೂ ಬಹಳ ರಾಮಬಾಣ ಮಾತ್ರೆಗಳು! ಬೇಕಾದಂಥ ದೆವ್ವ ಮೈಯಲ್ಲಿ ಸೇರಿಕೊಂಡಾಗ್ಯೂ ಇವು ಆ ದೆವ್ವನ್ನು ನಿಶ್ಚಯವಾಗಿ ಬಿಡಿಸುತ್ತವೆ! (**ಬಹಿರಂಗವಾಗಿ**) ಭೀಮರಾವ, ಏನನ್ನುತ್ತೀ ? ಆ ಮೂರ್ಖ ಹುಡಿಗೆಯು ನಿನಗೆ ಈ ಪರಿ ಅಮರ್ಯಾದೆಯನ್ನು ಮಾಡಿದಳೇ ? ಹಾಗಾದರೆ ಅವಳ ಮುಂದೆ ನಿನ್ನ ಅಪ್ರತಿಮ ಯುಕ್ತಿಯು ಏನೂ ನಡೆಯಲಿಲ್ಲವೆಂದು ಕಾಣುತ್ತದೆ! (**ಎಂದು ನಗುತ್ತಾ ಅವನ ಕಡೆಗೆ ನೋಡುತ್ತಾನೆ.**)

**ಭೀಮರಾವ**—ಪ್ರತಾಪಾ, ಆ ಮಾತಿನ ನೆನಪು ಸಹ ನನ್ನ ಮುಂದೆ ತೆಗೆ ಯಬೇಡ. ಅದೆಲ್ಲ ನನ್ನ ಮೂರ್ಖತನವಾಯಿತು. ಆಕೆಯ ಸಂಬಂಧವಾಗಿ ನಾನು ಆಶೆಯನ್ನೇ ಬಿಟ್ಟು ಕೊಟ್ಟೆನು. ಇದೆಲ್ಲ ಇರಲಿ. ನೀನು ನನ್ನ ಅತ್ತಿಗೆಯ ದೆಸೆಯಿಂದ ತಿಂಬುವ ಪದಾರ್ಥಗಳನ್ನು ತಂದಂತೆ ಕಾಣುತ್ತದೆ. ನೀನು ಅವುಗ ಳನ್ನು ಅತ್ತಿಗೆಗೆ ಯಾವಾಗ್ಗೆ ಕೊಡುತ್ತೀ ? ಆಕೆಯು ಅತ್ತ ಕಡೆಗೆ ಹೇಗೆ ಸಣ್ಣ ಮೋರೆಯನ್ನು ಮಾಡಿಕೊಂಡು ಕೂತಿದ್ದಾಳೆ, ನೋಡು !

**ಪ್ರತಾಪರಾವ**— ಹೌದೋ, ನಾನು ಅದನ್ನು ಮರೆತು ಬಿಟ್ಟಿದ್ದೆ. ( **ಅವಳ ಹತ್ತರ ಹೋಗಿ** ) ಭೀಮರಾವ, ಇದು ನೋಡು; ನಿನ್ನ ಅತ್ತಿಗಿಯ ಮೋರೆ ಯು ಹೇಗೆ ಬಾಡಿರುತ್ತದೆ ? ಈಕೆಯ ಪ್ರಕೃತಿಯು ಸ್ವಲ್ಪ ಕೆಟ್ಟಿರುತ್ತದೆ. ಏನು ಇವಳ ಸೂಕ್ಷ್ಮಶರೀರವು ! ಆ ದಿವಸದ ಪ್ರವಾಸದಿಂದ ಈಕೆಗೆ ಆದ ದಣವು ಇನ್ನೂ ಹೋಗಿಲ್ಲ ! ( **ತ್ರಾಟಿಕೆಯನ್ನುದ್ದೇಶಿಸಿ** ) ಪ್ರಿಯೇ, ಈಗ ನಿನಗೆ ಹೇಗಿರು ತ್ತದೆ ? ಕೈಕಾಲು ಉರಿಯುವದು ನಿಂತಿತೇ ? ತಲೆಶೂಲಿಯು ಕಡಿಮೆಯಾಗಿರುವ ದಷ್ಟೇ ? ಹಸಿವೆಯು ಏನಾದರೂ ಆಗಿರುವದೋ ? ಎಲಾ, ಈಕೆಯು ಏಕೆ ಮಾತಾಡಲೊಲ್ಲಳು ? ಇನ್ನೂ ಈಕೆಯ ಪ್ರಕೃತಿಗೆ ಗುಣವಾದಂತೆ ಕಾಣುವದಿಲ್ಲ.

**ಭೀಮರಾವ**—ಅತ್ತಿಗೀ, ನಿಮಗೆ ಏನಾಗಿರುತ್ತದೆ ? ನೀವು ಇಷ್ಟು ಖಿನ್ನ ವದನರಾಗಿ ಏಕೆ ಕುಳಿತಿರುತ್ತೀರಿ ? ನಿಮ್ಮ ತವರುಮನೆಯಲ್ಲಿ ಎಲ್ಲರೂ ಕ್ಷೇಮ ದಿಂದಿರುತ್ತಾರೆ. ಚಿಂತೆಮಾಡಬೇಡಿರಿ.

**ತ್ರಾಟಿಕಾ**—ನನಗೇನು ಆಗಿರುತ್ತದೆ ? ನನ್ನ ಪತಿದೇವರು ನನ್ನ ಮೇಲೆ ಬೇಕುಬೇಕಾದಷ್ಟು ಪ್ರೀತಿಯನ್ನು ಮಾಡುತ್ತಿರುವಾಗ ನನಗೇತರ ಕೊರತೆಯು ಇದ್ದೀತು ? ಉಣ್ಣಲಿಕ್ಕೆ ಅನ್ನವೊಂದಿಲ್ಲ, ಕಣ್ಣಿಗೆ ನಿದ್ರೆಯೊಂದಿಲ್ಲ ! ಅಂದಬಳಿಕ ನಾನು ಹೇಗೆ ನೆಟ್ಟಗಿರದೆ ಇದ್ದೇನು ? ನಮ್ಮ ತಂದೆಯನ್ನು ನೀವು ಕಾಣುವದಾದರೆ "ನೀವು ನಿಮ್ಮ ಮಗಳನ್ನು ಚಲೋ ಜೀವಂತ ಪಿಶಾಚಿಗೆ ಗಂಟು ಹಾಕಿಕೊಟ್ಟಿರಿ" ಎಂದು ಅವರಿಗೆ ಮಾತ್ರ ತಿಳಿಸಿರಿ! ಈ ಪಿಶಾಚಿಯ ಕೈಯಿಂದ ನನ್ನ ಜೀವ ಉಳಿದರೆ ನನ್ನಂಥ ದೈವಶಾಲಿಗಳು ಯಾರೂ ಇಲ್ಲವೆಂದು ತಿಳಿದುಕೊಳ್ಳಲಿಕ್ಕೆ ಅಡ್ಡಿಯಿಲ್ಲ !

**ಭೀಮರಾವ**—ಪ್ರತಾಪರಾವ, ಇದೇನು ?

**ಪ್ರತಾಪರಾವ—** ನಿನ್ನಾಣೆಯೆಂದರೂ ಈಕೆಗೆ ಪಿಶಾಚಿಯು ಗಂಟು ಬಿದ್ದ ಸಂಗತಿಯು ನನಗೆ ಈಗಲೇ ಗೊತ್ತಾಯಿತು. ಪ್ರಿಯೇ, ನೀನು ಮನಸ್ಸಿಗೆ ಹೀಗೆ ಸಂಕೋಚವನ್ನು ಏಕೆ ಮಾಡಿಕೊಳ್ಳುತ್ತೀ? ನನಗೆ ಇದನ್ನು ಮೊದಲೇ ಏಕೆ ತಿಳಿಸಲಿಲ್ಲ? ಅಂದರೆ ನಾನು ಅದನ್ನು ಆಗಲೇ ಬಿಡಿಸಿ ಓಡಿಸುತ್ತಿದ್ದೆನು! (ಭೀಮರಾಯನನ್ನುದ್ದೇಶಿಸಿ ಒಂದು ಮಗ್ಗಲಿಗೆ) ಈಕೆಯ ಮೈಯಲ್ಲಿ ಪಿಶಾಚಿಯು ಸೇರಿಕೊಂಡಿರುವದರಿಂದಲೇ ನನಗೆ ಇಷ್ಟೆಲ್ಲ ಕಷ್ಟವಾಗಹತ್ತಿರುತ್ತದೆ. (ಬಹಿರಂಗವಾಗಿ) ನೀಲಾ, ಇತ್ತಕಡೆಗೆ ಮುಂದಕ್ಕೆ ಬಾ. ಇಲ್ಲಿ ಯಾರನ್ನೂ ಒಳಗೆ ಬಿಡಬೇಡೆಂದು ನಾನು ಮೊದಲೇ ಅಪ್ಪಣೆಯನ್ನು ಮಾಡಿದ್ದೆನು. ಹೀಗಿದ್ದು ಇಲ್ಲಿ ಪಿಶಾಚಿಯ ಪ್ರವೇಶವು ಹೇಗೆ ಆಯಿತು ? ( ನೀಲನು ಮುಂದಕ್ಕೆ ಬರುತ್ತಾನೆ; ಪ್ರತಾಪರಾಯನು ಅವನ ಕಿವಿ ಹಿಂಡುತ್ತಾನೆ. )

**ನೀಲಾ—** ನೀವಿಬ್ಬರೇ ಈಗ ಇಲ್ಲಿ ಒಳಗೆ ಬಂದಿರಿ. ನಿಮ್ಮನ್ನು ಬಿಟ್ಟು, ಮೂರನೆಯ ಯಾವ ಪಿಶಾಚಿಯು ಇಲ್ಲಿ ಒಳಗೆ ಬಂದಿರುತ್ತಾನೆ?

**ಭೀಮರಾವ—** ಅಂದರೇನೋ? ಪ್ರತಾಪರಾಯನು ಮತ್ತು ನಾನು ಒಳಗೆ ಬಂದವರು ಪಿಶಾಚಿಗಳೇನು?

**ನೀಲಾ—** ನಾನೇನು ಹೇಳಲಿ?

**ಪ್ರತಾಪರಾವ—** ಆँ. ನಾನು ಪಿಶಾಚಿಯೇನು? ನಿನ್ನ ನಾಲಿಗೆಯು ಬಹಳ ಅಡ್ಡಾತಿಡ್ಡ ಹೋಗಹತ್ತಿತು! ಇದಕ್ಕಾಗಿ ಹಿಡಿ ಇನಾಮು. ( ಅವನ ಬೆನ್ನು ಮೇಲೆ ಎರಡುಮೂರು ಸಾರೆ ಗುದ್ದುತ್ತಾನೆ. )

**ತ್ರಾಟಿಕಾ—** ಹೋಗಲಿ ಬಿಡಿರಿ! ಸುಮ್ಮನೇ ನೆವ ತೆಗೆದು ಅವನಿಗೇಕೆ ಹೊಡೆಯುತ್ತೀರಿ? ಮೊದಲು ಆ ತಾಟನಲ್ಲಿ ತಂದಿರುವ ಪದಾರ್ಥಗಳನ್ನು ತಿನ್ನೋಣ.

**ಪ್ರತಾಪರಾವ—** ರಾಣೀಸಾಹೇಬರ ಅಪ್ಪಣೆಯಾಯಿತು! ಇನ್ನಾರು ನಿನಗೆ ಹೊಡಿಯಲು ಸಮರ್ಥರು? ಹೋಗು ಮಗನೇ, ರಾಣೀಸಾಹೇಬರ ಉಪಕಾರ ನೆನೆಸಿ ಅವರ ಕಾಲಮೇಲೆ ಬೀಳು!! (ನೀಲನು ತ್ರಾಟಿಕೆಯ ಕಾಲು ಬೀಳುತ್ತಾನೆ). ವಾಹವ್ವಾ! ಪ್ರಿಯೇ, ಈ ತಾಟಿನ ಕಡೆಗೆ ನಿನ್ನ ಲಕ್ಷ್ಯವು ಬಿತ್ತೇನು ? ಈ ತಾಟು ಅತ್ಯಂತ ಉತ್ತಮ ಪಕ್ವಾನ್ನಗಳಿಂದ ತುಂಬಿರುತ್ತದೆ! ನೀನು ಇಲ್ಲಿ ಬಂದಾಗಿನಿಂದ

ನಿನಗೆ ಪಕ್ವಾನ್ನವು ಸಿಕ್ಕಲಿಲ್ಲ. ಆದುದರಿಂದ ನಾನೇ ಸ್ವತಃ ನಿಂತುಕೊಂಡು ಈ ಪಕ್ವಾನ್ನವನ್ನು ಮಾಡಿಸಿ ತಂದಿರುತ್ತೇನೆ. ಈ ಜಿಲೇಬಿಯ ರುಚಿಯನ್ನು ನೋಡಿಯಾದರೂ ನೋಡು! (ಒಂದು ಜಿಲೇಬಿಯ ಸಣ್ಣ ತುಣುಕನ್ನು ಆಕೆಯ ಕೈಯಲ್ಲಿ ಕೊಡುತ್ತಾನೆ. ಅದನ್ನು ಆಕೆಯು ಚೆಲ್ಲಿ ಬಿಡುತ್ತಾಳೆ.) ಅಹಹ, ಪಿಶಾಚಿಯು ಸ್ವಲ್ಪ ಉಗ್ರವಿರುತ್ತದೆ! ಅದು ಇನ್ನೂ ಹೊರಬೀಳುವದಿಲ್ಲೆಂದು ಅನ್ನುತ್ತದೆ. ಒಳ್ಳೇದು. ನೀಲಾ, ಆ ಭಟ್ಟನಿಗೆ ಈ ತಾಟು ಅಡಿಗೆಯ ಮನೆಯಲ್ಲಿ ಒಯ್ಬಿಡೆಂದು ಹೇಳು. (ತಾಟವನ್ನು ಒಗೆಯುತ್ತಾನೆ.)

**ಭೀಮರಾವ**—ನೀಲಾ, ತಾಟು ಇದ್ದಲ್ಲಿಯೇ ಇರಲಿ. ಭಟ್ಟನನ್ನು ಕರಕೊಂಡು ಬರಬೇಡ. ಅತ್ತಿಗಿಗೆ ಬಹಳ ಹಸಿವೆಯಾಗಿರುತ್ತದೆ. ಆಕೆಯು ಸ್ವಲ್ಪ ಫಲಹಾರವನ್ನು ಮಾಡಲಿ.

**ಪ್ರತಾಪರಾವ**—ನಿನಗೆ ಅದೇನೂ ತಿಳಿಯಲಿಕ್ಕಿಲ್ಲ. ಆಕೆಗೆ ಹಸಿವೆಯಾದರೇನಾಯಿತು? ಆಳುಮನುಷ್ಯರು ವೇಳೆಗೆ ಸರಿಯಾಗಿ ಕೆಲಸಮಾಡಿಕೊಂಡು ಬಂದರೆ ಅವರಿಗೆ ಸಹ ನಾವು ಇನಾಮು ಕೊಡುತ್ತೇವೆ. ಹೀಗಿದ್ದು ನಾನು ಸ್ವತಃ ನಿಂತುಕೊಂಡು ಈ ಪಕ್ವಾನ್ನವನ್ನು ಮಾಡಿಸಿ ತಂದುದಕ್ಕಾಗಿ ಇವಳು ನನ್ನ ಉಪಕಾರ ನೆನೆಸುವದನ್ನು ಬಿಟ್ಟು ಈ ಪ್ರಕಾರ ನನ್ನ ಅವಮಾನನನ್ನು ಮಾಡಿದಳು! ಈ ಅವಮಾನವನ್ನು ನಾನೆಂದಿಗೂ ಸಹನ ಮಾಡಲಾರೆನು. ಇವಳು ಬಾಯಿಂದ ಒಂದು ಸವಿಮಾತನ್ನಾದರೂ ಆಡತಕ್ಕದ್ದಿತ್ತು! ಒಳ್ಳೇದು; ನನಗಾದರೂ ಇಷ್ಟು ಅಗತ್ಯವೇತಕ್ಕೆ ಬೇಕು? ಇವಳು ಈಗೀಗ ತಾನೇ ಹೇಳಿದಂತೆ ಈಕೆಗೆ ಪಿಶಾಚಿ ಬಡಕೊಂಡದ್ದೇ ನಿಜವು! ನೀಲಾ, ಆ ಭಟ್ಟನನ್ನು ಕರೆ. ತಾಟು ಒಳಗೆ ತೆಗೆದುಕೊಂಡು ಹೋಗಲಿ.

**ನೀಲಾ**—(ಒಳಗೆ ಹೋಗಿ ಬಂದು) ಧನಿಯರೇ, ಭಟ್ಟನು ಬಂದನು. ಈಗ ಅವನ ಕಡೆಯಿಂದ ತಾಟು ಒಳಗೆ ಇಡಿಸಲೋ? (ಭಟ್ಟನು ಬಂದು ನೆಲದ ಮೇಲೆ ಸೂರಿಯಾಗಿದ್ದ ಪದಾರ್ಥಗಳನ್ನು ತಾಟಿನಲ್ಲಿ ತುಂಬಿಕೊಂಡು ಅವುಗಳನ್ನು ಮೇಲಕ್ಕೆ ಎತ್ತುತ್ತಾನೆ.) ಏನು ನಮ್ಮ ಧನಿಯರ ಆಟವಿದು? ಸಿಟ್ಟು ಇವರ ಮೂಗಿನ ಮೇಲೆ ಎಷ್ಟಾದೆ ಕೂತಿರುತ್ತದೆ! ಅದನ್ನು ಒಕ್ಕೊಡು, ಇದನ್ನು ಒಕ್ಕೊಡು; ಅವನನ್ನು ಹೊಡಿ, ಇವನನ್ನು ಹೊಡಿ; ಅವನನ್ನು ಎಳಿ, ಇವನನ್ನು ಎಳಿ; ಇದರಲ್ಲಿಯೇ ಇವರು ಮುಂಜಾನೆಯಿಂದ ಸಂಜೆಯತನಕ ಇರುತ್ತಾರೆ. ಇತ್ತ ಬಾ, ಅತ್ತ ಬಾ; ಹೀಗೆಮಾಡು, ಹಾಗೆ

ಮಾಡು; ಎರಡು ಒದಕಿ ತಕ್ಕೊ, ನಾಲ್ಕು ಗುದಕಿ ತಕ್ಕೊ ಎಂದು ನನಗೆ ಸಾಕ ಸಾಕು ಮಾಡಿ ಬಿಟ್ಟಿರುತ್ತಾರೆ. ನಾನು ಇವರ ಕೈಯಲ್ಲಿ ಬಂದು ಒಳ್ಳೇ ಸಿಕ್ಕಿ ರುತ್ತೇನೆ !!

**ಪ್ರತಾಪರಾವ**— ಭಟ್ಟಾ, ಏಕೆ ಸುಮ್ಮನೆ ನಿಂತು ಹೊತ್ತು ಕಳೆಯುತ್ತೀ? ತಾಟು ತೆಗೆದುಕೊಂಡು ಬೇಗನೆ ಒಳಗೆ ಹೋಗು.

**ತ್ರಾಟಿಕಾ**—ಆ ತಾಟು ಇಲ್ಲಿಯೇ ಇರಲಿ. ಅವನ ಮೇಲೆ ನೀವೇಕೆ ಸಿಟ್ಟಿಗೇಳುತ್ತೀರಿ? ತಾಟು ತೆಗೆದುಕೊಂಡು ಹೋಗಬೇಡೆಂದು ನಾನೇ ಅವನಿಗೆ ಕಣ್ಣು ಸನ್ನೆ ಮಾಡಿದೆನು. ಅದಿರಲಿ. ನೀವು ಈ ತಾಟನ್ನು ಸ್ವತಃ ತರಲಿಕ್ಕೆ ಏಕೆ ಶ್ರಮ ತೆಗೆದುಕೊಂಡಿರಿ? ಭಟ್ಟನಿಗೆ ಹೇಳಿದ್ದರೆ ಅವನು ತೆಗೆದುಕೊಂಡು ಬರುತ್ತಿದ್ದನು! ಅವನು ನನಗೆ ಹೇಳಿದ್ದರೆ ನಾನೇ ಸ್ವತಃ ಅಡಿಗೆಯ ಮನೆಗೆ ಹೋಗುತ್ತಿದ್ದಿಲ್ಲೇನು ?

**ಪ್ರತಾಪರಾವ**— ಈಗ ಮಾತ್ರ ಸರಿಯಾಗಿ ಮಾತಾಡಿದೆ ! ಇದು ನೋಡು. ನಾನಿರಲಿಕ್ಕಾಗಿ ನಿನಗೇಕೆ ಶ್ರಮ ಕೊಡಬೇಕು? ನೀನು ಶ್ರೀಮಂತರ ಮಗಳು! ನಿನಗೆ ನಡೆದಾಡುವ ಶ್ರಮವನ್ನು ಏಕೆ ಕೊಡಬೇಕು? ಮೇಲಾಗಿ ನಿನ್ನ ಪ್ರಕೃತಿಯು ಅಸ್ವಸ್ಥವಾಗಿರುತ್ತದೆ! ನಿನಗೆ ಹಸಿವೆಯಾಗಿದ್ದೀತೆಂದು ತಿಳಿದು ನಾನೇ ಸ್ವತಃ ಇಷ್ಟೊಂದು ಅವಸರದಿಂದ ತೆಗೆದುಕೊಂಡು ಬಂದೆನು!! ಆದರೆ ಈ ನಿನ್ನ ಮೈದುನನು ಬಹಳ ದೂರಿಂದ ಬಂದಿರುತ್ತಾನೆ. ಅವನು ಮೊದಲು ಈ ಪಕ್ವಾನ್ನವನ್ನು ಸೇವಿಸಲಿ. ಆ ಮೇಲೆ ನಿನಗೂ ತಾಟಿಗೂ ಗಂಟು ಅದೇ ಅದೆ! ನೀನು ಈ ಭೀಮರಾಯನ ಮುಂದೆ ನಾಚಿಕೊಳ್ಳಬೇಡ. ಅವನು ಕೇವಲ ನನ್ನ ತಮ್ಮನೆಂದು ತಿಳಿ! ನೀನು ಈ ಪಕ್ವಾನ್ನವನ್ನು ಸೇವಿಸಿದರೆ ನಾನು ಬಹಳ ಧನ್ಯನಾಗುವೆನು! (ಭೀಮರಾಯನ ಕೂಡ ಒತ್ತಟ್ಟಿಗೆ) ಭೀಮರಾವ, ಅದರಲ್ಲಿರುವ ಬಹುತರ ಎಲ್ಲ ಪದಾರ್ಥಗಳನ್ನು ನೀನು ತೀವ್ರವಾಗಿ ತಿಂದು ಬಿಡು ಸ್ವಲ್ಪೇ ಮಾತ್ರ ಉಳಿಸು. (ಬಹಿರಂಗವಾಗಿ) ಪ್ರಿಯೇ, ನೀನು ತಿಂದು ಗಟ್ಟಿಯಾದನಂತರ ಈ ಹೊತ್ತು ನಾವು ಕುಸುಮಪುರಕ್ಕೆ ಹೋಗೋಣ. ಇಲ್ಲಿ ನನ್ನ ಕೆಲಸವು ತೀರಿಹೋಯಿತು. ಮಾವನವರ ಬಳಿಗೆ ಹೋಗಿ, ಲಗ್ನದ ಮೇಜವಾನಿಗೆ ಗಂಟು ಬೀಳೋಣ. ಇನ್ನು ಬೇಗನೆ ಸಿಂಪಿಗನು, ಜವಳಿಯವನು, ಅಕ್ಕಸಾಲಿಗನು, ಮುತ್ತಿಗಾರನು ಬರುವರು. ನಿನ್ನಗೋಸ್ಕರ ಈ ಹೊತ್ತು ಅತ್ಯುತ್ತಮವಾದ ಜವಳಿಗಳನ್ನೂ

ಅಪೌರೌಲ್ಯವಾದ ಆಭರಣಗಳನ್ನೂ ಕೊಳ್ಳತಕ್ಕದ್ದದೆ. ( **ಭೀಮರಾಯನು ಅನೇಕ ಪದಾರ್ಥಗಳನ್ನು ತೀದು, ಆ ತಾಟನ್ನು ತ್ರಾಟಿಕೆಯ ಮುಂದೆ ಸರಿಸುತ್ತಾನೆ.** ) ನಿನ್ನ ಮನಸ್ಸಿಗೆ ಬಂದಂಥ ಸೀರಿ ಕುಪ್ಪಸಗಳನ್ನು ತೆಗೆದುಕೋ. ವಜ್ರದ ಮುತ್ತು ಮುತ್ತಿನ ಆಭರಣಗಳು, ಬುಗುಡಿಗಳು, ಬೆಂಡವಾಲಿಗಳು, ತಾಲೂಕುಗಳು, ಮೂಗಬೊಟ್ಟುಗಳು, ಮುಖರೆಗಳು, ನತ್ತುಗಳು ಬೇಕಾದ್ದು ಆರಿಸಿಕೋ. ನಿನ್ನ ಮೈತುಂಬ ವಜ್ರದ ಮುತ್ತು ಮುತ್ತಿನ ಆಭರಣಗಳು ನಕ್ಷತ್ರಮಾಲೆಯಂತೆ ತೂಗಬಿದ್ದಿರುತ್ತವೋ ಏನೋ ಎಂದು ನೋಡುವವರ ಕಣ್ಣು ಕುಕ್ಕುವಂತೆ ಈ ಹೊತ್ತು ನಿನಗೆ ಆಭರಣಗಳಿಂದ ಮುಚ್ಚಿಬಿಡುತ್ತೇನೆ. ಈ ಪ್ರತಾಪರಾಯನಿಗೆ ಏನೂ ಕಡಿಮೆ ಇಲ್ಲ. (**ಕೆಳಗೆ ಬಾಗಿ ತಾಟಿನ ಕಡೆಗೆ ನೋಡಿದಂತೆ ಮಾಡಿ**) ವ್ಹಾ, ವ್ಹಾ. ನೀನು ತಿನ್ನುವದು ಎಂಥ ಬೇಗನೆ ತೀರಿತು! ಶಹಬಾಸ. ತ್ವರೆಯನ್ನು ಮಾಡಿದರೆ ಇದೇ ರೀತಿ ಮಾಡಬೇಕು! ನೀಲಾ, ಈ ತಾಟು ಇಲ್ಲಿಂದ ಎತ್ತಿಕೊಂಡು ಹೋಗು. ಹಾಗೂ ಹೊರಗೆ ಸಿಂಪಿಗನು, ಜವಳಿಯವನು, ಮುತ್ತುಗಾರನು ಮೊದಲಾದವರು ಬಂದಿದ್ದಾರೆ, ಅವರನ್ನು ಒಳಗೆ ಕರೆದುಕೊಂಡು ಬಾ. (**ನೀಲಾನು ತ್ರಾಟಿಕೆಯ ಮುಂದಿನ ತಾಟು ತೆಗೆದುಕೊಂಡು ಹೋಗುತ್ತಾನೆ; ಸ್ವಲ್ಪ ಹೊತ್ತಿಗೆ ಸಿಂಪಿಗನು ಬರುತ್ತಾನೆ.**) ಏನಪ್ಪಾ ನಾಮದೇವಾ, ಕುತ್ತಿಗೆಗೊಯ್ಯಕಾ! ಬಂದೇನು? ಬಾ ಹೀಗೆ. ಆ ಕಿನಕಾಪಿನ ಕುಪ್ಪಸವನ್ನು ತೆಗೆ. ( **ಜವಳಿಯವನು ಬರುತ್ತಾನೆ.** ) ಸೆಟ್ಟರ ಸ್ವಾರಿಯು ಬಂದಿತು. ಅಂದಮೇಲೆ ಈ ಹೊತ್ತು ನಮ್ಮ ಹಣವೆಲ್ಲ ಚಟ್ಟಾಗಿ ಹೋಗುವದು. (**ಮುತ್ತುಗಾರನು ಬರುತ್ತಾನೆ.**) ಬನ್ನಿರಿ! ಸೆಟ್ಟರೇ, ಈ ಹೊತ್ತು ನೀವು ನಮ್ಮ ಮನೆಯನ್ನೇ ತೊಳೆದು ಬಿಡುವಂತೆ ಕಾಣುತ್ತದೆ! ಈ ಹೊತ್ತು ಮನೆಯಲ್ಲಿ ಸುಲಿಗೆ ಮಾಡುವ ಜನರ ಪ್ರಚಂಡ ಸಭೆಯೇ ಕೂಡಿರುತ್ತದೆ!! ಆದರೆ ಒಬ್ಬನು ಮಾತ್ರ ಕಡಿಮೆ ಇದ್ದಾನೆ. (**ಪರದೆಯ ಕಡೆಗೆ ನೋಡಿ**) ವ್ಹಾ. ಅವನೂ ಬಂದನು! ಈ ಕಳ್ಳನಿಗೆ ನೂರು ವರ್ಷ ಆಯುಷ್ಯವಿರುತ್ತದೆ! ಇವನು ಎಲ್ಲ ಕಳ್ಳರಿಗೆ ಅರಸನು! ಈಗ ಸುಲಿಗೆಗಾರರ ಕಚೇರಿಯು ಪೂರಾ ಕೂಡಿದಂತೆ ಆಯಿತು. (**ಜವಳಿಯವನಿಗೆ**) ಹೂ, ಅಣ್ಣನವರೇ, ತೆಗೆಯಿರಿ. ನಿಮ್ಮ ಜವಳೀ ನೋಡೋಣ. ಚಲೋ ಜವಳಿಯನ್ನು ತಂದಿದ್ದರೆ ಗಂಟು ಬಿಚ್ಚಿರಿ. ಇಲ್ಲದಿದ್ದರೆ ಮನೆಯ ದಾರೀಹಿಡಿಯಿರಿ! ಈ ರತ್ನಕ್ಕೆ (**ತ್ರಾಟಿಕೆಯ ಗದ್ದಕ್ಕೆ ಕೈ ಹಚ್ಚಿ**) ಶೋಭಿಸುವಂಥ ಜರತಾರೀ ವಸ್ತ್ರಗಳು ಬೇಕು. ಹೂ.

ಕುತ್ತಿಗೆ ಗೊಯ್ಯಕಾ ! ಇನ್ನೂ ನಿನ್ನ ಕಿನಕಾಪಿನ ಕುಪ್ಪಸವು ಏಕೆ ಹೊರಬೀಳ ಲೊಲ್ಲದು ?

**ಸಿಂಪಿಗ**—ಇದು ನೋಡಿರಿ; ರಾವಸಾಹೇಬರೇ! ಅದನ್ನು ಹೊರಗೇ ತೆಗೆದು ಇಟ್ಟಿರುತ್ತೇನೆ. ಅದರ ಕೆಲಸವನ್ನಾದರೂ ಸ್ವಲ್ಪ ಕಣ್ಣಿಂದ ನೋಡಿಕೊಳ್ಳಿರಿ. ನಾನು ಬೇಕಂತೇ ನೂರಾರು ಉತ್ತಮ ಕಿನಕಾಪಿನೊಳಗಿಂದ ತುಣುಕುಗಳನ್ನು ಆರಿಸಿ ತೆಗೆದು ಈ ಕುಪ್ಪಸವನ್ನು ಮಾಡಿಕೊಂಡು ಬಂದಿರುತ್ತೇನೆ. ಈ ಹಸರು, ಕೆಂಪು, ಹಳದಿ, ನೀಲಿ ಬಣ್ಣದ ಅರಿವೆಗಳನ್ನು ನಾನು ಎಷ್ಟು ಕೌಶಲ್ಯದಿಂದ ಕೂಡಿಸಿ ಹೊಲಿದಿರುತ್ತೇನೆ? ಇದನ್ನು ನಿಮ್ಮ ಕೈಯಲ್ಲಿ ತಕ್ಕೊಂಡು ಸ್ವಲ್ಪ ಪರೀಕ್ಷಿಸಿರಿ. ಇದು ಇಂದ್ರಧನುಷ್ಯದಂತೆ ಆಗಿರುತ್ತದೆ! ಅಪ್ಪನವರು ಇವನ್ನು ಒಮ್ಮೆ ಮೈಯಲ್ಲಿ ಹಾಕಿಕೊಂಡರೆ ಎಂದೂ ಮೈಯೊಳಗಿಂದ ತೆಗೆಯಲಿಕ್ಕೇ ಇಲ್ಲ. ನಿಮಗೂ ಎಲ್ಲ ಕೆಲಸ ಬಿಟ್ಟು ಅವರ ಮೋರೆಯನ್ನೇ ನೋಡುತ್ತ ಕೂಡ್ರುವ ಮನಸ್ಸಾದೀತು ! ಈ ಕುಪ್ಪಸವು ಆ ಪ್ಯಾರಾಸಾನಿಯ ಕಣ್ಣಿಗೆ ಬಿದ್ದಗಳಿಗ್ಗೆ ಅವಳು ಇದನ್ನು ತಾನು ತಕ್ಕೊಳ್ಳಬೇಕೆಂದು ನನಗೆ ಎಷ್ಟಾರೆ ಇಂದ್ರಜಾಲವನ್ನು ಮಾಡಿದಳು ! ಆದರೆ ನಾನು ಅವಳಿಗೆ ಕೊಡಲಿಲ್ಲ. ಅದನ್ನು ಅಪ್ಪನವರ ದೆಸೆಯಿಂದಲೇ ತಂದಿರುತ್ತೇನೆ. ಯಾವದು ಎಲ್ಲಿರಬೇಕೋ ಅಲ್ಲಿಯೇ ಚಂದ ! ವ್ಹಾ. ಕುಪ್ಪಸವು ದೂರಿಂದ ಹೇಗೆ ಥಳ ಥಳ ಹೊಳೆಯುತ್ತದೆ !

**ಪ್ರತಾಪರಾವ**—ಹಾಗಾದರೆ ಈ ಕುಪ್ಪಸವು ಆ ವೇಶ್ಯೆಯ ಕೈಮುಟ್ಟಿ ಬಂದಿರುತ್ತದೇನು ?

**ಸಿಂಪಿಗ**—ರಾವಸಾಹೇಬರೇ, ಆಕೆಯು ಬರೀ ಕೈಹಚ್ಚಲಿಲ್ಲ. ಅದನ್ನು ತನ್ನ ಮೈಯಲ್ಲಿ ಹಾಕಿಕೊಂಡು ಸಹ ನೋಡಿದಳು ! ಏನೂ ಮಾಡಿದರೂ ಆಕೆಯು ಅದನ್ನು ತನ್ನ ಮೈಯೊಳಗಿಂದ ಕಳೆದುಕೊಡಲಾರದಾಗಿದ್ದಳು ! ಆಮೇಲೆ ನಾನು ಪೋಲೀಸ ಸಿಪಾಯಿಯನ್ನು ಕರೆದುತರುತ್ತೇನೆಂದು ಅಂಜಿಕೆ ಹಾಕಿದ ಮೇಲೆ ಅವಳು ಅದನ್ನು ಕಳೆದುಕೊಟ್ಟಳು !

**ಪ್ರತಾಪರಾವ**—ಹೀಗೇನು ? ಹಾಗಾದರೆ ನಿನಗೇ ಮೊದಲು ಪೋಲೀಸ ಸಿಪಾಯಿಯ ಕಡೆಗೆ ಒಪ್ಪಿಸುತ್ತೇನೆ. ಆ ವೇಶ್ಯೆಯು ತನ್ನ ಮೈಯೊಳಗೆ ಹಾಕಿಕೊಂಡಿದ್ದ ಕುಪ್ಪಸವನ್ನು ನನ್ನ ಪ್ರಿಯಳಿಗೆ ತಂದಿರುವೆಯಾ ? ಕೃತಘ್ನಾ ! ಅಧಿಕಪ್ರಸಂಗೀ ! ಕಳ್ಳಾ ! ಕತ್ತೇ !

**ಸಿಂಪಿಗ**—ರಾವಸಾಹೇಬರೇ, ಸುಮ್ಮನೆ ಬೈಯ್ಯಬೇಡಿರಿ. ಕುಪ್ಪಸವನ್ನು ಕೈಯಲ್ಲಿ ಹಿಡಿದಾದರೂ ಪರೀಕ್ಷೆ ಮಾಡಿರಿ.

**ಪ್ರತಾಪರಾವ**—( ಕುಪ್ಪಸವನ್ನು ಕೈಯಲ್ಲಿ ಹಿಡಿಕೊಂಡು ) ಇದರದೇ ಸ್ತುತಿಯನ್ನು ಇಷ್ಟೊತ್ತಿನ ತನಕ ನಡೆಸಿದ್ದಿಯಾ ? ಇದೇನು ಕುಪ್ಪಸವೇ ? ಕೀಳ ಹೆಂಗಸರು ತೊಟ್ಟುಕೊಳ್ಳುವಂಥ ಕುಪ್ಪಸವನ್ನು ನನ್ನ ಪ್ರಿಯಳು ತೊಟ್ಟುಕೊಳ್ಳ ಬೇಕೆನ್ನುವಿಯಾ ? ಹೊಲಿಯಾ ! ( ತನ್ನ ಆಳುಮನುಷ್ಯನನ್ನುದ್ದೇಶಿಸಿ ) ನೀಲಾ, ಆ ಚಾಬೂಕವನ್ನು ಇತ್ತ ತೆಗೆದುಕೊಂಡು ಬಾ.

**ನೀಲಾ**—ಧನಿಯರೇ, ಇದು ತಗೊಳ್ಳಿರಿ. ಇವಸಿಗೆ ನಾನು ಎರಡು ಏಟು ಕೊಡಲೇನು ? (**ಚಾಬೂಕವನ್ನು ಮುಂದೆ ಮಾಡುತ್ತಾನೆ.** )

**ಸಿಂಪಿಗ**—ರಾವಸಾಹೇಬರೇ, ಈ ಕುಪ್ಪಸವು ಹೇಗಿರುತ್ತದೆಂದು ಒಮ್ಮೆ ಬೇಗನೆ ಹೇಳಿಬಿಡಿರಿ. ನನಗೆ ಕೂಡ್ರಲಿಕ್ಕೆ ವೇಳೆ ಇಲ್ಲ.

**ಪ್ರತಾಪರಾವ**— ಈ ಕುಪ್ಪಸವು ಹೇಗಿರುತ್ತದೆಂದು ಬೇಗನೆ ಹೇಳ ಬೇಕೇ ? ಒಳ್ಳೇದು. ಈಗಿಂದೀಗಲೇ ಹೇಳುತ್ತೇನೆ ಕೇಳು. ಈ ಕುಪ್ಪಸವು ನಿನ್ನ ದೊಡ್ಡವ್ವನಾದ ಆ ಪ್ಯಾರಾಸಾನಿಗೇ ಯೋಗ್ಯವಾದದ್ದು. ಇದನ್ನು ಆಕೆಗೇ ಒಯ್ದು ಕೊಡು. ನನ್ನ ಹೆಂಡತಿಯು ಪೇಟೆಯ ಬಸವಿಯಲ್ಲ; ತಿಳಿಯಿತೇ ? ಅರ್ಧ ಎದೆಯನ್ನು ತೆರೆದುಕೊಂಡು ಅರ್ಧ ತೋಳನ್ನು ತೋರಿಸುತ್ತ ಜನರನ್ನು ಮೋಹ ಪಾಶದಲ್ಲಿ ಎಳೆದುಕೊಳ್ಳತಕ್ಕ ಕೆಲಸವೇನೂ ಇವಳದಲ್ಲ! ಇದೇನು ಕುಪ್ಪಸವೋ, ತೇಪಿ ಹಚ್ಚಿದ ಕವದಿಯೋ ? ಇಂಥ ತೇಪಿ ಹಚ್ಚಿದ ಕುಪ್ಪಸವನ್ನು ತೊಟ್ಟುಕೊಳ್ಳಲಿಕ್ಕೆ ನನ್ನ ಹೆಂಡತಿಗೆ ದರಿದ್ರತನವೇನೂ ಬಂದಿಲ್ಲ !

**ಶಾರ್ವಟಿಕಾ**—ಹಿಗೇಕೆ ವಿಪರೀತ ಮಾತಾಡುತ್ತೀರಿ ? ಈ ಕುಪ್ಪಸಕ್ಕೆ ಏನಾಗಿರುತ್ತದೆ ? ತೇಪಿ ಹಚ್ಚದೆ ಕುಪ್ಪಸವನ್ನು ಹೇಗೆ ಹೊಲಿಯಲಿಕ್ಕೆ ಬಂದೀತು ? ನಿಮಗೆ ತಿಳಿಯದಿದ್ದರೆ ಎರಡನೇಯವರನ್ನಾದರೂ ಕೇಳಿಕೊಳ್ಳಿರಿ. ಸಂಭಾವಿತ ಹೆಂಗಸರು ಸಹ ಇಂಥ ಕುಪ್ಪಸಗಳನ್ನು ತೊಡುವದು ಈಗ ವಾಡಿಕೆಯಾಗಿದೆ. ಇದು ನನ್ನ ಮನಸ್ಸಿಗೆ ಬಹಳ ಬಂದಿರುತ್ತದೆ !

**ಸಿಂಪಿಗ**—ಅವ್ವನವರು ಬಹು ಯೋಗ್ಯವಾಗಿ ಪರೀಕ್ಷೆ ಮಾಡಿದರು !

**ಪ್ರತಾಪರಾವ**—ಎಲೋ ಕುರುಬಾ ! ಈಕೆಯು ಮಾತಾಡಿದ್ದರ ಅರ್ಥವಾದರೂ ನಿನಗೆ ತಿಳಿಯಿತೇ ? ನಿನಗೆ ಹೊಲಿಯಲಿಕ್ಕೆ ತಿಳಿಯದಿದ್ದರೆ ಎರಡನೇ

ಯವರನ್ನು ಕೇಳಿಕೊಂಡು ಹೊಲಿಯತಕ್ಕದ್ದಿತ್ತೆಂದು ಈಕೆಯು ಅನ್ನುತ್ತಾಳೆ ! ಇದನ್ನು ಇಲ್ಲಿಂದ ಎತ್ತುತ್ತೀಯೋ, ಅಥವಾ ಚಾಬೂಕಿನ ಏಟುಗಳು ಬೇಕೋ ?

**ಸಿಂಪಿಗ—** ರಾವಸಾಹೇಬರೇ, ನಾನು ಇದನ್ನು ತಿರುಗಿ ಒಯ್ಯುವದಿಲ್ಲ. ನಿಮ್ಮ ಆಳುಮನುಷ್ಯನು ಹೇಳಿದಂತೆ ನಾನು ಹೊಲಿದು ತಂದಿದ್ದೇನೆ.

**ನೀಲಾ—** ಏನಲೇ ಕಿಸೆ ಕತ್ತರಿಸುವವನೇ, ಏನನ್ನುತ್ತೀ ?

**ಸಿಂಪಿಗ—** ನೀನು ನನಗೆ ಹೀಗೆ ಹೀಗೆ ಹೊಲಿದು ತರಬೇಕೆಂದು ಹೇಳ ಲಿಲ್ಲವೇ ?

**ನೀಲಾ—** ಧನಿಯರೇ, ನೋಡಿದಿರಾ ! ಇವನು ಹೇಗೆ ನನ್ನ ಕುತ್ತಿಗೆಗೆ ಬೀಳುತ್ತಾನೆ ? ಕುಪ್ಪಸವನ್ನು ಹೀಗೆ ಹೀಗೆ ಹೊಲಕೊಂಡು ಬರಬೇಕೆಂದು ಹೇಳ ಲಿಕ್ಕೆ ನಾನೇನು ಸಿಂಪಿಗನಮಗನೇ ? ಹುಟ್ಟಿದ ಮೇಲೆ ನಮ್ಮ ಅಪ್ಪನು ಸಿಂಪಿಗನ ಕೆಲಸವನ್ನು ಮಾಡಿಲ್ಲ, ನಾನು ಮಾಡಿಲ್ಲ. ಎಲೇ, ಸೂಜಿಯಲ್ಲಿ ದಾರ ಪೋಣಿಸುವ ವನೇ, ನಿಜವಾಗಿ ಮಾತಾಡು. ಇಲ್ಲದಿದ್ದರೆ ಧನಿಯರ ಮುಂದೆ ನಿನ್ನ ಹುಳಕು ಪೂರಾ ಹೊರಡಿಸಿ ಬಿಟ್ಟೇನು !

**ಸಿಂಪಿಗ—** ರಾವಸಾಹೇಬರೇ, ಇವನು ತೀರಾ ಸುಳ್ಳು ಮಾತಾಡುತ್ತಾನೆ (**ಕಿಸೆಯಲ್ಲಿದ್ದ ಕಾಗದವನ್ನು ತೆಗೆದು**) ಇದು ನೋಡಿರಿ ! ಇವನು ಹೇಳಿದಂತೆ ಅವ್ವನ ವರ ಮೈ ಅಳತೆಯ ಟಿಪ್ಪಣಿಯನ್ನು ಬರೆದು ಇಟ್ಟುಕೊಂಡಿರುತ್ತೇನೆ. (ಓದುತ್ತಾನೆ.) ಕುತ್ತಿಗೆ ಇಷ್ಟು ಕೊಯ್ಯಬೇಕು, ಎದೆಯ ಅಗಲ ಇಷ್ಟು ಇಡಬೇಕು, ರಟ್ಟೆಯ ಅಗಲ ಇಷ್ಟು ಇಡಬೇಕು, ಇದನ್ನೆಲ್ಲ ಒಂದೂ ಬಿಡದಂತೆ ನಾನು ಅಳತೆಯನ್ನು ಬರೆದುಕೊಂಡಿದ್ದೇನೆ. ನಾನು ಸುಳ್ಳು ಮಾತಾಡಿದರೆ ನಾಮದೇವನ ಆಣೆ ! ಮತ್ತು ನನ್ನ ಕೊರಳೊಳಗಿನ ಈ ತುಲಸೀ ಮಾಲೆಯ ಆಣೆ !

**ನೀಲಾ—** ಧನಿಯರೇ, ನಾನು ಹೀಗೆ ಸುಳ್ಳು ಅಳತೆಯನ್ನು ಏಕೆ ಬರಿಸೇನು? ನನಗೇನು ಅವ್ವನವರ ಅಳತೆ ಗೊತ್ತು ? ನಾನು ಇವನ ಕಡೆಗೆ ಹೋಗಿ "ಅವ್ವನ ವರಿಗೆ ಒಂದು ಚಲೋ ಕುಪ್ಪಸ ಹೊಲಿದುಕೊಡು" ಎಂದು ಹೇಳಿದೆ. "ಕುತ್ತಗಿ ಈ ಪ್ರಕಾರ ಕೊಯ್ಯಿ, ಎದೆ ಈ ಪ್ರಕಾರ ಇಡು, ಕವದಿಯಂತೆ ಈ ತೇಪೆಗಳನ್ನು ಹಚ್ಚು" ಎಂದು ನಾನೇನೂ ಇವನಿಗೆ ಹೇಳಲಿಲ್ಲ. ಇಂಥ ಉಸಾಬರಿಯನ್ನು ನಾನೇಕೆ ಮಾಡಲಿ ? ನಿಮ್ಮ ಪಾವದ ಆಣೆಯೆಂದರೂ ನಾನು ಈ ಪ್ರಕಾರ ಹೊಲಿದು ತರ ಲಿಕ್ಕೆ ಇವನಿಗೆ ಹೇಳಲಿಲ್ಲ.

**ಸಿಂಪಿಗ—** ಎಲೇ ಕಳ್ಳಾ, ನೀನು ಇಷ್ಟು ಸುಳ್ಳು ಮಾತಾಡಲಿಕ್ಕಿಲ್ಲೆಂದು ನಾನು ತಿಳಿದಿದ್ದೆನು. ಇಲ್ಲದಿದ್ದರೆ ನಾನು ಒಂದೆರಡು ಸಾಕ್ಷಿಗಳನ್ನು ಇಟ್ಟು ನಿನ್ನ ಹಲ್ಲು ಮುರಿಸುತ್ತಿದ್ದೆನು, ತಿಳಿಯಿತೇ ?

**ನೀಲಾ**—ನಾನೇಕೆ ಸುಳ್ಳು ಮಾತಾಡಲಿ? ನಿಮ್ಮಪ್ಪನು ಮಾತಾಡುತ್ತಿದ್ದಾನು. ಮತ್ತು ಹಲ್ಲು ಯಾರವು ಮುರಿಸುತ್ತಿದ್ದಿಯೋ ಮಗನೇ? ನನ್ನವು ಮುರಿಸುತ್ತಿದ್ದಿಯಾ? ನನ್ನ ಹಲ್ಲಿನ ಕಸುವು ಇದೇ ಈಗ ನಿನಗೆ ತೋರಿಸಲೇನು? ಕತ್ತೀಮಗನೇ, ನೀನು ಬಹಳ ಮಂದಿಯ ಕುತ್ತಿಗಿ ಕೊಯ್ದಿರುತ್ತೀ! ಬಹಳ ಮಂದಿ ಕಿಸೆ ಕತ್ತರಿಸಿರುತ್ತೀ! ಮತ್ತು ಬಹಳ ಮಂದಿಗೆ ಟೊಪ್ಪಿಗಿಯನ್ನು ಹಾಕಿರುತ್ತೀ! ಆದರೆ ನಿನ್ನ ಬಲಿಯಲ್ಲಿ ನಾನು ಸಿಗುವವನಲ್ಲ ನೋಡು! ನಿನ್ನ ಕಡಿಂವ ಬೈಗಳ ಬೈಯಿಸಿಕೊಂಡು ನಾನು ಸುಮ್ಮನಿರುವವನೂ ಅಲ್ಲ! ಬಹಳ ಎಚ್ಚರಿಕೆಯಿಂದ ಮಾತಾಡು. ಬಂದ ದಾರಿಯಿಂದ ಸುಮ್ಮನೆ ಹೊರಟುಹೋಗು. ಇಲ್ಲದಿದ್ದರೆ ಧನಿಯರು ಅಪ್ಪಣೆ ಕೊಟ್ಟರೆಂದರೆ ನಿನ್ನ ರಟ್ಟೀಕಿತ್ತು, ಬೆನ್ನ ಮೇಲೆ ನಾಲ್ಕು ಗುದ್ದಿಕೀಕೊಟ್ಟು, ಚಂಡ ಹಿಡಿದು ಹೊರಗೆ ಹಾಕೇನು.

**ಸಿಂಪಿಗ**—ಯಾಕಲೇ ಬಹಳ ಮಾತಾಡುತ್ತೀ? ನಮ್ಮ ಓಣಿಯಲ್ಲಿ ಒಮ್ಮೆ ಸಿಗು. ನಿನಗೆ ಒಂದು ಕೈ ನೋಡಿಬಿಡುತ್ತೇನೆ.

**ನೀಲಾ**—ಅದೇಕೆ? ನೀನು ಏನು ಮಾಡುವವನು? ಒಳ್ಳೇದಲೇ ಇರಲಿ! ನನ್ನದೂ ನಿನ್ನದೂ ಇಲ್ಲೇ ಒಂದೆರಡು ಕೈ ಆಗಲಿ! ನೀನು ಗಂಡಸಿನ ಮಗನು ಆಗಿದ್ದರೆ ನನ್ನ ಕೂಡ ಬಡದಾಡಲಿಕ್ಕೆ ಬಾ. ನಿನ್ನ ಗಜವನ್ನು ಕೈಯಲ್ಲಿ ಹಿಡಕೊಂಡು ಮುಂದಕ್ಕೆ ನಿಂತುಕೋ ಬಾ !!

**ಭೀಮರಾವ**—ಸಿಂಪಿಗನು ತನ್ನ ಕೈಯಲ್ಲಿ ಗಜ ಹಿಡಕೊಂಡರೆ ನೀನು ನಿನ್ನ ಕೈಯಲ್ಲಿ ಸಿದ್ರಾಮಸೋಟವನ್ನು ಹಿಡಿದುಕೊಳ್ಳುವಿಯೇನು? ವಾಹ್! ಏನು ಜೋಡಿಯು ಇದು?

**ನೀಲಾ**—ಅದೇಕೆ? ಬೇಕಾದರೆ ಅವನು ತನ್ನ ಕೈಯಲ್ಲಿ ಕತ್ತರಿ ಮತ್ತು ಅಂಗುಸ್ತಾನ ಹಿಡಕೊಂಡು ಬರಲಿ. ನಾನು ಎಲ್ಲಿ ಅದಕ್ಕೆ ಬೇಡೆನ್ನುತ್ತೇನೆ?

**ಪ್ರತಾಪರಾವ**—ಸಾಕು. ನೀಲಾ, ಸುಮ್ಮನೆ ಇರು. ಏನಪ್ಪಾ, ಕತ್ತರಿ-ಗಜ-ಅಂಗುಸ್ತಾನ ಬಹಾದ್ದರನೇ! ನಮಗೆ ನಿನ್ನ ಕುಪ್ಪಸದ ಅಗತ್ಯವಿಲ್ಲ, ತಿಳಿಯಿತೇ? ಇದೇನು ಕುಪ್ಪಸವೋ? ಎತ್ತಿನ ಕಣ್ಣುಗಳ ಮತ್ತು ಮೂಗಿನ ಮೇಲೆ ಹಾಕುವ ಗವಸಣಿಕೆಯೋ? ಅಥವಾ ಕಾಬೂಲೀ ಜನರು ತೊಡುವ ಚಣ್ಣವೋ? ಡೊಂಬರ ಚೀಲವೋ? ಇಲ್ಲವೆ ಗೋಸಾವೀ ಜನರ ಜೋಳಿಗೆಯೋ? ಅಥವಾ ಕಾಳಿನ ವ್ಯಾಪಾ

ರಸ್ಥರು ಕಾಳು ತುಂಬುವ ಚೀಲವ್ರೋ ? ಅದೇನೂ ಇರಲಿ. ಇದನ್ನು ತೆಗೆದುಕೊಂಡು ಪ್ಯಾರಾಸಾನಿಗೆ, ತಾರಾಸಾನಿಗೆ, ಅಥವಾ ಜಮುನಾಸಾನಿಗೆ ಒಯ್ದು ಕೊಡು. ನಮಗೆ ಇದು ಬೇಡ. ಪ್ರಿಯೇ ಇದೇ ಪ್ರಕಾರ ಇವನಿಗೆ ಹೇಳುವದು ಸರಿಯಷ್ಟೇ ! ಚಿಂತಿಲ್ಲ. ನೀನೇನೂ ಉತ್ತರ ಕೊಡುವ ಶ್ರಮ ತೆಗೆದುಕೊಳ್ಳ ಬೇಡ. ನಿನ್ನ ಮನಸ್ಸಿನ ಅಭಿಪ್ರಾಯವು ನನಗೆ ತಿಳಿದಿರುತ್ತದೆ. ನಾಮದೇವಣ್ಣಾ, ಇಲ್ಲಿಂದ ನಿನ್ನ ಗುಡಚಾಪೀ ಕಟ್ಟು ! ಇಲ್ಲದಿದ್ದರೆ ನಿನ್ನ ಅವಸ್ಥೆಯನ್ನು ನೋಡಿಕೋ. ( ಕುಪ್ಪಸವನ್ನು ಸಿಂಪಿಗನ ಕಡೆಗೆ ಒಗೆಯ್ಯುತ್ತಾನೆ. ) ( ಚಾಬೂಕಿನ ಸಪ್ಪಳವನ್ನು ಮಾಡುತ್ತಾನೆ. )

**ತ್ರಾಟಿಕಾ**—ನನ್ನ ಮನಸ್ಸಿನೊಳಗಿನ ಅಭಿಪ್ರಾಯವು ನಿಮಗೆ ಗೊತ್ತಾಯಿತೇನು ? ಗೊತ್ತಾಗಿದ್ದರೆ ಬಹಳ ಒಳ್ಳೇದೇಸರಿ. ಇನ್ನು ನೀವು ನನ್ನ ಮಾತಿನಲ್ಲಿ ಬಾಯಿ ಹಾಕಬೇಡರಿ ! ಮನುಷ್ಯರಿಗೆ ಮಾತಾಡಲಿಕ್ಕೆ ಬೇಸರಿಕೆಯು ಏಕೆ ಬರುವದಿಲ್ಲವ್ರೋ ತಿಳಿಯದು ! ನಿಮ್ಮ ಮಾತು ಕೇಳಿ ಕೇಳಿ ನನ್ನ ಕಿವಿಗಳಂತೂ ಮುರಗಟ್ಟಿಹೋದವು !! ಆದರೆ ನಿಮ್ಮ ಬಾಯಿಯು ಮಾತ್ರ ಇನ್ನೂ ನಿಲ್ಲಲೊಲ್ಲದು. ಇದು ನೋಡಿರಿ, ನಾನು ಇನ್ನೂ ಮೊಲೆ ಕುಡಿಯುವ ಕೂಸಲ್ಲ. ಇಲ್ಲಿ ನಡೆದಿರುವ ಎಲ್ಲ ಸಂಗತಿಯು ನನ್ನ ಲಕ್ಷ್ಯದಲ್ಲಿ ಚನ್ನಾಗಿ ಬಂದಿರುತ್ತದೆ. ನೀವು ಬೇಕಾದ್ದು ಮಾಡಿದರೂ ನಾನು ನಾಯಿಯಂತೆ ನಿಮ್ಮ ಮಾತು ಕೇಳಿಕೊಂಡು ಸುಮ್ಮನೆ ಇರುವವಳಲ್ಲ ! ನನ್ನ ಮನಸ್ಸಿಗೆ ಬಂದಂತೆ ಮಾಡುವವಳು. ನೀವು ನನಗೆ ಬೇಕಾದಷ್ಟು ಕಷ್ಟ ಕೊಟ್ಟರೂ ಚಿಂತಿಲ್ಲ ! ಸಿಂಪಿಗನೇ, ನಿನ್ನ ಕುಪ್ಪಸದ ಮೇಲೆ ನನ್ನ ಮನಸ್ಸು ಬಹಳ ಉಂಟು. ನಿನ್ನ ಹಣವನ್ನು ನಾನು ಪೈಗೆ ಪೈ ತೀರಿಸುವೆನು. ಈ ಕುಪ್ಪಸವನ್ನು ತಿರುಗಿ ಒಯ್ಯಬೇಡ !

**ಭೀಮರಾವ**—( ತನ್ನಷ್ಟಕ್ಕೆ ) ತಿರುಗಿ ಪರೀಕ್ಷೆಯ ವೇಳೆಯು ಬಂತು ! ಇನ್ನು ಇವರಿಬ್ಬರ ಜಗಳವು ಬಹಳ ಚಮತ್ಕಾರವಾಗಿ ನಡೆಯುವದು!! ಅದರೊಳಗೆ ಯಾರು ಸೋಲುತ್ತಾರೋ ನೋಡೋಣ !!!

**ಸಿಂಪಿಗ**—ಅವ್ವನವರೇ, ಈ ಕುಪ್ಪಸ ತಕ್ಕೊಳ್ಳಿರಿ. ನಿಮ್ಮ ಕಡೆಯಿಂದ ದುಡ್ಡು ಬರುವ ಚಿಂತೆಯು ನನಗೆ ಎಳ್ಳಷ್ಟೂ ಚಿಂತಿಲ್ಲ. ರಾವಸಾಹೇಬರು ಒಂದು ತುಟಿ ಎರಡು ಮಾಡದೆ ದುಡ್ಡು ಕೊಟ್ಟೇಕೊಡುತ್ತಾರೆ ! ( ಕುಪ್ಪಸವನ್ನು ಮುಂದೆ ಮಾಡುತ್ತಾನೆ. )

**ಪ್ರತಾಪರಾವ**— ( ಸಿಂಪಿಗನ ಕೈಯಿಂದ ಕುಪ್ಪಸವನ್ನು ಕೊಸರಿಕೊಂಡು) ಏನೋ ಕತ್ತೇ ! ಹೊಲಿಯಾ ! ಕಳ್ಳಾ ! ಅಧಮಾ ! ನಿನಗೆ ನನ್ನ ಹೆಂಡತಿಯ ಸಂಗಡ ಒಮ್ಮೆಲೆ ಮಾತಾಡಲಿಕ್ಕೆ ನಾಚಿಕೆಯು ಬರಲಿಲ್ಲೇ ? ನೋಡು, ಆಕೆಯು ಹೇಗೆ ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿರುತ್ತಾಳೆ ? ಇಲ್ಲಿಂದ ಹೊರಟು ಹೋಗು. ಆಕೆಯ ಕಣ್ಣು ಮುಂದೆ ನಿಂತುಕೊಳ್ಳಬೇಡ ! ಇನ್ನೂ ಈ ಸ್ಥಳವನ್ನು ಬಿಡುವದಿಲ್ಲೇ? ತಿರುಗಿ ಆಕೆಯ ಮೋರೆಯ ಕಡೆಗೆ ನೋಡುತ್ತೀಯಾ ? ನಿಲ್ಲು. ನಿನ್ನ ಕಣ್ಣು ಗುಡ್ಡೇ ಕೀಳಿಸುತ್ತೇನೆ ! ನೀಲಾ, ಕತ್ತೆಯ ಮಗನೇ, ಏನು ನೋಡುತ್ತೀ ? ನಾಲ್ಕು ಒದ್ದು ಇವನನ್ನು ಹೊರಗೆ ದೂಡು ! ( ನೀಲನು ಸಿಂಪಿಗನನ್ನು ಒದ್ದು ಹೊರಗೆ ಹಾಕುತ್ತಾನೆ. ) ( ಭೀಮರಾಯನ ಸಂಗಡ ಮಗ್ಗಲಿಗೆ ) ಭೀಮರಾವ, ಈ ಕುಪ್ಪಸವನ್ನು ತೆಗೆದುಕೊಂಡು ನೀಲನ ಕೈಯ್ಯಲ್ಲಿ ಕೊಡು ! ಮತ್ತು ಇದರ ಕಿಮ್ಮತ್ತನ್ನು ಬೇಗನೇ ಮುಟ್ಟಿಸುತ್ತೇವೆಂದು ಸಿಂಪಿಗನಿಗೆ ಸಮಾಧಾನ ಹೇಳಿ ಅವನನ್ನು ಕಳುಹಿಸಿಕೊಡು. ( ಭೀಮರಾಯನು ಹೋಗುತ್ತಾನೆ. ಜವಳಿಯುವನನ್ನುದ್ದೇಶಿಸಿ ) ಹ ! ತೆಗೆಯಿರಿ; ಅಣ್ಣನವರೇ, ಆ ಜರದ ಪೀತಾಂಬರವನ್ನು ಬೇಗನೆ ತೋರಿಸಿರಿ. ಪ್ರಿಯೇ, ಇದು ನಿನ್ನ ಮನಸ್ಸಿಗೆ ಬರುತ್ತದೋ ? ಬಹಳಮಾಡಿ ಬರಲಿಕ್ಕಿಲ್ಲ ! ಈ ಪ್ರಕಾರ ನಿನ್ನ ಮೋರೆಯನ್ನುಗಂಟು ಹಾಕಬೇಡ. ನಿನ್ನಕಿಂತ ಮುಂಚೆಯೇನಾನು ಇವರಿಗೆ"ನಮಗೆ ಇದು ಬೇಡ ! ಅತ್ತಕಡೆಗೆ ತೆಗೆದಿಡಿರಿ" ಎಂದು ಹೇಳುತ್ತೇನೆ. ಸೆಟ್ಟರೇ, ನಿಮ್ಮ ಹತ್ತಿರ ನೀಲೀ ಬಣ್ಣದ ಗೋಡಂಬಿಯ ನಕ್ಷೆಯುಳ್ಳ ಪೀತಾಂಬರವು ಇದ್ದರೆ ತೆಗೆಯಿರಿ. ಅದನ್ನು ಉಟ್ಟುಕೊಂಡರೆ ನನ್ನ ಪ್ರಿಯಳು ಆಕಾಶದಲ್ಲಿ ಚಂದ್ರನು ಶೋಭಿಸುವಂತೆ ಶೋಭಿಸಬೇಕು, ಕಂಡಿರಾ ?

**ಜವಳಿಯುವ**— ರಾವಸಾಹೇಬರೇ, ಈ ಪೀತಾಂಬರದ ನೇಗೆಯನ್ನಾದರೂ ನೋಡಿರಿ. ಇದು ಕೈಯಲ್ಲಿ ಎಷ್ಟು ಹಗುರವಿರುತ್ತದೆ ! ಇದರಲ್ಲಿಯ ನಕ್ಷೆಗಳು ಎಷ್ಟು ಚಂದವಿರುತ್ತವೆ ! ಇದರ ಅಂಚು ಎಷ್ಟು ನಿರಸವಿರುತ್ತದೆ ! ಇಂಥ ಸನಗು ಪೇಟೆಯಲ್ಲಿ ಬರುವದು ಬಹಳ ಅಪರೂಪ ! ಇದರ ಮೇಲೆ ಅಮ್ಮನವರ ಪ್ರೀತಿಯು ಬಹಳ ಇರುತ್ತದೆ. ಇದನ್ನು ನೀವು ತೆಗೆದುಕೊಂಡು ಬಿಡಿರಿ. ನಿಮಗೆ ತಿಳಿಯಲಿಕ್ಕಿಲ್ಲ !

**ಪ್ರತಾಪರಾವ**— ಎಲಾ ಕಳ್ಳಾ! ನಿನ್ನ ಸಂಗಡ ನಾನು ಬಹಳ ಸನ್ಮಾನದಿಂದ ಮಾತಾಡುತ್ತೇನೆಂದು ನನ್ನ ಪ್ರಿಯಳಿಗೆ ಬೇಡಾದದ್ದನ್ನೇ ತಿರುತಿರುಗಿ ತೋರಿಸಿ

ಅದನ್ನು ವಿಶೇಷವಾಗಿ ಬಣ್ಣಿಸುತ್ತೀಯಾ? ಅದು ತನಗೆ ಬೇಡೆಂದು ಅವಳು ಮೂಗು ಮುರಿದದ್ದು ಕಾಣಲಿಲ್ಲವೇ ? ನಿನಗೆ ಆಕೆಯ ಮೋರೆಯ ಕಡೆಗೆ ನೋಡಲಿಕ್ಕೆ ನಿನಗೆ ಯಾರು ಹೇಳಿದರು! ನಿನ್ನ ಯೋಗ್ಯತೆಯು ಎಷ್ಟು! ಘಟಿಂಗಾ, ಬದಮಾಷಾ, ಅಫುಖೋರಾ, ಗಾಂಜಿಬಡಕಾ! ಇಲ್ಲಿಂದ ಮೊದಲು ಏಳುತ್ತೀಯೋ ಇಲ್ಲೋ ?

ಏ ನೀಲಾ,— ಏನು ನೋಡುತ್ತೀ ? ಇವನನ್ನು ಹೊರಗೆ ದಬ್ಬು.

**ಜವಳಿಯುವ**—ರಾವಸಾಹೇಬರೇ, ನೀವೇಕೆ ಇಷ್ಟು ಶ್ರಮ ತೆಗೆದುಕೊಳ್ಳುತ್ತೀರಿ ! ನಾನೇ ಹೊರಟೆ ನೋಡಿರಿ. ಕ್ಷಮೆ ಇರಲಿ. ಸಿಟ್ಟಾಗ ಬೇಡಿರಿ. ಅಪ್ಪನವರೇ, ಹೋಗಿ ಬರುತ್ತೇನೆ. ( **ಹೋಗುತ್ತಾನೆ.** )

**ಪ್ರತಾಪರಾವ**—ಪ್ರಿಯೇ, ಈ ಹೊತ್ತು ನಾವು ಏನೂ ವ್ಯಾಪಾರಮಾಡುವದು ಬೇಡ. ಎಲೇ ಕಳ್ಳರಿರಾ, ಮೋಸಗಾರರಿರಾ, ಕಟಕರಿರಾ,ಕುತ್ತಿಗೆಗೊಯ್ಕರಿರಾ, ಕೀಳರಿರಾ ! ನೀವೆಲ್ಲರೂ ಇಲ್ಲಿಂದ ಹೊರಟು ಹೋಗಿರಿ. ಈ ಹೊತ್ತು ನಮ್ಮ ನಿಮ್ಮ ವ್ಯಾಪಾರವು ಹೊಂದುವ ಲಕ್ಷಣವಿಲ್ಲ ! ಈ ಹೊತ್ತು ಕೆಟ್ಟ ಮುಹೂರ್ತವಿರುವದರಿಂದ ನಮಗೆ ನಿಮ್ಮಂಥ ಕಳ್ಳರು, ಮೋಸಗಾರರು, ಘಟಿಂಗರು, ಬದಮಾಷರು, ಭಾಮಟೇ ಜನರು ಗಂಟುಬಿದ್ದಿರಿ ! ಹ. ಇಲ್ಲಿಂದ ಏಳಿರಿ! ನಿಮ್ಮ ನಿಮ್ಮ ಗಂಟು ತಲೆಯಮೇಲೆ ಹೊತ್ತುಕೊಂಡು ದಾರೀ ಹಿಡಿಯಿರಿ ! ( **ಅಕ್ಕಸಾಲಿಗನೂ ಮುತ್ತುಗಾರನೂ ಹೋಗುತ್ತಾರೆ.** ) ( **ತಾಟಕೆಯನ್ನುದ್ದೇಶಿಸಿ** ) ಓ ಮೇರೆ ದಿಲ್, ಓ ಮೆರೆ ಜಾನ್ ರಂಗೂ ! ಆ ಮೆರಾ ಕಲಿಜಾ ! ಚಲೋ, ಆಪ ಐಸೇಹೀ ಚಲೇ ಜಾಯಿಂಗೆ. ನಮಗೆ ಈ ಅಲಂಕಾರಗಳು ಏತಕ್ಕೆ ಬೇಕು? ಇವೆಲ್ಲ ಹೊರಗಿನ ದೊಡ್ಡಿಸ್ತನಕ್ಕಲ್ಲೇ ? ಇವುಗಳನ್ನು ಜನರಿಗೆ ತೋರಿಸಿ ನಾವು ನಮ್ಮ ಒಳಗಿನ ಹುಳುಕು ಮುಚ್ಚಿಕೊಳ್ಳತಕ್ಕದ್ದೇನದೆ? ನಮ್ಮ ಮನಸ್ಸಿನ ದೊಡ್ಡಿಸ್ತನವೂ ನಮ್ಮ ಭಾಂಡಾರದೊಳಗಿನ ಸಂಪತ್ತೂ ಎಲ್ಲಿಯಾದರೂ ಓಡಿಹೋಗುತ್ತವೇನು ? ಚಂದ್ರನ ಪ್ರತಿಬಿಂಬವು ಮೋಡಗಳ ಸಮುದಾಯದಲ್ಲಿ ಹೆಚ್ಚು ಶೋಭಾಯಮಾನವಾಗುವಂತೆ ನಮ್ಮ ಸದ್ಗುಣಗಳು ಬಡತನದ ವಸ್ತ್ರಗಳಲ್ಲಿ ಹೆಚ್ಚು ಯೋಗ್ಯತೆಯನ್ನು ಹೊಂದುವವು ! ಹಾವಿನ ತೊಗಲು ಮೃದುವಾಗಿರುತ್ತದೆಂದು ತಿಳಿದು ಹಾವನ್ನು ಯಾರಾದರೂ ಅಪ್ಪಿಕೊಳ್ಳುವರೇ ? ಅದರಂತೆ ಮೈಮೇಲೆ ಅಲಂಕಾರಗಳನ್ನಿಟ್ಟುಕೊಂಡ ಮಾತ್ರದಿಂದ ದುರ್ಗುಣಿಗಳನ್ನು ಯಾರಾವರೂ ಪ್ರೀತಿಸುವರೇ ? ಪ್ರಿಯೇ,

ನಿನಗೇನು ಹೇಳಲಿ ? ಈ ದರಿದ್ರವಾದ ಮತ್ತು ಮಲೀನವಾದ ವಸ್ತ್ರಗಳಿಂದಲೇ ನೀನು ನನಗೆ ಹೆಚ್ಚು ಮೋಹಕವಾಗಿ ಕಾಣಿಸುತ್ತೀ. ನೀನು ಹೀಗೆ ಇದ್ದರೇನೇ ನನಗೆ ಹೆಚ್ಚು ಪ್ರಿಯಕರಳಾಗುವೆ. ನಿನ್ನ ವಸ್ತ್ರಗಳು ಸಾಮಾನ್ಯವಾಗಿರುತ್ತವೆಂದು ನೀನು ನಾಚಿಕೊಳ್ಳಬೇಡ. ಇದರ ನಾಚಿಕೆಯು ನನ್ನದು ! ನೀನು ಆನಂದದಲ್ಲಿರು!! ನಡೆ ಇನ್ನು. ಮಾವನವರ ಕಡೆಗೆ ಹೋಗೋಣ. ಅಲ್ಲಿ ಹೋದ ತರುವಾಯ ನಾವು ರಾತ್ರಿಹಗಲು ಆನಂದಾತಿಶಯದಿಂದಲೇ ಇದ್ದು. ಆನಂದವನ್ನು ಸೂರಿಮಾಡೋಣ !! ( **ಭೀಮರಾಯನೂ ನೀಲ್ಯಾನೂ ತಿರುಗಿ ಬರುತ್ತಾರೆ.** ) ನೀಲ್ಯಾ, ಬೇಗನೆ ಕುದುರೆಗೆ ಜೋಗೀರು ಏರಿಸಿ ಮೂರು ದಾರಿಗಳು ಕೂಡುವ ಮೂಲಿಯಲ್ಲಿ ಅದನ್ನು ಒಯ್ದು ನಿಲ್ಲಿಸು ! ( **ನೀಲ್ಯಾನು ಹೋಗುತ್ತಾನೆ.** ) ಪ್ರಿಯೇ, ನಾವು ಅಲ್ಲಿಯವರೆಗೆ ನಡೆಯುತ್ತ ಹೋಗೋಣ. ಈ ತಂಪು ಹೊತ್ತಿನಲ್ಲಿ ನಾವು ಆನಂದದಿಂದ ವಿಹಾರ ಮಾಡೋಣ ನಡೆ. ಭೀಮರಾವ, ನೀನೂ ನಮ್ಮ ಸಂಗಡ ನಡೆ. ಅಹಹ ! ಪ್ರಾತಃಕಾಲವು ಎಷ್ಟು ಶಾಂತವಾಗಿಯೂ, ಆಹ್ಲಾದಕರವಾಗಿಯೂ, ಇರುತ್ತದೆ ! ನಾವು ಈಗ ಹೊರಟರೆ ಮಧ್ಯಾಹ್ನದ ಊಟದ ಹೊತ್ತಿಗೆ ನಿಶ್ಚಯವಾಗಿ ಊರು ಮುಟ್ಟುವೆವು.

**ತ್ರಾಟಿಕಾ**—ಇದು ಪ್ರಾತಃಕಾಲವೇ? ಮಟಮಟ ಮಧ್ಯಾಹ್ನದ ಹೊತ್ತು ! ಬಿಸಿಲು ಎಷ್ಟು ಪ್ರಖರವಾಗಿ ಕಾದಿರುತ್ತದೆ ! ಇಂಥ ಬಿಸಿಲಿನಲ್ಲಿ ಹೇಗೆ ಪ್ರವಾಸ ಮಾಡಬೇಕು ! ನನಗಂತೂ ಹೊರಗೆ ಬಿಸಿಲು ನೋಡಲಿಕ್ಕೆ ಸಹ ಆಗುವದಿಲ್ಲ. ಈಗೀಗ ಎರಡು ಹೊಡೆದದ್ದು ನಿಮಗೆ ಕೇಳಿಸಲಿಲ್ಲವೇ !

**ಪ್ರತಾಪರಾವ**—ಹಾಗಾದರೆ ಈಗ ಎರಡು ಹೊಡೆದವೇ ! ಅಂದಮೇಲೆ ಇನ್ನೂ ಬೆಳಗಾಗಲಿಕ್ಕೆ ಬಹಳ ಅವಕಾಶವಿದ್ದಂತಾಯಿತು ! ಇದರಿಂದ ನಮಗೆ ಮತ್ತಿಷ್ಟು ಉತ್ತಮವಾಯಿತು ! ನಸುಕು ಹರಿದು ಜನರು ಹಾಸಿಕೆಯಿಂದ ಏಳುವದರೊಳಗಾಗಿ ನಾವು ಊರಿಗೆ ಹೋಗಿ ಮುಟ್ಟುವೆವು !!

**ತ್ರಾಟಿಕಾ**—ಸಾಕು ಸಾಕು ! ನಿಮ್ಮ ಮಾತು ಕೇಳಿದರೆ ಜನರು ಬಿದ್ದು ಬಿದ್ದು ನಕ್ಕಾರು. ಮಧ್ಯಾಹ್ನಕ್ಕೆ ಪ್ರಾತಃಕಾಲವೆಂದು ಅನ್ನುವದು ಎಲ್ಲಿಯ ಸಾಂಪ್ರದಾಯವು ? ತಮ್ಮ ಹುಚ್ಚುತನವನ್ನು ಮುಚ್ಚಿಕೊಳ್ಳುವ ಜಾಣತನವಿಲ್ಲದಿರುವವರಿಗೆ ಏನನ್ನಬೇಕು ?

**ಪ್ರತಾಪರಾವ**—ಹೀಗೇನು ? ನಾನು ಮೂರ್ಖನೇ ? ನನಗೆ ಬಹಳ ದೊಡ್ಡ ಮಾನವನ್ನು ಕೊಟ್ಟೆ ! ಹೆಂಗಸರು ಗಂಡಂದಿರಿಗೆ ಬೇಕಾದಂತೆ ಮಾತಾಡಿ ಅವಮಾನವನ್ನು ಮಾಡಿದರೂ ಗಂಡಂದಿರು ನಿರ್ಲಜ್ಜರಂತೆ ಸುಮ್ಮನೆ ಕುಳಿತುಕೊಳ್ಳಬೇಕೇ ? ಅದು ಏನೇ ಇರಲಿ. ನಾನು ಈಗ ಪ್ರಾತಃಕಾಲವಿರುತ್ತದೆಂತಲೇ ಅನ್ನುತ್ತೇನೆ !

**ತ್ರಾಟಿಕಾ**— ನಾನು ಈಗ ಮಧ್ಯಾಹ್ನದ ೨ ಗಂಟೆಯಾಗಿದ್ದು ೩ ಗಂಟೆ ಬಡಿಯುವ ಹೊತ್ತು ಆಗಿರುವದೆಂತಲೇ ಅನ್ನುತ್ತೇನೆ !

**ಪ್ರತಾಪರಾವ**—ಒಳ್ಳೇದು, ಹಾಗೇ ಅನ್ನುತ್ತ ನಿಂತುಕೋ ' ನನ್ನಮಾತು ಸತ್ಯವೆಂದು ನೀನು ಒಡಂಬಡುವ ತನಕ ನಾನು ಈ ಸ್ಥಳವನ್ನು ಬಿಟ್ಟು ಮುಂದಕ್ಕೆ ಹೆಜ್ಜೆಯನ್ನು ಸಹ ಇಡುವದಿಲ್ಲ !! ನಾನು ಹೇಳಿದ ಹೊತ್ತು ಆಗುವವರೆಗೆ ಇಲ್ಲಿಂದ ಹೊರಡುವದೇ ಬೇಡ. ನೀಲ್ಯಾ, ಕುದುರೆಯ ಮೇಲಿನ ಜೋಗೀರವನ್ನು ಇಳಿಸಿಬಿಡು. ನಮಗೆ ಈಗಲೇ ಹೋಗುವ ಮನಸ್ಸಿಲ್ಲ! ರಾಣೀಸಾಹೇಬರೇ, ಈಗ ಬಿಸಿಲು ಬಹಳ ತೀಕ್ಷ್ಣವಿರುತ್ತದೆ ಕಂಡಿರಾ ? ಇಂಥ ಬಿಸಿಲಿನಲ್ಲಿ ನೀವು ಹೊರಟರೆ ನಿಮ್ಮ ಕೋಮಲವಾದ ಶರೀರವು ಕಮರಿ ಹೋದೀತು ! ಆದುದರಿಂದ ನೀವು ಈ ನಿಮ್ಮ ಗುಲಾಬೀ ಹೂವಿನಂಥ ದೇಹವನ್ನು ಮನೆಯಲ್ಲಿ ಒಯ್ದು ಇಟ್ಟುಕೊಂಡು ಚೆನ್ನಾಗಿ ಕಾಪಾಡಿರಿ.

**ಭೀಮರಾವ**— ( ತನ್ನಷ್ಟಕ್ಕೆ ) ಇವನು ಸೂರ್ಯನನ್ನು ಸಹ ತನ್ನ ದಾಸಾನುದಾಸನಾಗಿ ಮಾಡಿಕೊಳ್ಳಬಹುದು ! ಅಂದಮೇಲೆ ಇವಳ ಪಾಡೇನು ! ಇವನು ನಿಶ್ಚಯವಾಗಿ ಇವಳನ್ನು ಬೇಗನೆ ಹಾದಿಗೆ ತರುವನು. ಈಗ ಇವನು ತಾನು ಇಲ್ಲಿಂದ ಮುಂದೆ ಹೋಗುವದಿಲ್ಲೆಂದು ಬಾಯಿಂದ ಆಡಿದ ಕೂಡಲೆ ಅವಳ ಅಹಂಕಾರದ ಮೋರೆಯು ಹೇಗೆ ಒಮ್ಮಿಂದೊಮ್ಮೆ ಇಳಿದು ಹೋಯಿತು ! ಇವನು ತಾನು ಮಾತಾಡಿದಂತೆ ಹೋಗುವದನ್ನು ಬಿಟ್ಟುಕೊಟ್ಟನೆಂದು ತಿಳಿದಕೂಡಲೆ ಅವಳು ಮೇಣದಂತೆ ಮೆತ್ತಗಾಗೇ ಆಗುವಳು !

**ತ್ರಾಟಿಕಾ**— ದೇವರೇ, ನನ್ನನ್ನು ಈ ಬೆಂಕಿಯಲ್ಲಿ ಏಕೆ ತಂದುಹಾಕಿದೆ ? ನನ್ನ ಲಗ್ನವಾಗದಿದ್ದರೂ ನೆಟ್ಟಗಾಗುತ್ತಿತ್ತು ! ನಾನು ನಮ್ಮ ತಂದೆಯ ಮನೆ

ಯಲ್ಲಿ ತೊತ್ತಾಗಿದ್ದುಕೊಂಡು, ಅವನು ಹೇಳಿದ ಕೆಲಸವನ್ನು ಮಾಡುತ್ತ, ಹಾಕಿದ್ದನ್ನು ಉಂಡು ತಿಂದು, ಸಂತೋಷದಿಂದ ಇರುತ್ತಿದ್ದೆನು. ಈ ಉಪದ್ರವವನ್ನು ನಾನು ಸರ್ವಥಾ ತಡೆಯಲಾರೆನು. ಇವರು ಹೇಳಿದ್ದನ್ನು ಸುಮ್ಮನೆ ಒಪ್ಪಿಕೊಳ್ಳುವದು ಒಳ್ಳೇದೆಂದು ಒಮ್ಮೊಮ್ಮೆ ನನ್ನ ಮನಸ್ಸಿನಲ್ಲಿ ಬರುತ್ತದೆ. ಆದರೆ, ತಾಯೀ, ನಾನು ಅದನ್ನಾದರೂ ಹೇಗೆ ಮಾಡಲಿ? ಸುಳ್ಳಿದ್ದದ್ದು ನಿಜವೆಂದು ಹೇಗೆ ನುಡಿಯಲಿ? ಹಾಗೆ ನುಡಿಯದಿದ್ದರೆ ಈ ಉಪದ್ರವವು ನನ್ನ ಪಾಲಿಗೆ ತಪ್ಪುವಂತೆ ಕಾಣಿಸುವದಿಲ್ಲ. ಛೇ! ನನ್ನಿಂದಂತೂ ಈ ಉಪದ್ರವವನ್ನು ಸರ್ವಥಾ ತಡೆಯಲಿಕ್ಕಾಗುವದಿಲ್ಲ! ( **ಹೋಗುತ್ತಾಳೆ.** )

**ಭೀಮರಾವ**— ಪ್ರತಾಪರಾವ, ನೀನು ಅವಳಿಗೆ ಇಷ್ಟೇಕೆ ಪೀಡಿಸುತ್ತೀ? ಆಕೆಯ ಮೋರೆಯು ಹೇಗೆ ಸಣ್ಣಾಗಿರುತ್ತದೆಂಬುವದನ್ನು ನೀನು ನೋಡಿದೆಯಾ? ನಿಶ್ಚಯವಾಗಿ ಅವಳನ್ನು ನೋಡಿ ನನಗೆ ದಯವು ಬರುತ್ತದೆ! ಆಕೆಯು ಹೋಗುವಾಗ್ಗೆ ಏನೆಂದಳೆಂಬುವದನ್ನು ಕೇಳಿದೆಯಾ?

**ಪ್ರತಾಪರಾವ**— ಎಲೋ ನಾನು ಬರೇ ಕೇಳಲಿಲ್ಲ! ಕೇಳಿ ಸಂತೋಷಪಟ್ಟೆನು. ನನ್ನ ಕೆಲಸವು ಈಗ ಮುಕ್ಕಾಲು ಮೂರು ಪಾಲು ಆದಂತಾಯಿತು. ಅವಳನ್ನು ನಾನು ಈ ರೀತಿಯಿಂದ ನಡೆಸಿಕೊಳ್ಳುವ ಬಗ್ಗೆ ನನಗೆ ಕೆಡಕು ಅನ್ನಿಸುವದಿಲ್ಲೆಂದು ತಿಳಿದೆಯಾ? ನಾನು ಈಗ ಅವಳಿಗೆ ದಯ ತೋರಿಸಿದರೆ ಅದರಿಂದ ನನಗೂ ಅವಳಿಗೂ ಕೂಡಿಯೇ ಘಾತವಾಗುವದು! ಕಠೋರತನವೇ ಈ ಕಾಲಕ್ಕೆ ನಿಜವಾದ ದಯವು! ಅವಳ ಖೋಡಿತನವು ಹೋದನಂತರ ನಾನು ಅವಳನ್ನು ಬೇಕಾದಂತೆ ತಲೆಯಮೇಲೆ ಕುಳ್ಳಿರಿಸಿಕೊಂಡು ಕುಣಿದಾಡುವೆನು!

**ಭೀಮರಾವ**— ಈಗ ನಾನು ಇಲ್ಲಿರುವ ಅಗತ್ಯವೇನೂ ಇಲ್ಲ. ಹೆಂಡತಿಯನ್ನು ಅಂಕಿತದಲ್ಲಿಟ್ಟುಕೊಳ್ಳುವ ಉಪಾಯಗಳನ್ನು ನಾನು ನಿನ್ನ ಕಡೆಯಿಂದ ಕಲಿತುಕೊಂಡಂತಾಯಿತು! ಒಂದು ಚಾಬೂಕವು, ಸಿಟ್ಟಿನ ಹಾವಭಾವಗಳು, ಮತ್ತು ಒದರಾಡುವದು ಈ ಮೂರು ಸಾಧನಗಳಿದ್ದರೆ ಹೆಂಡತಿಯು ತಾನೇ ಮೆತ್ತಗಾಗುತ್ತಾಳೆ!! ಪ್ರತಾಪರಾವ, ನಾನು ಬಂದ ಉದ್ದೇಶವನ್ನು ನಿನಗೆ ಮೊದಲೇ ತಿಳಿಸಿದ್ದೇನೆ. ಇನ್ನುಮೇಲೆ ನಾನು ಹೋಗಿ ಆ ಸಕೇಶಿಯಾದ ಸರಸ್ವತಿಯನ್ನು ಪುನರ್ವಿವಾಹ ಮಾಡಿಕೊಳ್ಳುವೆನು. ಪ್ರಥಮ ವಿವಾಹದ ಹುಡಿಗೆಯು ಸಿಗದಿ

ದ್ದರೆ ಪುನರ್ವಿವಾಹವನ್ನಾದರೂ ಮಾಡಿಕೊಂಡರೆ ಏನು ದೋಷವು? ಬಿಸೀ ಅನ್ನವು ಸಿಗದಿದ್ದರೆ ತಂಗುಳ ಅನ್ನದ ಮೇಲಿಂದ ಏಕೆ ಹಸಿವೆಯನ್ನು ತೃಪ್ತ ಬಡಿಸಿಕೊಳ್ಳಬಾರದು? ಆ ಪ್ರಕರ್ಣವಾದರೂ ಸ್ವಲ್ಪ ಜಡವಿರುತ್ತದೆ. ಆದರೆ ನೀನು ಕೊಟ್ಟ ಗುರೂಪದೇಶದಿಂದ ಅವಳನ್ನು ನಮ್ರಮಾಡುವ ಧೈರ್ಯವು ಈಗ ನನಗೆ ಬಂದಿರುತ್ತದೆ! ಆದುದರಿಂದ ನನಗೆ ನಿನ್ನ ಆಶೀರ್ವಾದವನ್ನೂ ನಿನ್ನ ಯಶಸ್ವೀ ಚಾಬೂಕವನ್ನೂ ಕೊಡು.

**ಪ್ರತಾಪರಾವ**— ನಿನಗೆ ನನ್ನ ಪೂರ್ಣ ಆಶೀರ್ವಾದವುಂಟು. ಇದು ತಕ್ಕೋ ನನ್ನ ಚಾಬೂಕು. ಇದರ ಬಹಳ ಎಚ್ಚರಿಕೆಯಿಂದಿರು! ಇಲ್ಲದಿದ್ದರೆ ಅದು ನಿನ್ನ ಬೆನ್ನ ಮೇಲೇ ತಿರುಗಿ ಬಂದೀತು! ಒಂದೇ ಯುಕ್ತಿಯು ಎಲ್ಲರಿಗೆ ಸಾಧಿಸೀತೆಂದು ಹೇಳಲಾಗದು. ಆದರೂ ಅನುಭವ ತೆಗೆದುಕೋ. ಹೋಗಿ ಬಾ. (ಹೋಗುತ್ತಾರೆ.)

---

## ಪ್ರವೇಶ ೫ ನೇದ್ದು.

## ಲಕ್ಷ್ಮೀಪತಿರಾಯನ ಮನೆಯ ಮುಂದೆ.



(ವೆಂಕಣ್ಣನಾಯಕನೂ ನರಸಿಂಗರಾಯನ ವೇಷ ಧರಿಸಿದ ಮುದುಕನೂ ಬರುತ್ತಾರೆ.)

**ವೆಂಕಣ್ಣನಾಯಕ**— ತೀರ್ಥರೂಪರೇ, ಇದೇ ಲಕ್ಷ್ಮೀಪತಿರಾಯನ ಮನೆಯು. ಇನ್ನು ಒಳಗೆ ಹೋಗೋಣವೇ?

**ಮುದುಕ**— ಹೋಗಲೇಬೇಕು. ನಾನು ಆತನ ಮುಂದೆ "ನಾನು ನಿಮ್ಮನ್ನು ಈಗ ಸುಮಾರು ನಾಲ್ವತ್ತು ವರ್ಷಗಳ ಹಿಂದೆ ನರಗುಂದದ ಮುತ್ತಿಗೆಯ ಕಾಲಕ್ಕೆ ಕಂಡಿದ್ದೆನು. ನಾವಿಬ್ಬರೂ ಎರಡು ತಿಂಗಳುಗಳ ತನಕ ಒಂದೇ ಕಡೆಗೆ ಕೂಡಿ ಇದ್ದೆವು." ಎಂದು ಹೇಳುವೆನು.

**ವೆಂಕಣ್ಣನಾಯಕ**— ಇದು ಉತ್ತಮವೇ ಸರಿ. ನಾಲ್ವತ್ತು ವರ್ಷಗಳ ಮಾತು ಯಾರ ಲಕ್ಷ್ಯದಲ್ಲಿ ಉಳಿಯುತ್ತದೆ? ಇದಲ್ಲದೆ ಮುತ್ತಿಗೆಯ ಕಾಲಕ್ಕೆ ಕೋಟೆಯನ್ನು ಕಾಪಾಡುವ ಸಲುವಾಗಿ ಅಸಂಖ್ಯ ದಂಡು ಕೂಡುವದುಂಟು. ಅಂದಮೇಲೆ ಮೋರೆಯ ಗುರತು ಯಾರದು ಯಾರು ನೆನಪಿನಲ್ಲಿಡುತ್ತಾರೆ?

ಬೇಕಾದ್ದು ಹೇಳಿಬಿಡಿರಿ. ನಮ್ಮದೊಂದು ಕೆಲಸವು ಸಾಧಿಸಿದರೆ ತೀರಿತು. (**'ತಮ್ಮ'ನು ಬರುತ್ತಾನೆ.**) ಯಾಕೋ ತಮ್ಮಾ, ನಾನು ಹೇಳಿದ್ದೆಲ್ಲ ನಿನ್ನ ಲಕ್ಷ್ಯದಲ್ಲಿರುತ್ತದಷ್ಟೇ ?

**ತಮ್ಮಾ**—ನಾನೇನೂ ಮರೆಯುವ ಮಗನಲ್ಲ. (**ಮುದುಕನಿಗೆ**) ಅಜ್ಜಾ, ನೀನು ಬಂದದ್ದರಿಂದ ನೆಟ್ಟಗಾಯಿತು. ಇಲ್ಲದಿದ್ದರೆ ನಮ್ಮ ಧನಿಯು ಹೆಂಡತಿ ಹೆಂಡತಿಯೆಂದು ಬಾಯಿಬಿಡಲಿಕ್ಕೆ ಹತ್ತಿದ್ದನು. ಇವನಿಗೆ ಅವಳು ಏನು ಮರಳು ಮಾಡಿರುತ್ತಾಳೋ ತಿಳಿಯದು. ಆಕೆಯ ಸಲುವಾಗಿ ಇವನು ಹುಚ್ಚನಾಗಿ ಹೋಗಿರುತ್ತಾನೆ.

**ವೆಂಕಣ್ಣನಾಯಕ**—ತಮ್ಮಾ, ಬಾಯಿ ಮುಚ್ಚು. ನಾಲಿಗೆಯನ್ನು ಉದ್ದ ಮಾಡಬೇಡ. ನಾವು ಬರುತ್ತೇವೆಂದು ಲಕ್ಷ್ಮೀಪತಿರಾಯನಿಗೆ ತಿಳಿಸಿ ಬಂದೆಯಾ ?

**ತಮ್ಮಾ** ನಾನೇನು ಕಿವಿಯ ಕಡೆಗೆ ತುತ್ತು ಒಯ್ಯುತ್ತೇನೋ ? ನೀವು ಹೇಳಿದ ಗಳಿಗ್ಗೆ ನಾನು ಅವರಿಗೆ ಹೇಳಿ ಬಂದೆನು. ಇದು ನೋಡಿರಿ. ಅವರೇ ನಿಮ್ಮ ಎದುರಿಗೆ ಬರಲಿಕ್ಕೆ ಹತ್ತಿರುತ್ತಾರೆ.

(**ಲಕ್ಷ್ಮೀಪತಿರಾಯನೂ ಪುರಾಣಿಕನ ವೇಷ ಧರಿಸಿದ ರಂಗರಾಯನೂ ಬರುತ್ತಾರೆ.**)

**ಲಕ್ಷ್ಮೀಪತಿರಾವ**—ರಂಗರಾವ, ಇವರೇ ನಿಮ್ಮ ಹಿರಿಯರೆನ್ನುವಂತೆ ಕಾಣುತ್ತದೆ. ನಮಸ್ಕಾರ ಯಜಮಾನರೇ, ಒಳಗೆ ನಡೆಯಿರಿ. ನಿಮ್ಮ ಆಗಮನ ದಿಂದ ನನ್ನ ಮನೆಯು ಅಲಂಕೃತವಾಯಿತು.

**ಮುದುಕ**—ಒಳ್ಳೇದು. ಒಳಗೆ ಹೋಗೋಣ. (**ಎಲ್ಲರು ಒಳಗೆ ಹೋಗಿ ಕುಳಿತುಕೊಳ್ಳುತ್ತಾರೆ.**)

**ವೆಂಕಣ್ಣನಾಯಕ**—ತೀರ್ಥರೂಪರೇ, ಯಾರ ಪುತ್ರಿಯು ನನ್ನನ್ನು ತನ್ನ ಪ್ರೇಮಜಾಲದಲ್ಲಿ ಎಳೆದುಕೊಂಡಿರುವಳೋ ಅವರೇ ಈ ಗೃಹಸ್ಥರು. ನೀವು ನನ್ನನ್ನು ಸುಖಿಯಾಗುವಂತೆ ಮಾಡಿ ನನ್ನ ಮೇಲೆ ನಿಮ್ಮ ಮಮತೆಯನ್ನು ತೋರಿ ಸುವ ಯೋಗ್ಯ ಸಮಯವು ಇದೇ ಇರುತ್ತದೆ.

**ಮುದುಕ**—ತಮ್ಮಯ್ಯಾ, ಸ್ವಲ್ಪ ದಮ್ಮು ಹಿಡಿ. ಈ ಪ್ರಕಾರ ಅವಸರ ಮಾಡಬೇಡ. ನಾವು ಅನುಭವಿಕರಾದ ಮುದುಕರು ಹೇಳುವ ಮಾತನ್ನು ಸ್ವಲ್ಪ ಕೇಳು. ನಮಗೆ ಈ ಪ್ರಕಾರದ ಅವಸರವು ಎಷ್ಟುಮಾತ್ರಕ್ಕೂ ಸೇರುವದಿಲ್ಲ.

(ಲಕ್ಷ್ಮೀಪತಿರಾಯನ ಕಡೆಗೆ ನೋಡಿ) ನಿಮ್ಮ ಹೆಸರು ಲಕ್ಷ್ಮೀಪತಿರಾವ ಅಲ್ಲೇ ? ನರಗುಂದದ ಮುತ್ತಿಗೆಯ ಕಾಲಕ್ಕೆ ನಾವೂ ನೀವೂ ಕೂಡಿ ಒಂದೇ ಛಾವಣಿಯಲ್ಲಿದ್ದೆವು. ಇದರ ನೆನಪು ನಿಮಗೆ ಬರುತ್ತದೋ ? ಬಹಳ ಮಾಡಿ ಬರಲಿಕ್ಕಿಲ್ಲ. ಆ ಮಾತಿಗೆ ಇಂದಿಗೆ ನಾಲ್ವತ್ತು ವರ್ಷಗಳಾಗಿ ಹೋದವು. ಆಗಿನಿಂದ ನಿಮ್ಮನ್ನು ನಾನು ನನ್ನ ಜೀವದ ಸ್ನೇಹಿತರೆಂತಲೇ ತಿಳಿದಿರುತ್ತೇನೆ. ಆದುದರಿಂದ ನಿಮ್ಮ ಸಂಗಡ ನನಗೆ ಮನಸ್ಸು ಬಿಚ್ಚಿ ಮಾತಾಡಲಿಕ್ಕೆ ಅಡ್ಡಿಯಿಲ್ಲ. ನಮ್ಮ ಚಿರಂಜೀವನ ಕಡೆಯಿಂದ ನನಗೆ ಯಾವತ್ತು ಸಂಗತಿಯು ತಿಳಿದಿರುತ್ತದೆ. ಯಾವ ಮಾತನ್ನೂ ಬಹಳ ಅರಿದಾಡುವದು ನನಗೆ ಸೇರುವದಿಲ್ಲ. ನನ್ನ ಚಿರಂಜೀವನು ನಿಮ್ಮ ಚಿರಂಜೀವಿಯನ್ನು ಲಗ್ನ ಮಾಡಿಕೊಳ್ಳುತ್ತೇನೆಂಬ ತನ್ನ ಅಪೇಕ್ಷೆಯನ್ನು ನಿಮ್ಮ ಮುಂದೆ ತಿಳಿಸಿರುತ್ತಾನಂತೆ. ನಿಜವಾಗಿ ವಿಚಾರಮಾಡಿದರೆ ಅವನು ಈ ಲಗ್ನದ ವಿಷಯವನ್ನು ನನ್ನ ಮುಂದೆ ತಿಳಿಸದೆ ನಿಮ್ಮ ಮುಂದೆ ಮಾತಾಡಿದ್ದು ತಪ್ಪು ಇರುತ್ತದೆ. ನಮ್ಮಷ್ಟು ತಿಳುವಳಿಕೆಯು ಈ ತರುಣರಲ್ಲಿ ಹೇಗೆ ಬಂದೀತು ? ಅವರು ಹೇಳಿಕೇಳಿ ಅವಿಚಾರಿಗಳು ಮತ್ತು ಅನುಭವಶೂನ್ಯರು. ಆದರೆ ಈ ಪ್ರಸಂಗದಲ್ಲಿ ಮಾತ್ರ ನಮ್ಮ ಹುಡುಗನಿಗೆ ಬಹಳ ದೋಷವನ್ನು ಕೊಡಲಿಕ್ಕೆ ಬರುವಂತೆ ಇಲ್ಲ. ನಿಮ್ಮ ಹೆಸರು ಮತ್ತು ಮನೆತನವು ಎಲ್ಲ ಕಡೆಗೆ ಪ್ರಸಿದ್ಧವೇ ಇರುವವು. ಹಾಗೂ ನಿಮ್ಮ ಪುತ್ರಿಯಾದರೂ ಸುಂದರಳೂ, ಸದ್ಗುಣಿಯೂ ಇರುತ್ತಾಳೆಂದು ಕೇಳಿರುತ್ತೇನೆ. ಅಂದಮೇಲೆ ಮುಂದಿನ ವಿಚಾರವನ್ನು ಏನು ಮಾಡತಕ್ಕದ್ದದೆ ?

**ವೆಂಕಣ್ಣನಾಯಕ**— (ತನ್ನಷ್ಟಕ್ಕೆ) ಈ ಮುದುಕನು ನನಗೆ ಸಹಜವಾಗಿ ಬೈಕೊಂಡು ಬಿಟ್ಟನು !

**ಲಕ್ಷ್ಮೀಪತಿರಾವ**— ನನಗೂ ಮಾತು ಬೆಳೆಸುವದು ಬೇಡ. ನಿಮ್ಮ ಚಿರಂಜೀವ ರಂಗರಾಯನು ನನ್ನ ಹುಡಿಗಿಯ ಮನಸ್ಸಿಗೂ ಬಂದಿರುತ್ತಾನೆ. ಅವನ ಮನಸ್ಸಿಗೂ ಆಕೆಯು ಬಂದಿರುತ್ತಾಳೆ. ಇಬ್ಬರದೂ ಮನಸ್ಸು ಕೂಡಿದ ಬಳಿಕ ನಾವು ಮುದುಕರು ಅವರಿಗೆ ಅಡ್ಡ ಬರುವದು ಸರಿಯಾದ್ದಲ್ಲ. ವರದಕ್ಷಿಣ ವರೋಪಚಾರ ಮತ್ತು ಹುಡಿಗೆಯ ಮೈಮೇಲೆ ದಾಗೀನೆ ಇಡಿಸುವದು ಇವೆರಡೇ ವಿಷಯಗಳು ಮಾತ್ರ ಉಳಿದಂತಾದವು. ಅವುಗಳನ್ನು ಒಮ್ಮೆ ಮಾತಾಡಿಬಿಡಿರಿ, ಅಂದರೆ ತೀರಿತು.

**ಮುದುಕ**—ಒಳ್ಳೇದು. ನನಗಾದರೂ ನಾಲ್ಕೆಂಟು ಮಂದಿ ಮಕ್ಕಳಿಲ್ಲ. ಏಕಪುತ್ರ ವಿಷಯು. ಅಂದಬಳಿಕ ಇವನೇ ನನ್ನ ಎಲ್ಲ ಆಸ್ತಿಗೆ ಬಾಧ್ಯಸ್ಥನು. ಇವನ ಲಗ್ನ ಸಮಾರಂಭವು ನನ್ನ ಕಂಣಮುಂದೆ ನಾಲ್ಕು ಮಂದಿ ಹೌದು ಹೌದೆನ್ನು ವಂತೆ ಆಗಿ ಹೋದರೆ ನನ್ನ ಅಪೇಕ್ಷೆಯು ತೃಪ್ತವಾಗುವದು. **ಶುಭಸ್ಯ ಶೀಘ್ರಂ.** ನಡೆಯಿರಿ; ನಾಲ್ಕುಮಂದಿ ದೈವದವರನ್ನು ಕರೆದು ಸಕ್ಕರಿ ವೀಳ್ಯೆ ಹಂಚೋಣ.

**ಲಕ್ಷ್ಮೀಪತಿರಾವ**—ನನ್ನ ಮನೆಯಲ್ಲಿಯೇ ಈ ವೀಳ್ಯೆಯ ಸಮಾರಂಭವು ಆಗುವದು ಉತ್ತಮವು. ಆದರೆ ನನ್ನ ಹಿಂದೆ ಬಾಪೂರಾಯನ ಶುಕ್ಲಕಾಷ್ಠವು ಹತ್ತಿರುತ್ತದೆ. ಅವನದೂ ನನ್ನದೂ ಬಹಳ ಸ್ನೇಹವಿರುವದರಿಂದ ಅವನಿಗೆ ನಿಷ್ಠುರ ಉತ್ತರ ಕೊಡುವದು ನನ್ನಿಂದ ಆಗದು. ನಾವೂ ನೀವೂ ಇಲ್ಲಿ ಲಗ್ನದ ಮಾತು ಆಡುತ್ತ ಕುಳಿತರೆ ಅವನು ಈಗ ನಡುವೆ ಬಂದು ಅದಕ್ಕೆ ನೀರು ಹಾಕದೆ ಬಿಡುವದಿಲ್ಲ. ಆದುದರಿಂದ ಅವನನ್ನು ತಪ್ಪಿಸಿ ಹೇಗೆ ಲಗ್ನ ಮಾಡಬೇಕೆಂಬುದು ನನಗೊಂದು ದೊಡ್ಡ ಚಿಂತೆಯಾಗಿ ಕುಳಿತಿರುತ್ತದೆ.

**ಮುದುಕ**—ಹಾಗಾದರೆ ನೀವು ನಮ್ಮ ಬಿಡಾರಕ್ಕೆ ನಡೆಯಿರಿ. ಅಲ್ಲಿಯೇ ನಾಲ್ಕುಮಂದಿ ದೈವದವರನ್ನು ಕರೆಸೋಣ. ಹೇಗಾದರೂ ನಮ್ಮ ಬಿಡಾರದ ಹತ್ತರ ಲಕ್ಷ್ಮೀನಾರಾಯಣನ ಗುಡಿಯು ಇರುತ್ತದೆ. ಅಲ್ಲಿಯೇ ದೈವದವರನ್ನೂ ಉಪಾಧ್ಯಯನನ್ನೂ ಕೂಡಿಸಿ ಸಕ್ಕರಿ ವೀಳ್ಯೆ ಹಂಚೋಣ. ಹಾಗೂ ಈ ಹೊತ್ತು ನಿಮ್ಮ ಭೋಜನವು ಸಹ ನಮ್ಮಲ್ಲಿಯೇ ಆಗಲಿ.

**ಲಕ್ಷ್ಮೀಪತಿರಾವ**—ಆಗಲಿ, ನಿಮ್ಮ ಮನಸ್ಸಿಗೇ ಬಂದಂತೇ ಆಗಲಿ. ಪುರಾಣಿಕಾ, ಅಬಚಿಯ ಹತ್ತರ ಹೋಗಿ ಕಮಲೆಯನ್ನು ರಂಗರಾಯ ನಿಗೆ ಲಗ್ನ ಮಾಡಿಕೊಡುವದು ನಿಶ್ಚಯವಾಯಿತೆಂದು ಆಕೆಗೆ ತಿಳಿಸು. ಹಾಗೂ ನಾನು ಈಹೊತ್ತು ಊಟಕ್ಕೆ ರಂಗರಾಯನ ಬಿಡಾರಕ್ಕೆ ಹೋಗುತ್ತೇನೆಂದು ಹೇಳು.

**ರಂಗರಾವ**—ವ್ಹಾಃ ನಾನು ಈ ಸಂಗತಿಯನ್ನು ಅವರಿಗೆ ಬಹಳೇ ಆನಂದದಿಂದ ತಿಳಿಸುವೆನು. ಕಮಲಾಬಾಯಿಯ ಲಗ್ನವು ರಂಗರಾಯನಕೂಡ ಆಗುವದೆಂಬ ಸುದ್ದಿಯಕಿಂತಲು ಹೆಚ್ಚಿನ ಆನಂದದ ಸುದ್ದಿಯು ಇನ್ನಾವದು?

**ವೆಂಕಣ್ಣನಾಯಕ**—ಹಾಗಾದರೆ ನಮ್ಮ ಮನೆಗೆ ಹೋಗೋಣಲ್ಲವೇ?

**( ಲಕ್ಷ್ಮೀಪತಿರಾಯನೂ ಮುದುಕನೂ ಮುಂದೆ ಹೋಗಲಿಕ್ಕೆ ಹತ್ತುತ್ತಾರೆ. ) ( ರಂಗರಾಯನಿಗೆ )**

ರಾಯರೇ, ನನ್ನ ಕೆಲಸವು ತೀರಿತು. ಚೀಟಿಯನ್ನು ನಿಮ್ಮ ಕೈಯಲ್ಲಿಯೇ ತಂದು ಕೊಟ್ಟಿರುತ್ತೇನೆ. ಹಿರಿಯರ ಸಮ್ಮತಿಯನ್ನಾದರೂ ನಿಮ್ಮ ಸಮಕ್ಷಮವೇ ಕೊಡಿಸಿರುತ್ತೇನೆ. ಇನ್ನು ಕಮಲಾಬಾಯಿಯು ಕೂಡ ರಂಗರಾಯನ ಲಗ್ನವಾಗುವದೆಂಬ ಮಾತಿಗೆ ಅಡ್ಡಿ ಏನುಂಟು? ಇನ್ನು ವೇಳೆಯನ್ನು ಕಳೆಯಬೇಡಿರಿ. ಇಂಥ ವೇಳೆಯು ನಿಮಗೆ ಪುನಃ ಎಂದೂ ಸಿಗಲಿಕ್ಕಿಲ್ಲ. ನಿಮಗೆ 'ತಮ್ಮ'ನು ಹೇಳುವ ಪ್ರಕಾರ ಯಾವತ್ತೂ ಮಾಡಿರಿ. ( **ಹೋಗುತ್ತಾನೆ.** )

**ರಂಗರಾವ**—ಎಲೈ ಮನಸ್ಸೇ! ಈ ಸಮಯದಲ್ಲಿ ಸ್ವಲ್ಪ ಧೈರ್ಯ ಹಿಡಿ. ಇಷ್ಟು ದಿವಸ ನೀನು ಮಾಡಿದ ತಪಶ್ಚರ್ಯದ ಫಲವು ಸಿಗುವ ಪುಣ್ಯಕಾಲವು ಸಮೀಪಿಸಿರುತ್ತದೆ. ಇನ್ನು ಮೇಲೆ ಹೆದರ ಬೇಡ.

**ತಮ್ಮಾ**—ಏ ಪುರಾಣಿಕಪ್ಪನವರೇ, ಒಂದು ತುಸು ಇತ್ತ ಕಡೆಗೆ ಬನ್ನಿರಿ.

**ರಂಗರಾವ**—ಇವನು ಎಷ್ಟು ಉದ್ಧಟನಿರುತ್ತಾನೆ! ಎಲೇ, ಕತ್ತೇ, ನೀನೇ ಇತ್ತಕಡೆಗೆ ಬರುವದು ಬಿಟ್ಟು, ನನ್ನನ್ನು ಅತ್ತಕಡೆಗೆ ಏಕೆ ಕರೆಯುತ್ತೀ?

**ತಮ್ಮಾ**—ಹಾ ಹಾ ಧನಿಯರೇ? ಎಚ್ಚರಿಕೆಯಿಂದಿರ್ರಿ. ನನಗೆ ಈಗ ನಿಮ್ಮ ಗುರತು ಹತ್ತಿತು! ಆ ಠಕ್ಕ ವೆಂಕಪ್ಪನ ಸೋಗು ಹಾಕಿರುವ ನನ್ನ ಧನಿ ರಂಗರಾಯರು ನೀವೇ ಅಲ್ಲೇನು?

**ರಂಗರಾವ**—ಎಲೋ ಸುಮ್ಮನಿರು, ಬಾಯಿ ಮುಚ್ಚು. ಈ ಪ್ರಕಾರ ಗಟ್ಟಿಸಿ ಮಾತಾಡಬೇಡ. ವೆಂಕಣ್ಣನಾಯಕನು ನಿನ್ನ ಮುಂದೆ ಹೇಳಿರುವದನ್ನೆಲ್ಲ ನನ್ನ ಮುಂದೆ ಬೇಗನೆ ಹೇಳು.

**ತಮ್ಮಾ**—ಧನಿಯರೇ! ಆ ಮುದುಕನು ಮತ್ತು ವೆಂಕಪ್ಪನು ಏಕೆ ಅತ್ತ ಕಡೆಗೆ ಲಕ್ಷ್ಮಪ್ಪನನ್ನು ಕರೆದುಕೊಂಡು ಹೋದರೆಂಬುದು ನಿಮಗೇನಾದರೂ ತಿಳಿಯಿತೇನು? ಅವರ ಒಳಸಂಚು ಏನಿರುವದು ನಿಮಗೆ ತಿಳದಿದ್ದರೆ ಹೇಳಿರಿ. ಇಲ್ಲದಿದ್ದರೆ ಸೋತಿರೆಂದು ಅನ್ನರಿ. ನಾನು ಬಾಹದ್ದೂರನು ಅದನ್ನೆಲ್ಲ ನಿಮಗೆ ಈಗ ಹೇಳಿ ಬಿಡುತ್ತೇನೆ.

**ರಂಗರಾವ**— ನನಗಂತೂ ಅವರ ಇಂಗಿತವು ತಿಳಿಯಲೊಲ್ಲದು. ನಿನಗೆ ತಿಳಿದಿದ್ದರೆ ಹೇಳು ಕೇಳೋಣ.

**ತಮ್ಮಾ**—ಇಷ್ಟು ಸಣ್ಣ ಮಾತು ಸಹ ನಿಮಗೆ ತಿಳಿಯಲೊಲ್ಲದೇನು? ಅಂದ ಬಳಿಕ ಆ ಹುಡುಗಿಯು ನಿಮಗೆ ಹೇಗೆ ವಶಳಾದಾಳು?

**ರಂಗರಾವ**—ಬಿಡು. ಬಿಡು. ಈ ಅಧಿಕಪ್ರಸಂಗಿತನ ಸಾಕು. ಏನದು ಮುಂಚೆ ಬೊಗಳು.

**ತಮ್ಮಾ**—ಧನಿಯರೇ! ಸಿಟ್ಟಿಗೆದ್ದಿರೇನು? ಹಾಗಾದರೆ ನಾನು ಅಂದದ್ದಕ್ಕೆ ಕ್ಷಮೆ ಮಾಡಿರಿ. ಇನ್ನು ಮೇಲೆ ನಿಮ್ಮ ಕೂಡ ಒಂದು ಶಬ್ದ ಸಹ ಮಾತಾಡುವದಿಲ್ಲ. ನನ್ನ ಬಾಯಿಗೆ ಬೀಗ ಹಾಕುತ್ತೇನೆ ನೋಡಿರಿ. ( **ಬಾಯಿ ಒತ್ತಿ ಹಿಡಿದುಕೊಳ್ಳುತ್ತಾನೆ.** )

**ರಂಗರಾವ**—( **ಅವನ ಬಾಯಮೇಲಿಂದ ಕೈ ತೆಗೆದು** ) ವೆಂಕಪ್ಪನು ಹೇಳಿದ ನಿರೂಪವನ್ನು ನನಗೆ ಸುಮ್ಮನೆ ತಿಳಿಸುವಿಯೋ ಇಲ್ಲೋ? ಇಲ್ಲದಿದ್ದರೆ ನಿನ್ನ ಅವಸ್ಥೆಯು ಏನಾದೀತು ನೋಡಿಕೋ!

**ತಮ್ಮಾ**—ಹೇಳುತ್ತೇನರೆಪ್ಪಾ! ಏಕೆ ಅವಸರ ಮಾಡುತ್ತೀರಿ? ಕೇಳಿರಿ, ಆ ಲಕ್ಷ್ಮಪ್ಪನು ಇಬ್ಬರು ಮೋಸಗಾರರ ಕೈಯಲ್ಲಿ ಸಿಕ್ಕಿರುತ್ತಾನೆ, ತಿಳಿಯಿತೇ?

**ರಂಗರಾವ**—ಅಂಬರೇನು?

**ತಮ್ಮಾ**—ಇಷ್ಟು ನಿಮಗೆ ಹೇಗೆ ತಿಳಿಯಲಿಲ್ಲ? ಅವರಿಬ್ಬರೂ ಸುಳ್ಳ ಸುಳ್ಳೇ ತಂದೆಮಕ್ಕಳ ಸೋಗು ಹಾಕಿಕೊಂಡು ಆ ಲಕ್ಷ್ಮಪ್ಪನನ್ನು ಅತ್ತ ಕಡೆಗೆ ಕರಕೊಂಡು ಹೋದರು. ನೀವು ಇನ್ನುಮೇಲೆ ಆ ಹುಡುಗಿಯನ್ನು ಎತ್ತ ಕಡೆಗಾದರೂ ತಕ್ಕೊಂಡು ಓಡಿಹೋಗಿರಿ. ಆ ಬುಧವಾರಪೇಟೆಯಲ್ಲಿ ಅಣ್ಣಾಭಟ್ಟನ ಮನೆಯೊಳಗೆ ಮದುವೆಯ ಸಿದ್ಧತೆಯನ್ನು ಮಾಡಿರುತ್ತದೆ. ಅಲ್ಲಿ ಹೋಗಿ ಅಕ್ಷತಿಕಾಳು ಒಕ್ಕೊಂಡು ಬಿಡಿರಿ. ಮತ್ತಿನ್ನೇನು ಹೇಳುವದದೆ! ನಿಮ್ಮದೇ ರಾಜ್ಯ.

**ರಂಗರಾವ**—ಎಲೋ ಅದು ಆಗುವ ಸಂಭವ ಹೇಗೆ?

**ತಮ್ಮಾ**—ನಿಮ್ಮ ಸಂಗಡ ಮಾತಾಡುತ್ತ ನಿಲ್ಲಲಿಕ್ಕೆ ನನಗೆ ವೇಳೆಯಿಲ್ಲ. ನಾನು ಇನ್ನೊಂದು ತಾಸಿಗೆ ಮನೆಯ ಹಿತ್ತಲದ ಹಿಂದೆ ತೋಟದೊಳಗೆ ಬಂದು ನಿಲ್ಲುತ್ತೇನೆ. ನೀವು ಕಮಲವ್ವನನ್ನು ಕರೆದುಕೊಂಡು ಅಲ್ಲಿ ಹೊರಟು ಬನ್ನಿರಿ. ನಾನು ನಿಮ್ಮಿಬ್ಬರನ್ನೂ ಕರಕೊಂಡು ಹೋಗುತ್ತೇನೆ. ನಿಮ್ಮ ಕೈಯಿಂದ ಆಗದ ಮಾತೆಲ್ಲ ನೋಡಿಕೊಳ್ಳಲಿಕ್ಕೆ ವೆಂಕಪ್ಪನು ಗಟ್ಟಿ ಇರುತ್ತಾನೆ. ನೀವು ಎಷ್ಟೆಷ್ಟೂ ಚಿಂತೆ ಮಾಡಬೇಡರಿ. ( **ಹೋಗುತ್ತಾನೆ.** )

**ರಂಗರಾವ**—ಎಲಾ, ಇವನು ಹೋಗೇ ಬಿಟ್ಟನು! ಹೆಚ್ಚು ಸಂಗತಿಗಳನ್ನು ಇವನ ಬಾಯಿಂದ ಕೇಳಿಕೊಳ್ಳಬೇಕೆನ್ನುವಷ್ಟರಲ್ಲಿ ಇವನು ಅವಸರ

ದಿಂದಲೇ ಹೊರಟು ಹೋದೆನು. ಇಂಥ ಕೆಲಸಗಳನ್ನೆಲ್ಲ "**ಶುಭಸ್ಯ ಶೀಘ್ರಂ**" ಎಂಬಂತೆ ಅವಸರದಿಂದ ಮಾಡುವದು ಯೋಗ್ಯವು. ಬಹಳಮಾಡಿ ಈ ಮಾತಿಗೆ ಕಮಲೆಯು ಒಡಂಬಡದೆ ಇರಲಿಕ್ಕಿಲ್ಲ. ಮುಂದೇನು! ಕೋಟೆಯನ್ನು ಮುತ್ತಿಗೆ ಹಾಕುವದೇ ಸರಿ. ಕೋಟೆಯನ್ನು ಹಸ್ತಗತ ಮಾಡಿಕೊಳ್ಳದೆ ನಾನು ಜನರಿಗೆ ಮೋರೆಯನ್ನು ತೋರಿಸಲಿಕ್ಕಿಲ್ಲ.

## ಪ್ರವೇಶ ೬ನೇದ್ದು.

### ವಿಜಯಪುರದ ಹೊರಗಿನ ಒಂದು ಮಾರ್ಗ.

( ಪ್ರತಾಪರಾಯನೂ ತ್ರಾಟಿಕೆಯೂ ಬರುತ್ತಾರೆ. )

**ಪ್ರತಾಪರಾವ**—ಪ್ರಿಯೇ, ನೀನು ಎಷ್ಟು ನಿರ್ದಯಳಿರುತ್ತೀ! ನಿನ್ನನ್ನು ತವರುಮನೆಗೆ ಕರೆದುಕೊಂಡು ಹೋಗಲಿಕ್ಕೆ ನಾನು ಹೊರಟರೂ ನಿನ್ನ ಕಾಲು ಹಿಂದಕ್ಕೇ ಜಗ್ಗುತ್ತವೆ! ಕಾಲು ಬೇಗನೇ ಬಿಡು. ಲಗ್ನವಾದ ದಿವಸವೇ ನಿನ್ನನ್ನು ತವರುಮನೆಯಿಂದ ಬಿಡಿಸಿ ತಂದದ್ದಕ್ಕಾಗಿ ನನ್ನ ಮನಸ್ಸಿಗೆ ಬಹಳ ಖೇದವಾಗಿರುತ್ತದೆ. ನಿಮ್ಮ ತಂದೆಯನ್ನು ನೀನು ಕಂಡನಂತರ ನೀವಿಬ್ಬರೂ ಯಾವಾಗ್ಗೆ ಪ್ರೇಮಾಲಿಂಗನ ಕೊಡುವದನ್ನು ನಾನು ನೋಡೇನೆಂದು ನನ್ನ ಜೀವವು ಹಾತೊರೆಯುತ್ತದೆ. ನಾನು ನಿನಗೆ ಬೇಗನೇ ಕಾಲು ಬಿಡೆಂದು ಹೇಳುವದಾದರೂ ಹುಚ್ಚುತನವೇ ಸರಿ. ಯಾಕಂದರೆ ನಿನ್ನಿಂದ ನಡೆಯುವದು ಆಗುತ್ತಿರಲಿಕ್ಕಿಲ್ಲ. ಈ ತಣ್ಣಗಿನ ಉಸುಕಿನಲ್ಲಿ ಇಂಥ ಚಳಿಯೊಳಗೆ ಕಾಲಿಡುವದರಿಂದ ನಿನ್ನ ಮೃದುವಾದ ಮತ್ತು ಕೋಮಲವಾದ ಕಾಲುಗಳಿಗೆ ಉಸುಕು ಚುಚ್ಚಿ ಕಷ್ಟವಾಗುತ್ತಿರಬಹುದು. ಛೀ! ನಾನೇ ನಿರ್ದಯನು. ಪ್ರಿಯೇ, ಕ್ಷಮೆ ಮಾಡು. ನನ್ನ ಅಂತಃಕರುಣದಲ್ಲಿ ನಿನ್ನ ಬಗ್ಗೆ ಪ್ರೀತಿಯು ಪ್ರಬಲವಾಗಿರುವ ಕಾರಣ ನನ್ನ ಮತಿಯು ಮೂಢವಾಗಿರುತ್ತದೆ. ಸ್ವಚ್ಛವಾದ ಸ್ಫಟಿಕದೋಪಾದಿ ಶುಭ್ರವಾಗಿರುವ ಈ ಚಂದ್ರೋದಯದಲ್ಲಿ ತನ್ನ ಶೀತಲವಾದ ಸ್ಪರ್ಶದಿಂದ ಸೌಖ್ಯವನ್ನುಂಟುಮಾಡುವ ಮಂದಮಾರುತನ ಕೂಡ ಆನಂದದಿಂದ ವಿಹರಿಸುತ್ತಲೂ, ಪರಸ್ಪರರೊಳಗೆ ಸುಖಕರವಾದ ಗುಜಗೋಷ್ಠಿಗಳನ್ನಾಡುತ್ತಲೂ ನಾವು ಒಂದು ಗಳಿಗೆಯ ವರೆಗೆ ಮಾರ್ಗಕ್ರಮಣವನ್ನು ಮಾಡಿದರೆ ನಮಗೆ ಈ ದುಃಖಮಯವಾದ ಜಗತ್ತು ಮರೆತು ಹೋಗುವ

ದೆಂದು ನನ್ನ ಮೂಢಭಾವದಿಂದ ನೆನೆಸಿ ಆ ನಮ್ಮ ಅಶ್ವವನ್ನು ದೂರ ಒಯ್ದು ನಿಲ್ಲಿಸಲಿಕ್ಕೆ ನಾನು ನೀಲ್ಯಾನಿಗೆ ಹೇಳಿದೆನು. ನಿನ್ನ ಸೂಕ್ಷ್ಮವಾದ ಪ್ರಕೃತಿಯ ಕಡೆಗೆ ನಾನು ಏನೂ ಲಕ್ಷ್ಯಕೊಡಲಿಲ್ಲ. ನನ್ನಿಂದ ಬಹಳ ತಪ್ಪಾಯಿತು. ಆದು ದರಿಂದ ನಾನು ತಿರುಗಿ ನಿನ್ನ ಕ್ಷಮೆಯನ್ನು ಬೇಡಿಕೊಳ್ಳುತ್ತೇನೆ.

**ತ್ರಾಟಿಕಾ**—(ತನ್ನಷ್ಟಕ್ಕೆ) ಪುನಃ ಆರಂಭವಾಯಿತು. ಇವರ ಮನಸ್ಸಿನಲ್ಲಿ ಏನಿರುತ್ತದೆಂಬುವದು ಯಾರಿಗೆ ಗೊತ್ತು ? ತಿರುಗಿ ನನ್ನ ತೀರ್ಥರೂಪರ ಮೋರೆ ಯನ್ನು ನಾನು ಕಾಣಬಾರದೆಂದು ಇವರ ಮನಸ್ಸಿನಲ್ಲಿ ಇರಲಿಕ್ಕಿಲ್ಲವಷ್ಟೇ ? ನಾನು ತೀರ್ಥರೂಪರ ಮನೆಯಲ್ಲಿದ್ದಾಗ್ಗೆ ಇವಂಗೆ ಕಷ್ಟ ಕೊಟ್ಟಿದ್ದರ ಸೇಡನ್ನು ಇವರು ಈಗ ಚೆನ್ನಾಗಿ ತೀರಿಸಿಕೊಳ್ಳಹತ್ತಿದ್ದಾರೆ. ಇನ್ನೂ ನನ್ನ ಗತಿಯು ಏನಾಗ ತಕ್ಕದ್ದದೆಯೋ ತಿಳಿಯದು. ನನ್ನಿಂದಂತೂ ಈ ಕಷ್ಟವನ್ನು ಸಹಿಸುವದು ಅಸಾ ಧ್ಯವಾಗಿರುತ್ತದೆ. ( ಬಹಿರಂಗವಾಗಿ ) ಇನ್ನಾದರೂ ಈ ಸುಳ್ಳು ನಟನೆಯನ್ನು ಬಿಡಬೇಕು. ಪ್ರತ್ಯಕ್ಷ ಕಂಡೂ ಕಂಡೂ ಸುಳ್ಳು ಮಾತಾಡಲಿಕ್ಕೆ ಬಾಯಿಯಾ ದರೂ ಹೇಗೆ ಮೇಲಕ್ಕೆ ಏಳುತ್ತದೆ ? ಪ್ರೀತಿಯ ಮೂಲಕ ಮೂಢತನವು ಆಗಿ ರುತ್ತದಂತೆ. ಅಹಹ ! ಅರಿಯದವರು ನಿಜವೇ ಎಂದು ತಿಳಿದಾರು. ಈ ಪ್ರೀತಿಯ ಸೌಭಾಗ್ಯವನ್ನು ಎಷ್ಟೆಂತ ವರ್ಣಿಸಲಿ ? ಲಗ್ನವಾದ ನಂತರ ಸೌಖ್ಯದಿಂದ ಒಂದು ತುತ್ತಾದರೂ ಉಂಡಿಲ್ಲ. ಒಂದು ಗಳಿಗಿಯಾದರೂ ಕಣ್ಣಿಗೆ ಕಣ್ಣು ಹಚ್ಚಿಲ್ಲ. ಹೀಗಿದ್ದಾಗ್ಯೂ ಪ್ರೀತಿಯ ಬಡಾಯಿಯನ್ನು ಹೇಳಿಕೊಳ್ಳುವದು ಇನ್ನೂ ನಡೆದಿರುತ್ತದೆ ! ಅಹಹಾ ! ಎಂಥ ಶೀತಲವಾದ ಗಾಳಿಯು ಬೀಸುತ್ತದೆ ! ಹಾಗೂ ಎಷ್ಟು ಸ್ವಚ್ಛವಾದ ಬೆಳದಿಂಗಳು ಬಿದ್ದಿರುತ್ತದೆ ! ಕಣ್ಣತುಂಬ ನೋಡಿ ದಿರಾ ? ಅವ್ವಯ್ಯಾ ! ಈ ಪ್ರಖರವಾದ ಬಿಸಿಲಿನಲ್ಲಿ ನಡೆದು ನಡೆದು ನನ್ನ ಅಂಗಾ ಲಲ್ಲಿ ಗುಳ್ಳಿಗಳು ಸಹ ಎದ್ದವು. ಇನ್ನು ನನ್ನಿಂದ ಒಂದು ಹೆಜ್ಜೆ ಸಹ ಮುಂದಕ್ಕೆ ಇಡೋಣಾಗದು.

**ಪ್ರತಾಪರಾವ**—ಏನು, ನಿನ್ನಿಂದ ಇನ್ನು ನಡೆಯುವದು ಆಗುವದಿಲ್ಲವೇ? ಈ ಪ್ರಕಾರ ಮೊದಲೇ ಏಕೆ ಹೇಳಲಿಲ್ಲ? ನಾನು ಮೊದಲೇ ನಿನ್ನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಬರುತ್ತಿದ್ದೆನು. ಈ ಚಳಿಯ ಕಾಲಕ್ಕೆ ನನಗೆ ಹೆಚ್ಚಿನದೇನು ಬೇಕಾಗಿರುತ್ತದೆ ?

**ತ್ರ್ರಾಟಿಕಾ**—ಅಹಹ ? ಏನು ಚಳಿಯಿದು ? ಬರುವಾಗ್ಗೆ ಹೊತ್ತುಕೊಳ್ಳ ಲಿಕ್ಕೆ ಶಾಲನ್ನಾದರೂ ಏಕೆ ತರಲಿಲ್ಲ ? ಮೈಯ್ಯೊಳಗೆ ಈ ಬೆವರು ಹನಿಗಳು ಚಳಿ ಯಿಂದಲೇ ಹೊರಡುತ್ತವಲ್ಲವೇ ?

**ಪ್ರತಾಪರಾವ**—ಪ್ರಿಯೇ ! ನಿನ್ನ ಶರೀರವು ಬಹಳ ಕೋಮಲವಾದದ್ದು. ಅದಕ್ಕಂತೇ ನಾನು ನಿನಗೆ ನನ್ನ ಹೆಗಲಮೇಲೆ ಕುಳಿತುಕೋ ಎಂದು ಹೇಳಿದೆನು.

**ತ್ರ್ರಾಟಿಕಾ**—ಈ ಅಚ್ಛೆಯನ್ನು ಸಾಕು ಮಾಡಿರಿ. ಸುಳ್ಳು ಮಾತಾಡುವ ದಾದರೂ ಎಷ್ಟು ?

**ಪ್ರತಾಪರಾವ**—ನನಗೆ ಸುಳ್ಳುಗಾರನೆಂದು ಅಪವಾದ ಹೊರಿಸುತ್ತಿಯಾ? ನನಗೆ ಈ ಅಪಮಾನವನ್ನು ತಡೆಯೋಣಾಗದು. ಇವನು ಸೂರ್ಯನಲ್ಲ, ಚಂದ್ರನೇ ಇರುತ್ತಾನೆಂದು ನಾನು ಪುನಃ ಹೇಳುತ್ತೇನೆ.

**ತ್ರ್ರಾಟಿಕಾ**—ನಾನು ಪುನಃ ಹೇಳುವದೇನಂದರೆ—ಇವನು ಚಂದ್ರನಲ್ಲ, ಸೂರ್ಯನು. ಇದನ್ನು ತಿಳಿಯುದಷ್ಟು ನನಗೇನೂ ಹುಚ್ಚು ಹಿಡಿದಿಲ್ಲ !

**ಪ್ರತಾಪರಾವ**—ಈ ಪ್ರಕಾರದ ಕೊಳಕು ಮಾತು ನನಗೆ ತಡೆಯುವ ದಿಲ್ಲ. ಮಾತಾಡತಕ್ಕದ್ದಿದ್ದರೆ ಸರಳ ಮಾತು—ಸವಿಮಾತು—ಆಡಬೇಕು. ಇಲ್ಲದಿ ದ್ದರೆ ಮಾತಾಡುವದನ್ನೇ ಬಿಡುವದು ಒಳ್ಳೇದು.

**ತ್ರ್ರಾಟಿಕಾ**—ಸರಳ ಮಾತು—ಸವಿಮಾತು—ಆಡಬೇಕು. ಆದರೆ ಸತ್ಯವಾ ದದ್ದು ಬಿಡಬಾರದು. ಇಂಥ ಪೂರ್ಣ ಮಧ್ಯಾಹ್ನಕ್ಕೆ ಬೆಳದಿಂಗಳು ಬಿದ್ದಿರು ತ್ತದೆಂದು ಯಾರಾದರೂ ಅಂದರೆ ಅದನ್ನು ಹೇಗೆ ಒಪ್ಪಿಕೊಳ್ಳಬೇಕು ? ಒಂದು ವೇಳೆ ಕುರಡಿಯಾಗಿದ್ದರೆ 'ಹೂ' ಅಂದು ಬಿಡುತ್ತಿದ್ದೆನು. ಛೀ! ಬಿಸಿಲು ನೋಡ ಲಿಕ್ಕೆ ಕುರಡರಿಗೆ ಕಣ್ಣು ಇಲ್ಲದಿದ್ದರೂ ಅವರ ಮೈಗೆ ಬಿಸಿಲು ಬಡಿಯುವದು. ಸುಳ್ಳೇ ? ಅದು ತಾನೇ ನಿಜವನ್ನು ನುಡಿಸುವದು.

**ಪ್ರತಾಪರಾವ**—ಹೀಗೇನು ? ಬಿಸಿಲು ಬೆಳದಿಂಗಳಾಗುವ ತನಕ ನಾನು ಈ ಸ್ಥಳವನ್ನು ಬಿಟ್ಟು ಮುಂದಕ್ಕೆ ಅಗಳಾಡಲಿಕ್ಕಿಲ್ಲ. ಇದೇ ನನ್ನ ನಿಶ್ಚಯವೆಂದು ತಿಳಿ. ಈಕೆಯು ನನಗೆ ಏನು ಅರಿಷ್ಟ ಹತ್ತಿರುತ್ತಾಳೆ ? ಯಾವ ಕೆಲಸದಲ್ಲಿ ನೋಡಿದರೂ ಈಕೆಯು ಅಡ್ಡಮಾತು ಇದ್ದೇ ಇರುತ್ತದೆ. ನನ್ನ ಮಾತಿಗೆ ಈಕೆಯು ಎದುರುತ್ತರವು ಉಂಟೇ ಉಂಟು. ಇನ್ನು ಮೇಲೆ ಇದಕ್ಕೆ ಬೆಳದಿಂಗಳವೇಕೆ ಅನ್ನಲಿ?

ಮಧ್ಯರಾತ್ರಿಯೆಂದು ಅನ್ನುವೆನು; ಕಗ್ಗತ್ತಲೆ ಎಂದು ಕರೆಯುವೆನು. ಅಥವಾ ನಿರಭ್ರವಾದ ನಭೋಮಂಡಲವು ಇದ್ದಾಗ್ಯೂ ಖಗ್ರಾಸ ಸೂರ್ಯಗ್ರಹಣವಾಗಿರುತ್ತದೆಂದು ಅನ್ನುವೆನು. ಸಾರಾಂಶ–ನನ್ನ ಮನಸ್ಸಿಗೆ ಬಂದದ್ದನ್ನು ಅನ್ನುವೆನು. ಇವಳು ನನ್ನ ಬಾಯಿಂದ ಬಂದದ್ದಕ್ಕೆ ಹೌದೆಂದು ಅನ್ನುವವರೆಗೆ ನಾನು ಇಲ್ಲಿಂದ ನನ್ನ ಹೆಜ್ಜೆಯನ್ನೇ ಮುಂದಿಡುವದಿಲ್ಲ. ನನಗಂತೂ ಈ ಹೊತ್ತು ಹಸಿವೆಯಾಗಿಲ್ಲ. ಹತ್ತು ತಾಸು ಬಿಟ್ಟು ಇಪ್ಪತ್ತು ತಾಸು ಆದರೂ ನಾನು ಇಲ್ಲಿಯೇ ಸ್ವಸ್ಥವಾಗಿ ಬಿದ್ದುಕೊಂಡು ಬಿಡುವೆನು. ಮನೆಯಲ್ಲಾದರೂ ಏನು ಸೌಖ್ಯವಿರುತ್ತದೆ ? ಅಲ್ಲಿಯಾದರೂ ಇದೇ ಹಾಡು ಹೌದಲ್ಲೋ ? (**ಕೆಳಗೆ ಕುಳಿತು ಕೊಳ್ಳುತ್ತಾನೆ.**)

**ತ್ರಾಟಿಕಾ**—ತಾಯಿಯೊ, ನಾನು ಇನ್ನು ಮಾಡತಕ್ಕದ್ದೇನದೆ ? ಪ್ರತ್ಯಕ್ಷ ಸುಳ್ಳಿದ್ದದ್ದನ್ನು ನಾನು ಹೇಗೆ ಒಡಂಬಡಬೇಕು ? ನಾನು ಒಡಂಬಡದಿದ್ದರೆ ಇವರು ನನಗೆ ಚಿಟಿಕು ಮುಳ್ಳು ಆಡಿಸುವದನ್ನು ಎಂದಿಗೂ ಕಡಿಮೆ ಮಾಡುವದಿಲ್ಲ. ನಾನು ಈ ಕಷ್ಟವನ್ನು ಹೇಗೆ ತಡೆದುಕೊಳ್ಳಲಿ ? ಅನ್ನ ಇಲ್ಲ, ನಿದ್ರೆ ಇಲ್ಲ, ಈ ಪರಿ ಜೀವದಿಂದಿರುವದಕ್ಕಿಂತ ಒಮ್ಮೆಲೇ ಮರಣಬಂದರೆ ನೆಟ್ಟಗಾಗುವದು. ಅಪ್ಪನ ಮೋರೆಯನ್ನೂ ತಂಗಿಯ ಮೋರೆಯನ್ನೂ ಇನ್ನು ನಾನು ಕಾಣುತ್ತೇನೋ ಇಲ್ಲೋ ತಿಳಿಯದು. ನಾನು ಇವರ ಸಂಗಡ ಯಾವಪ್ರಕಾರ ನಡೆದರೆ ಇವರು ನನ್ನನ್ನು ಚೆನ್ನಾಗಿ ನಡೆಸಿಕೊಂಡಾರು ? ತಾಯಿ ! ಜಗದಂಬೇ ! ನೀನೇ ನನಗೆ ದಾರೀ ತೋರಿಸಿ ನನ್ನನ್ನು ಈ ದುಃಖದೊಳಗಿಂದ ಪಾರ ಮಾಡು. ಒಳ್ಳೇದು. ನಾನು ಇವರು ಹೇಳುವದನ್ನೆಲ್ಲ ಸುಮ್ಮನೆ ಕೇಳಿಕೊಳ್ಳುತ್ತ ಹೋದರೆ ಅದರ ಪರಿಣಾಮವು ಹೇಗೆ ಆದೀತು ? ಛೀ. ಇಂಥ ಅಪಮಾನವನ್ನು ಯಾರು ತಡೆದುಕೊಳ್ಳಬೇಕು ? ನಾನಂತೂ ಇಷ್ಟು ದಿವಸ ಯಾರಿಗೂ ಸೊಪ್ಪು ಹಾಕಲಿಲ್ಲ. ಇನ್ನು ಮೇಲೆ ಇವರಿಗೆ ಸೊಪ್ಪು ಹಾಕಬೇಕೇ ? ( ಧೇನಿಸದಂತೆ ಮಾಡಿ ) ಇವರು ಯಾರು ? ನನ್ನ ಪತಿಯಲ್ಲವೇ ? ಇವರೇ ನನ್ನ ಜೀವದ ಸ್ವಾಮಿಯು. ಇವರಿಂದಲೇ ನನ್ನ ಜನ್ಮದ ಸುಖದುಃಖಗಳು. ಅಂದಮೇಲೆ ಇವರ ಮುಂದೆ ನನ್ನ ಅಪಮಾನವು ಯಾತರದು ? ಆದರೆ ಇದೇಪ್ರಕಾರ ನಾನು ಯಾವಾಗಲು ನಡೆಯಬೇಕೇನು ? ಇವರು ಬೇಕಾದ್ದು ಮಾತಾಡಿದರೂ ನಾನು ಸುಮ್ಮನೇ ಗೋಣು ಅಗಳಾಡಿಸುತ್ತ ಹೋಗಬೇಕೇ ? ಛೀ. ಹಾಗೆಂದಿಗೂ ನನ್ನ ಕೈಯಿಂದಾಗಲಿಕ್ಕಿಲ್ಲ.

ಇವರು ಆಳುಮನುಷ್ಯರ ಕೂಡ ಮಾತಾಡುವಾಗ ಈ ಪ್ರಕಾರ ಎಡ್ಡು ಹಿಡದದ್ದನ್ನು ನಾನೆಂದೂ ನೋಡಲಿಲ್ಲ. ಅಂದಮೇಲೆ ನನ್ನ ಸಂಗಡ ಮಾತ್ರವೇ ಇವರು ಈ ಪ್ರಕಾರ ಏಕೆ ನಡೆಯುತ್ತಿದ್ದಾರು ? ಇದರಲ್ಲಿ ಏನಾದರೂ ಮಹತ್ವವಾದ ಉದ್ದೇಶವಿರಬಹುದು. (ಧ್ಯಾಸಪಡಂತೆ ಮಾಡಿ) ಛೀ, ತಾಯಿ, ನನಗೆ ಇಷ್ಟು ದಿವಸ ಏನೂ ತಿಳಿದಿದ್ದಿಲ್ಲ. ನಾನು ಇಷ್ಟು ದಿವಸ ಸುಮ್ಮನೆ ಮೂರ್ಖಿಯಂತೆ ಕುಣಿದಾಡಿದೆನು. ನನ್ನ ಜನ್ಮವೆಲ್ಲ ಯಾರ ಸೇವೆಯಲ್ಲಿ ಹೋಗತಕ್ಕದ್ದೋ ಅವರನ್ನೇ ನಾನು ಜನ್ಮಶತ್ರುವಾಗಿ ಮಾಡಿಕೊಂಡರೆ ಹೇಗೆ ನಡೆದೀತು ? ಸಾಕಿನ್ನು. ಈ ಪ್ರಕಾರ ವಿಚಾರ ಮಾಡುತ್ತ ಹೊತ್ತು ಕಳೆಯುವದು ಸಾಕು. ಅವರು ಅಂದದ್ದಕ್ಕೆಲ್ಲ 'ಹೂ' ಅನ್ನುತ್ತ ನಡೆವರಾಯಿತು. ಇದೇ ನನ್ನ ನಿಶ್ಚಯವು. ಇವರು ಮನೆಯೊಳಗಿನ ಆಳು ಮನುಷ್ಯರಿಗೆಲ್ಲ ಬಾಯಿಗೆ ಬಂದಂತೆ ಬೈಯ್ಯುತ್ತಾರೆ. ಆದರೆ ಅವರು ಏಕೆ ಓಡಿ ಹೋಗುತ್ತಿರಲಿಕ್ಕಿಲ್ಲ ? ಬರೇ ಹೊಟ್ಟೆ ಸುಟ್ಟುಕೊಳ್ಳುವದಕ್ಕಾಗಿ ಅವರು ಇಷ್ಟು ಕಷ್ಟ ಸಹಿಸಿಕೊಂಡು ಇರಬಹುದೆಂದು ನನಗಂತೂ ಕಾಣುವದಿಲ್ಲ. ಅವರ ಮೇಲೆ ಆಳುಮನುಷ್ಯರ ಭಕ್ತಿಯು ಇರಲಿಕ್ಕೇ ಬೇಕು. ನಿಷ್ಠುರ ಮಾತಿಗೆ ನಿಷ್ಠುರ ಉತ್ತರವು ದೊರಕುವಂತೆ ಪ್ರೀತಿಗೆ ಪ್ರೀತಿಯು ಏಕೆ ದೊರಕಲಿಕ್ಕಿಲ್ಲ ? ಪರೀಕ್ಷಿಸಿ ನೋಡೋಣ. (ಬಹಿರಂಗವಾಗಿ) ಕೇಳಿದಿರೇನು ?

**ಪ್ರತಾಪರಾವ** — (ತನ್ನಷ್ಟಕ್ಕೆ) ಇವಳು ಬಹುಶಃ ದಾರಿಗೆ ಬಂದಳೆಂಸು ಕಾಣುತ್ತದೆ. ಆದರೆ ಇನ್ನೂ ಏನು ಮಾತಾಡುತ್ತಾಳೋ ಕೇಳೋಣ. ಇಷ್ಟರಲ್ಲಿಯೇ ಈಕೆಗೆ ಉತ್ತರ ಕೊಡಬಾರದು.

**ತಾರ್ರಿಟಿಕಾ**— ನನ್ನಿಂದ ತಪ್ಪಾಯಿತು. ನನಗೆ ಚೆನ್ನಾಗಿ ಕಾಣಿಸಲಿಲ್ಲ– ಆದುದರಿಂದ ಬಿಸಿಲು ಅಂದೆನು. ಇದು ಬೆಳದಿಂಗಳವೇ ಹೌದು! ಅಹಹ! ಬೆಳದಿಂಗಳವು ಹಿಟ್ಟಿನಂತೆ ಎಷ್ಟು ಸ್ವಚ್ಛವಾಗಿ ಬಿದ್ದಿರುತ್ತದೆ!

**ಪ್ರತಾಪರಾವ**— ನನಗೆ ಈ ಹೊತ್ತು ಯಾಕೋ ಕಿವಿಯೇ ಕೇಳಿಸಲೊಲ್ಲವು.

**ತಾರ್ರಿಟಿಕಾ**— ನಾನು ಕೈ ಮುಗಿಯುತ್ತೇನೆ. ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ದಯಮಾಡಿ ಕ್ಷಮಿಸಬೇಕು. ನಾನು ಇಷ್ಟೊತ್ತು ಕುರುಡಿಯಾಗಿದ್ದೆ, ಹುಚ್ಚಿಯಾಗಿದ್ದೆ, ಮೂರ್ಖಿಯಾಗಿದ್ದೆ. ನೀವು ಬೇಕಾದದ್ದು ಅನ್ನಿರಿ. ಚಂದ್ರ, ಸೂರ್ಯ, ಬೆಳದಿಂಗಳು, ಖಗ್ರಾಸ ಗ್ರಹಣ, ಕಗ್ಗತ್ತಲು, ಮಧ್ಯರಾತ್ರಿ, ದೀವಟಿಗೆ,

ದೀಪ, ಪ್ರಣತಿ–ಅನ್ನರಿ. ನೀವು ಅಂದದ್ದಕ್ಕೆಲ್ಲ ನನ್ನ ಪೂರ್ಣ ಸಮ್ಮತಿಯುಂಟು. ಈ ಹೊತ್ತಿನಿಂದ ನೀವು ಮಾತಾಡಿದ್ದರ ವಿರುದ್ಧವಾಗಿ ನಾನು ಒಂದು ಅಕ್ಷರ ಸಹ ನುಡಿಯಲಿಕ್ಕಿಲ್ಲ.

**ಪ್ರತಾಪರಾವ—** ಯಾರು ಮಾತಾಡಿದರು ಈಗ ? ಈ ಬೆಳದಿಂಗಳದಲ್ಲಿ ಕೆಟ್ಟ ಚಳಿಯು ಬಿಟ್ಟಿರುವದರಿಂದ ನನ್ನ ಕಿವಿಗಳು ಚೆನ್ನಾಗಿ ಕೇಳಿಸುವದಿಲ್ಲ.

**ತ್ರಾಟಿಕಾ—** ಹೌದು ಹಾಗೇ ಇರಬಹುದು. ಎಷ್ಟು ಕೆಟ್ಟ ಚಳಿಯು ಬಿಟ್ಟಿರುತ್ತದೆ ? ನಾನು ಮೈಮೇಲೆ ಹೊತ್ತುಕೊಳ್ಳಲಿಕ್ಕೆ ಶಾಲು ತಾರದೆ ಇದ್ದದ್ದು ಬಹಳ ತಪ್ಪಾಯಿತು.

**ಪ್ರತಾಪರಾವ—** ಈಗ ಮಾತಾಡಿದವಳು ನೀನೇ ಏನು ? ನೀನು ಕುರಡಿಯಾದಿಯೇನು ? ಬಿಸಿಲು ಎಷ್ಟು ತೀಕ್ಷ್ಣವಾಗಿದ್ದರೂ ನೀನು ಬೆಳದಿಂಗಳವೆಂದು ಅನ್ನುತ್ತಿಯಾ ?

**ತ್ರಾಟಿಕಾ—** ಹೌದು. ನಾನು ಹೀಗೇಕೆ ಮೂರ್ಖಿಯಾದೆನು ? ನಾನು ಇದಕ್ಕೆ ಬೆಳದಿಂಗಳು ಅಂದೆನೇನು ? ಕಾಲಿಗೆ ಬಿಸಲಿನ ಜಳವು ಎಷ್ಟು ತಾಕುತ್ತದೆ? ಅದು ಹೇಗೇ ಇರಲಿ. ಇದಕ್ಕೆ ನೀವು ಅನ್ನುವದನ್ನೇ ನಾನು ಅನ್ನುವೆನು. ಈ ಹೊತ್ತಿನಿಂದ ಈ ರಂಗಿಯು ನಿಮ್ಮ ಯಾವ ಮಾತನ್ನೂ ವಿರೋಧಿಸುವದಿಲ್ಲ.

**ಪ್ರತಾಪರಾವ—** ನೀನೇ ಮಾತಾಡಿದಿಯೇನು ? ಎರಡನೇಯವರು ಮಾತಾಡುತ್ತಿರಬಹುದೆಂದು ತಿಳಿದಿದ್ದೆನು. ನಿನಗೆ ರಂಗೂ ಎಂಬ ಹೆಸರು ಸೇರುತ್ತಿದ್ದಿಲ್ಲವಷ್ಟೇ ?

**ತ್ರಾಟಿಕಾ—** ನಿಮಗೆ ರಂಗೂ ಎಂಬ ಹೆಸರು ಬಹಳ ಸೇರುತ್ತದೆಂದು ನೀವೇ ನನಗೊಮ್ಮೆ ಹೇಳಿದ್ದಿರಿ. ಅಂದಮೇಲೆ ನಿಮಗೆ ಸೇರಿದ್ದು ನನಗೇಕೆ ಸೇರಬಾರದು ?

**ಪ್ರತಾಪರಾವ—** ರಂಗೂ ಎಂಬ ಹೆಸರು ತೀರಾ ಸಪ್ಪಗಿರುತ್ತದೆ. ನನಗೆ ಇವರಕಿಂತಲೂ ತ್ರಾಟಿಕಾ ಎಂಬ ಹೆಸರೇ ಹೆಚ್ಚಿಗೆ ಸೇರುತ್ತದೆ.

**ತ್ರಾಟಿಕಾ—** ಅದಂತೂ ನಿಜವಾದದ್ದೇ. ತಾವು ಕರೆಯುವ ಹೆಸರು ಉತ್ತಮವಾದ್ದೆನ್ನಲಿಕ್ಕೆ ಸಂಶಯವೆಲ್ಲಿ ?

**ಪ್ರತಾಪರಾವ—** (ತನ್ನಷ್ಟಕ್ಕೆ) ಶಹಬಾಸ, ಪ್ರತಾಪರಾಯಾ ಶಹಬಾಸ ! ಇಲ್ಲಿಯವರೆಗಂತೂ ನೀನು ಗೆದ್ದಿ. ಇನ್ನು ಈಕೆಯ ಗುಣವಲ್ಲಿ ಆಗಿರುವ ಬದಲು ನಿರಂತರ ಉಳಿಯುತ್ತದೋ, ಇಲ್ಲೋ ನೋಡಬೇಕು. ಒಂದು ವೇಳೆ ಈಕೆಯು

ತಮ್ಮ ತವರುಮನೆಗೆ ಹೋಗುವದಕ್ಕಾಗಿ ಈ ಪ್ರಕಾರ ಕಪಟದಿಂದ ನಡೆಯು ತ್ತಾಳೋ ಏನೋ ತಿಳಿಯದು. ಈಕೆಯ ಮೋರೆಯ ಮೇಲಿಂದ ನೋಡಿದರೆ ಕಪಟದ ಚಿನ್ಹವಂತೂ ಇಲ್ಲ. ಮತ್ತು ಇಂಥ ತಾಮಸ ಸ್ವಭಾವದ ಜನರಿಗೆ ಕಪ ಟವು ಸರ್ವಥಾ ಸೇರುವದಿಲ್ಲ. ಅದು ಸೇರಿದರೂ ಸಾಧಿಸುವದಿಲ್ಲ. (ಬಹಿರಂಗವಾಗಿ) ಪ್ರಿಯೇ, ನಿನಗೇನು ಹೇಳಲಿ ? ನಿನ್ನ ಈಗಿನ ವರ್ತನವನ್ನು ನೋಡಿ ನನ್ನ ಮನಸ್ಸು ಆನಂದಸಾಗರದಲ್ಲಿ ಮುಳುಗಿ ಹೋಗಿರುತ್ತದೆ. ನಿನ್ನ ನಿಶ್ಚಯುವನ್ನು ಇದೇ ರೀತಿ ಯಿಂದ ಸ್ಥಿರವಾಗಿಡು. ಅಂದರೆ ಉಭಯತರ ಸೌಖ್ಯಕ್ಕೆ ಎಣೆಯೇ ಇಲ್ಲ. ಈ ಸಮಯಕ್ಕೆ ನಿನಗೆ ಆಲಿಂಗನ ಕೊಡದೆ ನನ್ನ ಮನಸ್ಸು ಇರದು. ( ಆಲಿಂಗನ ಕೊಡ ಲಿಕ್ಕೆ ಮುಂದಕ್ಕೆ ಹೋಗುತ್ತಾನೆ. )

**ತ್ರಾಟಿಕಾ**— (ಮೆಲ್ಲನೆ) ನನ್ನಿಂದ ಅಡ್ಡಿ ಎಲ್ಲಿ ಉಂಟು ? ಆದರೆ ಯಾರಾ ದರೂ ನೋಡಿದರೆ ಏನಂದಾರು ?

**ಪ್ರತಾಪರಾವ**— ಏನನ್ನುತ್ತಾರೆ ? ನನ್ನ ಪ್ರೇಮವು ನಿನ್ನ ಮೇಲೆ ಬಹಳಿರುತ್ತದೆಂದು ಅಂದಾರು. ( ನರಸಿಂಗರಾಯನು ಬರುತ್ತಾನೆ. ) ಅಹಹ ! ದಿವ್ಯ ತೇಜಸ್ಸಿನ ಪುತ್ಥಳಿಯೂ ಸೌಂದರ್ಯಲತಿಕೆಯೂ, ತಾರುಣ್ಯಾಧ ಅವತಾರವೂ, ಮನಮೋಹಿನಿಯೂ ಆಗಿರುವಂಥ ಮದನಮಂಜರಿಯು ನಮ್ಮ ಸುದೈವದಿಂದ ಇಲ್ಲಿಯೇ ಬರುತ್ತಲಿದ್ದಾಳೆ. ಈಕೆಯು ಯಾರಿರಬಹುದು ? ಯಾರೇ ಇರಲಿ, ಇವಳಿಗೆ ಯೋಗ್ಯ ರೀತಿಯಿಂದ ಆಗತಸ್ವಾಗತ ಮಾಡಲಿಕ್ಕೇ ಬೇಕು. ಪ್ರಿಯೇ ! ಏನು ನೋಡುತ್ತೀ ? ಯಾಕೆ ಸ್ತಬ್ಧಳಾಗಿ ನಿಂತಿರುವೆ ? ಇವಳ ದಿವ್ಯ ಸ್ವರೂಪದ ತೇಜಸ್ಸನ್ನು ನೋಡಿ ನಿನ್ನ ಕಣ್ಣು ಕುಕ್ಕಿ ಹೋದವೇನು ? ಪ್ರಿಯೇ, ಇವಳಿಗೆ ಪ್ರವಾಸದಿಂದ ಆದಂಥ ಪ್ರಯಾಸವನ್ನು ಪರಿಹರಿಸುವದಕ್ಕಾಗಿ ಇವಳೊಡನೆ ನಾಲ್ಕು ಸವಿಮಾತುಗಳನ್ನು ಆಡು. ನಾನು ಮಾಡಿದ ಸ್ತೋತ್ರವನ್ನು ಕೇಳಿ ಈಕೆಯ ಗಲ್ಲದ ಮೇಲೆ ಆನಂದದ ಮತ್ತು ನಾಚಿಕೆಯ ಚಿನ್ಹಗಳು ತಮ್ಮ ತಮ್ಮೊಳಗೆ ಈರ್ಷೆಯಿಂದ ಹೇಗೆ ಸ್ಪರ್ಧೆಯನ್ನು ಮಾಡಲಿಕ್ಕೆ ಹತ್ತಿರುತ್ತವೆ ? ಇವಳ ಕಣ್ಣುಗ ಳಂತೂ ಆಕಾಶದೊಳಗಿನ ನಕ್ಷತ್ರಗಳಿಗಿಂತಲೂ ಹೆಚ್ಚು ಪ್ರಕಾಶಿಸುತ್ತಲಿವೆ! ದೇವೀ! ನೀನು ಇಹಲೋಕದವಳೇ ಇರಲಿ, ಸ್ವರ್ಗಲೋಕದವಳೇ ಇರಲಿ, ನಿನಗೆ ನಾನು ಅತ್ಯಂತ ಪ್ರೇಮಪೂರ್ವಕವಾಗಿ ಅಭಿನಮಿಸುತ್ತೇನೆ. ನನ್ನ ವಂದನೆಗಳನ್ನು ಸ್ವೀಕರಿಸು.

**ತ್ರಾಟಿಕಾ**—(ತನ್ನಷ್ಟಕ್ಕೆ) ತಾಯೀ, ಪುನಃ ನನ್ನ ಪರೀಕ್ಷೆಯ ಹೊತ್ತು ಬಂತು. ಏನಾದದ್ದು ಆಗಲಿ, ನನ್ನ ನಿಶ್ಚಯವನ್ನು ಬಿಡಬಾರದು. ಅವರು ಆಗಲೇ ಪ್ರೇಮಪೂರ್ವಕವಾಗಿ ಮಾತಾಡಿದ ನಾಲ್ಕು ಮಧುರವಾದ ಮಾತುಗಳಿಂದ ನನ್ನ ಮನಸ್ಸಿಗೆ ಎಷ್ಟು ಆನಂದವಾಗಿ ಹೋಗಿರುತ್ತದೆ ? ಸಮೀಪದಲ್ಲಿರುವವರ ಪ್ರೇಮದಲ್ಲಿ ಸೌಖ್ಯವು ಎಷ್ಟು ತುಂಬಿರುತ್ತದೆಂಬುವದು ನನಗೆ ಈಗ ತಿಳಿಯಿತು. ಇವರು ನನಗೆ ಪೀಡಿಸಿದ್ದು ನಿಜವು. ಆದರೆ ಇವರು ನನಗೆ ಇಷ್ಟು ಪೀಡಿಸಿದ್ದರಿಂದಲೇ ನನಗೆ ಪ್ರೇಮದ ಮಹತ್ವವು ಗೊತ್ತಾಯಿತು. ಅಂದಮೇಲೆ ನಾನು ಇವರ ಉಪಕಾರವನ್ನು ಹೇಗೆ ತೀರಿಸಲಿ ?

**ಪ್ರತಾಪರಾವ**—ಏನು? ತಿರುಗಿ ಆ ಹುಚ್ಚ ಗಾಳಿಯು ಹಣಿಕಿ ಹಾಕುತ್ತದೇನು ?

**ತ್ರಾಟಿಕಾ**— ನನ್ನ ತಪ್ಪಾಯಿತು. ನನ್ನನ್ನು ಕ್ಷಮಿಸಿರಿ. (ನರಸಿಂಗರಾಯನ ನ್ನುದ್ದೇಶಿಸಿ) ತಾಯೀ, ಅವರು ಆಗಲೇ ಅಂದಂತೆ ನಾನು ಹುಚ್ಚಿಯಾಗಿರುವದು ನಿಜವು. ನಿನ್ನ ಅಪ್ರತಿಮ ಲಾವಣ್ಯವನ್ನು ನೋಡಿ ನನ್ನ ಕಣ್ಣು ಕುಕ್ಕಿ ಹೋಗಿರುತ್ತವೆ. ಈಶ್ವರೀ ಕೃಪೆಯು ನಿನ್ನ ಮೇಲೆ ಇದ್ದುದರಿಂದಲೇ ನಿನಗೆ ಇಂಥ ಸೌಂದರ್ಯವು ಪ್ರಾಪ್ತವಾಗಿರುತ್ತದೆ. ನೀನು ಈ ಪ್ರಕಾರ ಹೊರಗೆ ಕಂಡ ಕಂಡಲ್ಲಿ ಅಡ್ಡಾಡುತ್ತಿರಬೇಡವ್ವಾ. ಒಬ್ಬೊಬ್ಬರ ಕಣ್ಣುಗಳು ಬಹಳ ಕೆಟ್ಟವಿರುತ್ತವೆ. ನೀನು ಯಾರ ಉದರದಲ್ಲಿ ಜನಿಸಿರುವಿಯೋ ಅವರು ಬಹಳ ಧನ್ಯರು ! ಇಂಥ ರತ್ನವು ನಿರಂತರವಾಗಿ ಯಾರ ಹತ್ತರವಿರುವದೋ ಅವರ ಭಾಗ್ಯಕ್ಕಂತೂ ಎಣೆಯೇ ಇಲ್ಲ !

**ನರಸಿಂಗರಾವ**— ಮುದುಕನಾದ ನನ್ನನ್ನು ನೋಡಿ ನೀವಿಬ್ಬರೂ ಚೇಷ್ಟೆಯನ್ನು ಮಾಡುತ್ತಲಿದ್ದೀರಿ. ಈ ಬಗ್ಗೆ ನಿಮಗೆ ನಾಚಿಕೆಯು ಹೇಗೆ ಬರುವದಿಲ್ಲ ? ಎಲೆಲೇ ! ನಾನು ನಿಮ್ಮ ಪಿತಾಮಹನಂತೆ ಶೋಭಿಸುತ್ತೇನೆ !

**ಪ್ರತಾಪರಾವ**—ರಂಗೂ, ಇದು ನಿಜವು. ನೀನು ಎಷ್ಟು ಹುಚ್ಚಿಯಾದೆ? ಇವನಿಗೆ ನೀನೇನು ತರುಣ ಸುಂದರ ಸ್ತ್ರೀಯೆಂದೇನು ? ಇವನು ತೀರಾ ವೃದ್ಧನಾಗಿರುವ ಗಂಡಸು. ಇವನ ಮೋರೆಯ ಮೇಲೆ ನಿರಿಗೆಗಳು ಹೇಗೆ ಬಿದ್ದಿರುತ್ತವೆ? ಹಾಗೂ ಇವನ ಮೋರೆಯು ಎಷ್ಟು ಬಾಡಿರುತ್ತದೆ ? ನೋಡು.

**ಶ್ರಾಟಿಕಾ**—ಹೌದೌದು. ಎಂಥ ತಪ್ಪಾಯಿತು ! ಅಜ್ಜನವರೇ, ನನ್ನ ಕಣ್ಣಿಗೆ ಕತ್ತಲಗೂಡಿಸಿ ಹೋಗಿತ್ತು. ಆದುದರಿಂದ ನನಗೇನೂ ಕಾಣಿಸಲಿಲ್ಲ. ನನ್ನ ಅಪರಾಧವನ್ನು ಕ್ಷಮೆಮಾಡಿರಿ. ನಿಮ್ಮ ಪಾದಕ್ಕೆ ನಮಸ್ಕರಿಸುತ್ತೇನೆ.

**ಪ್ರತಾಪರಾವ**— ಅಜ್ಜನವರೇ, ಇವಳ ಅಪರಾಧವನ್ನು ಕ್ಷಮಿಸಿರಿ. ಯೋಗ್ಯವಾಗಿ ವಿಚಾರ ಮಾಡಿದರೆ ನಿಮಗೆ ಈ ಬಗ್ಗೆ ಸಿಟ್ಟು ಬರಬಾರದು. ಮುದುಕರಿಗೆ ತರುಣರೆಂದು ಅನ್ನಿಸಿಕೊಳ್ಳಲಿಕ್ಕೆ ವಿಶೇಷ ಆನಂದವಾಗುತ್ತದೆ. ಆದುದರಿಂದ ಎಷ್ಟೋ ಜನರು ತಮ್ಮ ಮೀಶೆಗಳಿಗೆ ಕರೇಬಣ್ಣ ಮಾಡಿಕೊಳ್ಳುವದಕ್ಕಾಗಿ ಎಷ್ಟೆಷ್ಟೋ ಹೊಲಸು ನಾರುವ ರಸಾಯನದ ಎಣ್ಣೆಯನ್ನು ಹಚ್ಚಿಕೊಳ್ಳುತ್ತಾರೆ. ಚೇಷ್ಟೆಯು ಒಂದು ಬದಿಗಿರಲಿ ನೀವು ಇವಳ ಅಪರಾಧವನ್ನು ಕ್ಷಮೆ ಮಾಡಿ ಯಾವ ಕಡೆಗೆ ಹೊರಟಿರುತ್ತೀರೆಂಬುವದನ್ನು ದಯಮಾಡಿ ಹೇಳಿರಿ. ನಿಮ್ಮ ನಮ್ಮ ದಾರಿಯು ಒಂದೇ ಇದ್ದರೆ ನಾವೂ ನೀವೂ ಕೂಡಿಯೇ ಹೋಗೋಣ.

**ನರಸಿಂಗರಾವ**—ನೀವು ಮತ್ತು ನಿಮ್ಮ ಅರ್ಧಾಂಗಿಯು ವಿನೋದಗಾರರೆಂದು ಕಾಣುತ್ತೀರಿ. ನನಗೆ ಮೊದಲಿಗೆ ನಿಮ್ಮ ಮಾತು ಕೇಳಿ ಸಿಟ್ಟು ಬಂದಿತ್ತು. ಆದರೆ ನಿಮ್ಮ ವಿನಯವನ್ನು ನೋಡಿ ನನ್ನ ಸಿಟ್ಟು ಹೊರಟು ಹೋಯಿತು. ಇರಲಿ. ನಾನು ನನ್ನ ಮಗನನ್ನು ಕಾಣುವದಕ್ಕಾಗಿ ಕುಸುಮಪುರಕ್ಕೆ ಹೋಗುತ್ತೇನೆ.

**ಪ್ರತಾಪರಾವ**—ಒಳ್ಳೇದು, ಅವನ ಹೆಸರೇನು ?

**ನರಸಿಂಗರಾವ**—ಅವನಿಗೆ ರಂಗರಾಯನೆಂದು ಅನ್ನುತ್ತಾರೆ.

**ಪ್ರತಾಪರಾವ**—ಅಹಹ! ಬಹಳ ಉತ್ತಮವಾಯಿತು ಇವಳ ತಂದೆಯು ಇವಳ ತಂಗಿಯನ್ನು ಅವನಿಗೆ ಕೊಡಲಿಕ್ಕೆ ಒಡಂಬಟ್ಟಿರುವ ಕಾರಣ ನಾವು ಅವರ ಲಗ್ನಕ್ಕೇ ಹೊರಟಿರುತ್ತೇವೆ. ಅಂದಮೇಲೆ ನಮ್ಮದೂ ನಿಮ್ಮದೂ ನಿಕಟ ಸಂಬಂಧವು ಹತ್ತಿದಂತಾಯಿತು. ಇವಳ ತಂಗಿಯು ಇವಳಂತೇ ಬಹಳ ಸುಂದರಳಿದ್ದು ಬಹಳ ಸುಶೀಲಳಿರುತ್ತಾಳೆ. ನಿಮ್ಮ ಚಿರಂಜೀವನು ಬಹಳ ದೈವಶಾಲಿಯು.

**ನರಸಿಂಗರಾವ**—ಏನನ್ನುತ್ತೀರಿ? ನನ್ನ ಮಗನ ಲಗ್ನವು ನೇಮಕವಾಗಿರುತ್ತದೋ ? ನೀವು ಹಿಂದಿನಂತೆ ನನಗೆ ಇನ್ನೂ ಚೇಷ್ಟೆಯನ್ನು ನಡೆಸಿರುವಿರೋ ?

**ಪ್ರತಾಪರಾವ**— ಛೀ. ಛೀ, ಅದನ್ನು ಕೇಳಬೇಡರಿ. ನಡೆಯಿರಿನ್ನು. ಬೇಗನೆ ಕುಸುಮಪುರಕ್ಕೆ ಹೋಗೋಣ.. ಪ್ರಿಯೇ, ಅಲ್ಲಿ ನೋಡು,

ನೀಲನು ಕುದುರೆಯನ್ನು ಹಿಡಕೊಂಡು ನಮ್ಮ ಸಮೀಪದಲ್ಲಿಯೇ ನಿಂತುಕೊಂಡಿರುತ್ತಾನೆ.

**ತ್ರ್ಯಂಬಕ**—( ತನ್ನಷ್ಟಕ್ಕೆ ) ಅಹಹ ! ಇನ್ನು ಬಹುಶಃ ನನ್ನ ದುಃಖದ ದಿವಸಗಳು ಮುಗಿದವು. ನಾನು ನನ್ನ ಮನಸ್ಸಿನ ನಿಶ್ಚಯವನ್ನು ಮಾತ್ರ ಹೊಯ್ದಾಡಿಸಬಾರದು.

---

## ಪ್ರವೇಶ ೭ನೇದ್ದು.

## ಲಕ್ಷ್ಮೀಪತಿರಾಯನ ಮನೆಯ ಹಿತ್ತಲದೊಳಗಿನ ತೋಟ.

( ರಂಗರಾವ, ಕಮಲಾ, ಮತ್ತು ತಮ್ಮಾ ಬರುತ್ತಾರೆ. )

**ಕಮಲೆ**—( ತನ್ನಷ್ಟಕ್ಕೆ ) ನನ್ನ ಎದೆಯು ಎಷ್ಟು ಹಾರುತ್ತದೆ! ನಾನು ಮಾಡುವ ಕೆಲಸವು ಯೋಗ್ಯವಾದದ್ದು ಇರುತ್ತದಷ್ಟೇ ? ನನ್ನ ಕೈ ಕಾಲುಗಳು ಏಕೆ ಇಷ್ಟೊಂದು ನಡುಗಹತ್ತಿರುತ್ತವೆ ? (ಬಹಿರಂಗವಾಗಿ) ತಾಯೀ, ನನಗೆ ಏನೋ ಒಂದುತರವು ಆಗಲಿಕ್ಕೆ ಹತ್ತಿರುತ್ತದೆ!

**ರಂಗರಾವ**—( ಅವಳನ್ನು ಅಪಚಿಕೊಂಡು ) ಛೀ, ಹುಚ್ಚೀ! ಹೀಗೇಕೆ ಅಂಜುತ್ತೀ ? ನಾನು ನಿನ್ನ ಹತ್ತರ ಇದ್ದೇನಲ್ಲ ? ಎರಡು ಗಳಿಗೆಯು ತನಕ ಧೈರ್ಯ ಹಿಡಿ. ಆ ಮೇಲೆ ಈ ರಂಗರಾಯನು ಅಗ್ನಿಸಾಕ್ಷಿಯಿಂದ ನಿನ್ನ ಪತಿಯಾಗುವನು.

**ತಮ್ಮಾ**—ಧನಿಯರೇ, ಇಲ್ಲಿಯು ತನಕ ನೆಟ್ಟಗೆ ಪಾರಾಗಿ ಬಂದೆವು. ಕೆಲಸವು ಪೂರಾ ಮುಗಿಯುವ ತನಕ ನನ್ನ ಜೀವದೊಳಗೆ ಜೀವವಿಲ್ಲ. ದೇವರಾಣೆಯೆಂದರೂ ಯಾವಾಗ ನಿಮ್ಮಿಬ್ಬರ ಮೇಲೆ ಒಮ್ಮೆ ಅಕ್ಷತಿಗಳು ಬಿದ್ದಾವೆಂದು ನನಗೆ ಚಿಂತೆಹತ್ತಿರುತ್ತದೆ. ಬೇಗ ನಡೆಯಿರಿ. ಹೊತ್ತು ಕಳೆಯಬೇಡಿರಿ. ಅಲ್ಲಿ ಎಲ್ಲವು ಸಿದ್ಧವಾಗಿರುತ್ತದೆ.

**ರಂಗರಾವ**—ನೋಡು. ನಾವು ಹೊರಟೆವು. ಕಮಲೇ, ನೀನು ಹೀಗೆ ಏಕೆ ಅಂಜುತ್ತೀ ? ನಿಮ್ಮ ತಂದೆಯು ನಿನ್ನನ್ನು ರಂಗರಾಯನಿಗೆ ಕೊಡುತ್ತೇನೆಂದು ಸ್ಪಷ್ಟವಾಗಿ ಹೇಳಿರುತ್ತಾನೆ. ಇದನ್ನು ನಾನು ನಿನಗೆ ಹೇಳೀ ಹೇಳೀ ಏಕೆ ತಡ ಮಾಡುತ್ತೀ ? ಬೇಗನೆ ನಡೆ. ಇಲ್ಲದಿದ್ದರೆ ನಿಮ್ಮ ತಂದೆಯು ಮನಸ್ಸು ಪುನಃ ತಿರುಗೀತು ಆ ಬಾಪೂರಾಯನು ಹೇಗಾದರೂ ಜಪ್ಪಿಸಿಕೊಂಡು ಕುಳಿತಿರುತ್ತಾನೆ. ಆದರೆ ಅಬಚಿಯು ಎಲ್ಲಿರುತ್ತಾಳೆ ? ( ಪರದೆಯ ಕಡೆಗೆ ನೋಡಿ ) ಓಹೋ ! ಅವಳೂ ಬಂದಳು. ನಡೆ. ಬೇಗನೆ ನಡೆ. ( ಎಲ್ಲರೂ ಹೋಗುತ್ತಾರೆ. )

## ಅಂಕು ೫ನೇದ್ದು

## ಪ್ರವೇಶ ೧ನೇದ್ದು—ಕುಸುಮಪುರದೊಳಗಿನ ಒಂದು ದಾರಿ.

( ಪ್ರತಾಪರಾಯನೂ, ತ್ರಾಟಿಕೆಯೂ, ನರಸಿಂಗರಾಯನೂ ಬರುತ್ತಾರೆ. )

**ಪ್ರತಾಪರಾವ**—ನರಸಿಂಗರಾಯರೇ, ನಿಮ್ಮ ಮಗನು ಇರುವ ಮನೆಯು ಇದೇ. ಇದನ್ನು ದಾಟಿ ಸ್ವಲ್ಪ ಅಂತರದ ಮೇಲೆ ಲಕ್ಷ್ಮೀಪತಿರಾಯರ ಮನೆಯು ಇರುತ್ತದೆ. ನನಗೆ ತೀವ್ರದಿಂದಲೇ ಅಲ್ಲಿಗೆ ಹೋಗಬೇಕಾಗಿರುತ್ತದೆ. ನೀವು ಕೂಗಿ ಬಾಗಿಲ ತೆರೆಯಿಸಿರಿ. ನಾನು ಇನ್ನು ಹೋಗುತ್ತೇನೆ. ನಮಸ್ಕಾರ.

**ನರಸಿಂಗರಾವ**—ಛೇ. ನಿಮ್ಮನ್ನು ಈ ಪ್ರಕಾರ ಹೇಗೆ ಬಿಟ್ಟೇನು ? ನೀವು ನಮ್ಮ ಮನೆಯಲ್ಲಿ ಬಂದು ಸ್ವಲ್ಪ ಉಪಹಾರ ತಗೆದುಕೊಂಡು ಹೋಗಿರಿ. ಪ್ರವಾಸದಿಂದ ನಿಮಗೆ ಬಹಳ ದಣುವಾಗಿರಬಹುದು. ಆದುದರಿಂದ ನೀವು ನಮ್ಮ ಮನೆಯಲ್ಲಿ ತುಸುವೇಳೆ ಕುಳಿತು ದಣುವಾರಿಸಿಕೊಂಡು ಹೋದರೆ ನನ್ನ ಮೇಲೆ ಬಹಳ ಉಪಕಾರವಾಗುವದು. ನಿಮ್ಮನ್ನು ನಾನು ಹಾಗೇ ಕಳುಹಿಸಿಕೊಟ್ಟರೆ ರಂಗರಾಯನು ನನ್ನ ಮೇಲೆ ಸಿಟ್ಟಿಗೇಳಬಹುದು. ( ಬಾಗಿಲ ಬಡಿಯುತ್ತಾನೆ. ) ಯಾರ ವರು ಒಳಗೆ ! ಬಾಗಿಲ ತೆರೆಯಿರಿ.

**ಮುದುಕ**—( ಮೇಲುಪ್ಪರಿಗೆಯ ಕಿಡಿಕಿಯೊಳಗಿಂದ ) ಯಾರಲ್ಲಿ ? ಬಾಗಿಲ ಮುರಿಯುತ್ತೀರೋ ಏನು ? ಹೌರಗೆ ಬಾಗಿಲ ನೂಕಿಸುವದಕ್ಕೆ ಬರುವದಿಲ್ಲೇನು ?

**ನರಸಿಂಗರಾವ**—(ಮೇಲಕ್ಕೆ ನೋಡಿ) ನೀನು ಯಾರು ಮುದುಕಾ? ಒಳಗೆ ರಂಗನು ಇದ್ದಾನೇನು ?

**ಮುದುಕ**—ಮರ್ಯಾದೆಯಿಂದ ಮಾತಾಡಲಿಕ್ಕೆ ಬರುವದಿಲ್ಲೇನು ? ರಂಗರಾವ ಎಂದು ಬಾಯಿತುಂಬ ಕರೆದಿದ್ದರೆ ನಿನ್ನ ಬಾಯಿ ಸವೆಯುತ್ತಿತ್ತೇನು ! ರಾಯರು ಒಳಗೆ ಕೆಲಸದಲ್ಲಿ ತೊಡಗಿರುತ್ತಾರೆ. ಅವರನ್ನು ಈಗ ಯಾರೂ ಕಾಣು ವಂತಿಲ್ಲ.

**ನರಸಿಂಗರಾವ**—(ತನ್ನಷ್ಟಕ್ಕೆ) ಇವನು ಯಾವನೋ ಹೊಸ ಸೇವಕನು ಬಂದಿ ರುತ್ತಾನೆ. ಇವನಲ್ಲಿ ಯಜಮಾನನ ಅಭಿಮಾನವಂತೂ ಪೂರ್ಣವಾಗಿ ತುಂಬಿರು ತ್ತದೆ. ಒಳ್ಳೇದು, ಸ್ವಲ್ಪ ವಿನೋದ ಮಾಡುವಾ. (ಬಹಿರಂಗವಾಗಿ) ಏನಿರಿ, ರಾಜಶ್ರೀ ಗಳೇ ! ಈಗ ರಾಯರನ್ನು ಯಾರೂ ಕಾಣುವಂತೆ ಇಲ್ಲವೇನು ? ನಾನು ಅವರ ಊರಿನ ಒಬ್ಬ ಬಡ ಮುದುಕನು ಬಂದಿರುತ್ತೇನೆ. ನನಗೆ ಅವರನ್ನು ಈಗಲೇ ಕಾಣಬೇಕಾಗಿರುತ್ತದೆ. ನೀವು ದಯಮಾಡಿ ಒಳಗೆ ಹೋಗಿ ಅವರಿಗೆ ನನ್ನ ನಿರೂ ಪವನ್ನು ತಿಳಿಸಿರಿ.

**ಸರಸ್ವತಿ**—ಇದಕ್ಕೇ ಏನು ನೀವು ಇನಾಮು ಎಂದು ಹೇಳಿದಿರಿ? ನಾನು ಹೇಳಿಕೇಳಿ ಅಬಲೆಯಿರುತ್ತೇನೆ. ಇಂಥ ಇನಾಮು ತೆಗೆದುಕೊಂಡು ನಾನೇನು ಮಾಡತಕ್ಕದ್ದದೆ? ಅದನ್ನು ನೀವೇ ತೆಗೆದುಕೊಳ್ಳಿರಿ. ( **ಹೀಗೆಂದು ಅವನಿಗೆ ಚಾಬೂಕಿ** ನಿಂದ ಹೊಡೆಯುತ್ತಾಳೆ. )

**ಭೀಮರಾವ**—ಸತ್ತೆ. ಸತ್ತೆ. ಓಡಿ ಬನ್ನಿರಿ. ಓಡಿ ಬನ್ನಿರಿ. ನನ್ನನ್ನು ಈ ರಾಕ್ಷಸಿಯು ಕೊಲ್ಲುತ್ತಾಳೆ. ಬೇಗನೆ ಬಂದು ಇವಳ ಕೈಯಿಂದ ನನ್ನನ್ನುಬಿಡಿಸಿರಿ.

**ನೀಲಾ**—ಈ ಸಮಯವು ಒಳಗೆ ಹೋಗಲಿಕ್ಕೆ ಬಹಳ ನೆಟ್ಟಗೆ ಇರುತ್ತದೆ. (**ಒಳಗೆ ಹೋಗಿ**) ನಾನು ಬಂದೆ ನೋಡಿರಿ. ಯಾರವನು ಕಳ್ಳಾ? ನಿನ್ನ ಮೈ ಎಲವು ಈಗ ಪುಡಿ ಪುಡಿ ಮಾಡಿ ಬಿಡುತ್ತೇನೆ. ( **ಭೀಮರಾಯನ ಮೇಲೆ ಎರಡು ಮೂರು ಸಾರೆ ಚಾಬೂಕ ವನ್ನು ಛಟ್ ಛಟ್ ಎಂದು ಹಾರಿಸುತ್ತಾನೆ.** )

**ಸರಸ್ವತಿ**—ಎಲಾ ಹೆಣದ ಮೋರೆಯವನೇ, ನಾವು ಗಂಡಹೆಂಡಿರು ಏಕಾಂತದಲ್ಲಿ ಪ್ರೇಮಕಲಹವನ್ನು ಮಾಡುತ್ತಿರುವಾಗ ಇಲ್ಲಿ ನಮ್ಮ ನಡುವೆ ಬರಲಿಕ್ಕೆ ನಿನಗೆ ಯಾರು ಹೇಳಿದರು? ಹಾಗಾದರೆ ನೀನು ಮೊದಲಿಗೆ ಈ ಇನಾಮು ತೆಗೆದುಕೋ! ( ಅವನಿಗೆ ಹೊಡೆಯುತ್ತಾಳೆ. )

**ಭೀಮರಾವ**—ಪ್ರಿಯೇ, ಶಹಬಾಸ! ಹೀಗೆಯೇ ಇರಬೇಕು. ಯಾಕಲೇ, ನಾವು ಏಕಾಂತದಲ್ಲಿರುವಾಗ ನೀನು ಏಕೆ ಬಂದೆ?

**ನೀಲಾ**—ಬೇಡಿರಿ. ಬೇಡಿರಿ. ಬಹಳಾಯಿತು. ನೀವು ನಮ್ಮ ತ್ರಾಟಿಕಮ್ಮನವರಂತೆಯೇ ಇದ್ದೀರಿ. ಭೀಮರಾಯರೇ, ಒಳ್ಳೇ ಗಟ್ಟಿಮುಟ್ಟ ಅವ್ವನವರನ್ನು ಹುಡುಕಿ ಮಾಡಿಕೊಂಡಿರುತ್ತೀರಿ!

**ಸರಸ್ವತಿ**—ಕಳ್ಳಾ, ಯಾವಾಕಿಯೋ ತ್ರಾಟಿಕಾ? ನನ್ನನ್ನು ಎರಡನೇ ಹೆಂಗಸರಂತೆ ತಿಳಿದೇನು? ನಿಲ್ಲು. ನಿನಗೆ ಸ್ವಲ್ಪ ಬುದ್ಧೀ ಕಲಿಸುತ್ತೇನೆ. (**ಚಾಬೂಕು ಎತ್ತುತ್ತಾಳೆ.** )

**ನೀಲಾ**—ಅವ್ವನವರೇ, ತಪ್ಪಾಯಿತರಿ, ತಪ್ಪಾಯಿತು. ನೀವು ತ್ರಾಟಿಕಮ್ಮ ಏಕೆ ಆದೀರಿ? ಅವರ ಇಮ್ಮಡಿ ಮುಮ್ಮಡಿ ಇರುತ್ತೀರಿ. ಅಂದಮೇಲೆ ನಿಮ್ಮ ಮುಂದೆ ನನ್ನ ಮಾತು ಏನು ನಡೆದೀತು?

**ಭೀಮರಾವ**—(**ತನ್ನ ಕೈಮೈ ಒತ್ತಿಕೊಳ್ಳುತ್ತ**) ನೀಲಾ! ನೀನು ಇಲ್ಲಿ ಹೇಗೆ ಬಂದೆ?

**ನೀಲಾ—ನೆಟ್ಟಗೆ ಬಾಗಿಲದೊಳಗಿಂದ ಹಾದು ಬಂದೆನು!**

**ಭೀಮರಾವ**—ಹಾಗಲ್ಲ, ನೀನು ಇಲ್ಲಿ ಏಕೆ ಬಂದೆ?

**ನೀಲಾ**—ಹೀಗೆ ಕೇಳಬಾರದರೀ ಅಪ್ಪಾ? ನೀವು ನಮ್ಮ ಧನಿಯರ ಗೆಳೆಯರಿದ್ದೀರಿ. ಅದಕ್ಕಾಗಿಯೇ ಅವರು ನಿಮ್ಮನ್ನೂ ಅವ್ವನವರನ್ನೂ ಕಂಡು ಮಾತಾಡಿಸಿ ಬಾ ಎಂದು ನನಗೆ ಹೇಳಿದ್ದರು. ಅದಕ್ಕಾಗಿ ಬಂದೆ. ಅವ್ವನವರನ್ನು ಕಂಡು ಮನಸ್ಸಿಗೆ ಬಹಳ ಹರ್ಷವಾಯಿತು.

**ಸರಸ್ವತಿ**—ನೀಚಾ, ಅಧಮಾ, ನನ್ನ ಹೆಸರು ಪುನಃ ತೆಗಿಯುತ್ತಿಯೇನು?

**ನೀಲಾ**—ನಿಮ್ಮ ಹೆಸರು ನಾನೇಕೆ ತೆಗೆಯಲಿಕ್ಕೆ ಹೋಗಲಿ? ಹಿರಿಯರು ಇಟ್ಟ ಹೆಸರು ಯಾರಿಗಾದರೂ ತೆಗೆಯಲಿಕ್ಕೆ ಆದೀತೇ?

**ಭೀಮರಾವ**—ನೀಲಾ, ನಿನ್ನ ಅಧಿಕ ಪ್ರಸಂಗಿತನ ಮುಗಿಸು. ಇಲ್ಲಿ ಏಕೆ ಬಂದಿದ್ದೆ? ಹೇಳು.

**ನೀಲಾ**—ಬಿಟ್ಟೆ. ಧನಿಯರು ಕಳಿಸಿದ್ದರು. ಅದಕ್ಕಾಗಿ ಬಂದಿದ್ದೆ.

**ಭೀಮರಾವ**—ಪ್ರತಾಪರಾಯನು ಏನು ಹೇಳಿ ಕಳಿಸಿರುತ್ತಾನೆ?

**ನೀಲಾ**—ನಮ್ಮ ಧನಿಯರು ನಿಮಗೂ ಅವ್ವನವರಿಗೂ ಮೇಜವಾನಿಗೆ ಕರೆದಿರುತ್ತಾರೆ. ನಿಮ್ಮಿಬ್ಬರನ್ನೂ ಬಿಟ್ಟು ಬರಬಾರದೆಂತಲೂ, ನಿಮ್ಮಿಬ್ಬರನ್ನು ಮುಂದೆ ಹಾಕಿಕೊಂಡೇ ಬರಬೇಕೆಂತಲೂ ನನಗೆ ಹೇಳಿರುತ್ತಾರೆ.

**ಸರಸ್ವತಿ**—ನಿನ್ನ ಧನಿಯು ಇಷ್ಟು ಉದ್ಧಟನಿರುತ್ತಾನೋ?

**ಭೀಮರಾವ**—ಅದಿರಲಿ ಬಿಡು. ನೀನು ನನ್ನ ಸಂಗಡ ಮೇಜವಾನಿಗೆ ಬರುತ್ತಿಯೋ ಇಲ್ಲೋ?

**ಸರಸ್ವತಿ**—ನಾನೇಕೆ ಬರಲಿ? ನನ್ನಿಂದೇನು ಅಡ್ಡಿಯಾಗಿರುತ್ತದೆ?

**ಭೀಮರಾವ**—ಹಾಗನ್ನಬಾರದು. ದೊಡ್ಡವರು ಪ್ರೀತಿಯಿಂದ ಆಮಂತ್ರಣ ಕಳುಹಿಸಿದ ಬಳಿಕ ನಾವು ಹೋಗದೆ ಇರಬಾರದು. ಇದಲ್ಲದೆ ಪ್ರತಾಪರಾಯನು ನನ್ನ ಜೀವದ ಸ್ನೇಹಿತನಿರುತ್ತಾನೆಂದು ನಿನಗೆ ಗೊತ್ತೇ ಅದೆ.

**ಸರಸ್ವತಿ**—ಅವರು ನಿಮ್ಮ ಜೀವದ ಸ್ನೇಹಿತರಿದ್ದರೆ ನೀವು ಹೋಗಿರಿ. ನನಗೇನು ಅದರ ಗೊಡವೆ?

**ಭೀಮರಾವ**—ಏನೇ, ನನ್ನ ದೆಸೆಯಿಂದಾದರೂ ನಡೆ.

**ಸರಸ್ವತಿ**—ನಿಮ್ಮ ದೆಸೆಯಿಂದಾದರೂ ನಾನು ಏಕೆ ಬರಲಿ? ನನ್ನ ಮಾತನ್ನು ನೀವು ಕೇಳಿದರೆ ನಿಮ್ಮ ಮಾತು ನಾನು ಕೇಳೇನು!

**ಭೀಮರಾವ**—ಪ್ರಿಯೇ, ಇಂದಿನತನಕ ನಿನ್ನ ಯಾವ ಮಾತನ್ನು ನಾನು ಕೇಳದೆ ಬಿಟ್ಟಿದ್ದೇನೆ ?

**ಸರಸ್ವತಿ**— ಪೀತಾಂಬರದ ದೆಸೆಯಿಂದ ಬಾಯಿ ತೆಗೆದು ನನ್ನ ಹಲ್ಲುಗಳೆಲ್ಲ ಸವೆದು ಹೋದವು. ಪೀತಾಂಬರವನ್ನು ನೀವು ತರಿಸಿ ಕೊಟ್ಟಿರೇನು ?

**ಭೀಮರಾವ**—ಅದರ ಬಗ್ಗೆ ನಿನಗೇಕೆ ಚಿಂತೆ ? ನಾನು ಈಗಿಂದೀಗಲೇ ಹೋಗಿ ಅವನ್ನು ತರುತ್ತೇನೆ.

**ಸರಸ್ವತಿ**—ಆ ಮೇಲೆ ಬರಲಿಕ್ಕೆ ನನ್ನದೆಲ್ಲಿ ಅಡ್ಡಿಯದೆ ?

**ಭೀಮರಾವ**—ನೀಲಾ, ನೀನು ಮುಂದೆ ಹೋಗು. ನಾವು ಈಗೀಗ ನಿನ್ನ ಹಿಂದ್ಹಿಂದೇ ಬರುತ್ತೇವೆ.

**ನೀಲಾ**—ತೀವ್ರದಿಂದ ಹೊರಟು ಬನ್ನಿರಿ. ತಡ ಮಾಡಬೇಡಿರಿ. ರಂಗರಾಯರ ಮನೆಗೆ ಬರಬೇಕು. ತಿಳಿಯಿತಿರೇ? ಬರುವಾಗ ಅಪ್ಪನವರ ಬಾಯಿ ಒಂದಿಷ್ಟು ಜೆಲ್ಲಬೆಲ್ಲಸು ಮಾಡಿಕೊಂಡು ಬನ್ನಿರಿ. ( **ನಗುತ್ತ ಹೋಗುತ್ತಾನೆ.** )

**ಭೀಮರಾವ**—ಪ್ರಿಯೇ! ನಾನು ಪೇಟೆಯಲ್ಲಿ ಹೋಗಿ ಈಗಲೇ ನೀನು ಹೇಳಿದಂಥ ಪೀತಾಂಬರವನ್ನು ತರುತ್ತೇನೆ. ನಾನು ಬರುವವರೆಗೆ ನೀನು ಮನೆಯಲ್ಲಿ ಬಹಳ ಎಚ್ಚರಿಕೆಯಿಂದಿರು.

**ಸರಸ್ವತಿ**—ಚಿಂತೆಯನ್ನು ಬಿಟ್ಟು ಹೋಗಬೇಕು. ಮನೆಯನ್ನು ಕಾಯಲಿಕ್ಕೆ ನಾನು ನಿಮ್ಮಕಿಂತಲು ಹೆಚ್ಚು ಗಟ್ಟಿಯಿರುತ್ತೇನೆ. ( **ಅವನು ಹೊರಗೆ ಹೋಗುತ್ತಾನೆ; ಅವಳು ಒಳಗ ಹೋಗುತ್ತಾಳೆ.** )

---

## ಪ್ರವೇಶ ೩ನೇದ್ದು.

### ( ರಂಗರಾಯನ ದಿವಾಣಖಾನೆ. )

(**ರಂಗರಾವ, ಪ್ರತಾಪರಾವ, ಭೀಮರಾವ, ಮತ್ತು ವೆಂಕಣ್ಣನಾಯಕ ಈ ನಾಲ್ಕು ಮಂದಿ ಹೊರಗೆ ಕುಳಿತುಕೊಂಡಿರುತ್ತಾರೆ. ಒಳಭಾಗಕ್ಕೆ ತಾರಕಾ, ಕಮಲಾ, ಮತ್ತು ಸರಸ್ವತಿ ಈ ಮೂರು ಮಂದಿ ನಿಂತುಕೊಂಡಿರುತ್ತಾರೆ. ತಮ್ಮಾ ಮತ್ತು ನೀಲಾ ಈ ಇಬ್ಬರು ಒಂದು ಮಗ್ಗಲಿಗೆ ನಿಂತಿರುತ್ತಾರೆ.**)

**ಪ್ರತಾಪರಾವ**—ಈ ಹೊತ್ತಿನ ಮೇಜವಾನಿಯ ಸಮಾರಂಭವು ಬಹಳ ಉತ್ತಮ ರೀತಿಯಿಂದ ಜರುಗಿತು. ಗಾಯನವಾದರೂ ಬಹಳ ಉತ್ತಮವಾ

ಬಿತ್ತು. ಈ ಹೊತ್ತಿನ ಆನಂದಕ್ಕೆ ಪಾರವೇ ಇಲ್ಲ. ಏಕೆ ಭೀಮರಾವ, ಈ ಹೊತ್ತಿನ ಮೇಜವಾನಿಯ ವ್ಯವಸ್ಥೆಯು ನಿಮ್ಮ ಮನಸ್ಸಿಗೆ ಬಂತಷ್ಟೇ ?

**ಭೀಮರಾವ**—ವ್ಯವಸ್ಥೆಯನ್ನು ಏನು ಕೇಳುವದದೆ ? ಬಹಳ ಉತ್ತಮ ವಿತ್ತು. ಇದನ್ನೆಲ್ಲ ಅತ್ತಿಗಿಯವರೇ ಮಾಡಿದ್ದರೇನು ?

**ಪ್ರತಾಪರಾವ**—ಇದರಲ್ಲಿ ಸಂಶಯವೇನು ?

**ಭೀಮರಾವ**—ಇದು ನನಗಂತೂ ನಿಜವಾಗಿ ತೋರುವದಿಲ್ಲ.

**ತ್ರಾಟಿಕಾ**—ಅದೇಕೆ ಭಾವನವರೇ ?

**ರಂಗರಾವ**—ಏಕೆಂಬುವದನ್ನು ಇಡೀ ಜಗತ್ತೇ ಹೇಳೀತು.

**ತ್ರಾಟಿಕಾ**—ಸರಿ. ಸರಿ. ನೀವೇ ಹೀಗೆಂದ ಬಳಿಕ ಜನರಿಗೇನು ದೋಷ ಕೊಡತಕ್ಕದ್ದು ?

**ಕಮಲಾ**—ಅಕ್ಕಾ, ಇದರಲ್ಲಿ ಅನ್ಯಾಯವೇನಾಯಿತು ?

**ತ್ರಾಟಿಕಾ**—ತಂಗೀ, ನನ್ನ ಹಿಂದಿನ ತಪ್ಪುಗಳಿಗಾಗಿ ನೀನು ನನ್ನಮೇಲೆ ಈಗ ಸೇಡು ತೀರಿಸಿಕೊಳ್ಳುವಂತೆ ಕಾಣುತ್ತದೆ.

**ಸರಸ್ವತಿ**--ಇವರೆಲ್ಲರು ಅನ್ನುವದು ನಿಜವಿದ್ದರೆ ನಿನ್ನದೂ ನನ್ನದೂ ಸ್ವಭಾವವು ಒಂದೇ ಆದಂತಾಯಿತು. ಇದಕ್ಕಾಗಿ ನನಗೆ ಬಹಳ ಸಂತೋಷವಾಗುತ್ತದೆ.

**ಪ್ರತಾಪರಾವ**—ಭೀಮರಾವ, ನಾನು ಹೇಳಿದ ಮಾತ್ರೆಯನ್ನು ನೀವು ಬಹಳ ಸಾರೆ ಉಪಯೋಗ ಮಾಡಬೇಕಾಗುತ್ತಿದ್ದೀತು. ಯಾಕಂದರೆ ನಿಮ್ಮರೋಗ ಇತರ ಯಾವ ಉಪಾಯದಿಂದಲೂ ಮಣಿಯುವಂತೆ ಕಾಣಿಸುವದಿಲ್ಲ. (ಸರಸ್ವತಿಯ ಕಡೆಗೆ ನೋಡುತ್ತಾನೆ.)

**ಸರಸ್ವತಿ**—ಏನಂದಿರಿ ? ನೀವು ಯಾರನ್ನುದ್ದೇಶಿಸಿ ಮಾತಾಡಿದಿರಿ ? ನನಗೇನು ? ನಾನು ಯಾರ ಅಳಕಿನಲ್ಲಿಯೂ ಇರುವದಿಲ್ಲ.

**ಪ್ರತಾಪರಾವ**—ಅತ್ತಿಗೀ, ನೀವು ಅಂಥ ಗಟ್ಟಿಗರೇ ಇರುತ್ತೀರಿ. ಆದರೆ ನನ್ನ ಮಾತಿನ ಉದ್ದೇಶವು ನಿಮ್ಮ ಲಕ್ಷ್ಯದಲ್ಲಿ ಬರಲಿಲ್ಲ ! ನನ್ನ ಮಿತ್ರನಾದ ಭೀಮರಾಯನು ಸ್ವಭಾವತಃ ಬಹಳ ಪುಕ್ಕನಿದ್ದು ಅವನಿಗೆ ನಿಮ್ಮಂಥ ಗಟ್ಟಿಗರ ಬೆಂಬಲವು ದೊರಕಿರುವದರಿಂದ ಅವನು ಇನ್ನುಮುಂದೆ ಎರಡನೆಯವರಿಗೆ ಅಂಜಿ ನಡೆಯುವ ಕಾರಣವಿಲ್ಲೆಂದು ಅಂದೆನು.

**ಸರಸ್ವತಿ**—ಹೀಗೋ ? ತಮ್ಮ ಮೇಲಿಂದಲೇ ಜಗತ್ತಿನ ಪರೀಕ್ಷೆ ಮಾಡುವದು ಜನರೊಳಗೆ ಪರಿಪಾಠವು ಬಿದ್ದಿರುತ್ತದೆ. ಏನು ರಂಗಕ್ಕಾ, ಹೌದಲ್ಲೋ ?

**ಲಕ್ಷ್ಮೀಪತಿರಾವ**—ಪುರಾಣಿಕಾ, ಇದೇನು ಹುಚ್ಚತನವು ?

**ನರಸಿಂಗರಾವ**—ರಂಗರಾಯಾ, ನೀನು ಯಾವಾಗಿನಿಂದ ಪುರಾಣಿಕ ನಾದೆ ? ವೆಂಕಣ್ಣನಾಯಕನು ರಂಗರಾಯನು ! ಆ ಮುದುಕನು ನಿನ್ನ ತಂದೆಯು ! ಮತ್ತು ನೀನು ಪುರಾಣಿಕನು ! ಇದರ ಇಂಗಿತವಾದರೂ ಏನು ? ಈ ಊರೊಳ ಗಿನ ಜನರೆಲ್ಲ ಹುಚ್ಚರೇ ಆಗಿರುವಂತೆ ನನಗೆ ತೋರುತ್ತದೆ.

**ರಂಗರಾವ**—ಎಲ್ಲರೂ ಹುಚ್ಚರಾಗಿಲ್ಲ. ಆದರೆ ನಾನು ಮಾತ್ರ ಕೆಲವು ಕಾಲ ಹುಚ್ಚನಾಗಿದ್ದೆನು. ಅದಾದರೂ ಇವರ ಚಿಕ್ಕ ಮಗಳ ದೆಸೆಯಿಂದಲೇ ಆಗಿದ್ದೆನು.

**ಲಕ್ಷ್ಮೀಪತಿರಾವ**—ಹಾಗಾದರೆ ನೀನು ನಿಜವಾದ ಪುರಾಣಿಕನಲ್ಲವೇನು?

**ರಂಗರಾವ**—ನನ್ನ ಪುರಾಣಿಕನ ಅವತಾರವು ಇನ್ನು ಪೂರ್ಣವಾದಂತಾ ಯಿತು. ನಾನು ಈ ಅವತಾರವನ್ನು ತೆಗೆದುಕೊಂಡಿದ್ದ ಕಾರ್ಯವು ಮುಗಿಯಿತು.

**ನರಸಿಂಗರಾವ**—ಅದು ಯಾವ ಕಾರ್ಯವು ?

**ರಂಗರಾವ** — ಕಮಲೆಯಗೂಡ ಲಗ್ನಮಾಡಿಕೊಳ್ಳುವದೇ ನನ್ನ ಕಾ ರ್ಯವಿತ್ತು.

**ಲಕ್ಷ್ಮೀಪತಿರಾವ**—ಇಲ್ಲೇನಾದರೂ ಮೋಸವಿರಲಿಕ್ಕೇ ಬೇಕು. ನಾನು ರಂಗರಾಯನಿಗೆ ಕಮಲೆಯನ್ನು ಕೊಡುತ್ತೇನೆಂದು ಮಾತ್ರ ಒಪ್ಪಿಕೊಂಡಿದ್ದೆನು. ಆದರೆ ಲಗ್ನಮುಹೂರ್ತವನ್ನು ಇನ್ನೂ ಗೊತ್ತು ಮಾಡಿದ್ದಿಲ್ಲ. ಅಂದಮೇಲೆ ಕಾರ್ಯವು ಮುಗಿಯಿತೆಂದು ಹೇಗೆ ಅನ್ನುತ್ತೀರಿ ?

**ರಂಗರಾವ**—ನಾನೇ ರಂಗರಾಯನು ! ನೀವು ರಂಗರಾಯನೆಂದು ತಿಳಿ ದುಕೊಂಡಿದ್ದ ಗೃಹಸ್ಥನು ನನ್ನ ಬಾಲ್ಯಸ್ನೇಹಿತನಾದ ವೆಂಕಣ್ಣನಾಯಕನು. ನೀವು ನಿನ್ನಿನ ದಿವಸವೇ ನನಗೆ ರಂಗರಾಯನಿಗೆ ಕಮಲೆಯನ್ನು ಕೊಡುವದು ನಿಶ್ಚಯ ವಾಗಿರುತ್ತದೆಂದು ಅಬಚಿಗೆ ತಿಳಿಸಲಿಕ್ಕೆ ಹೇಳಿದ್ದಿರಿ. ಆ ನಿಮ್ಮ ಅಪ್ಪಣೆಯ ಪ್ರಕಾರ ನಾನು ಕಮಲೆಯನ್ನು ನಿನ್ನಿನ ದಿವಸವೇ ಲಗ್ನ ಮಾಡಿಕೊಂಡೆನು. ಅಬಚಿಯು ಆ ಕಾಲಕ್ಕೆ ಇದ್ದಳು. ಬೇಕಾದರೆ ಅವಳನ್ನು ವಿಚಾರಿಸಬಹುದು.

**ಲಕ್ಷ್ಮೀಪತಿರಾವ**—ಇದರಲ್ಲಿ ಏನೋ ಕಪಟವಿರುತ್ತದೆ. ನನ್ನನ್ನು ನೀವೆಲ್ಲರು ಈ ಪ್ರಕಾರ ಮೋಸಪಡಿಸಿದಿರೇನು ? ಒಳ್ಳೇದು, ನೋಡಿಕೊಳ್ಳುತ್ತೇನೆ. ನಮ್ಮ ಸರಕಾರದಲ್ಲಿ ಇಂಥ ಅನ್ಯಾಯವು ನಡೆಯಲಿಕ್ಕಿಲ್ಲ. ಕಳ್ಳಾ, ಠಕ್ಕಾ ! ಸ್ವಲ್ಪ

ತಡೆ. ಈಗಲೇ ನಾನು ಪೋಲೀಸರ ಕಡೆಗೆ ಹೋಗುತ್ತೇನೆ. ( ಸಿಟ್ಟಿನಿಂದ ಹೋಗ ಲಾರಂಭಿಸುತ್ತಾನೆ. )

**ನರಸಿಂಗರಾವ**—ಏನಿರಿ, ಲಕ್ಷ್ಮೀಪತಿರಾಯರೇ! ಸ್ವಲ್ಪ ತಡೆಯಿರಿ. ಅವಸರ ಮಾಡಬೇಡಿರಿ. ನಿಮ್ಮ ಕೂದಲುಗಳೂ ಹಣ್ಣಾದವು. ನನ್ನವೂ ಹಣ್ಣಾದವು. ಈ ವಯಸ್ಸಿನಲ್ಲಿ ನಾವು ನಮ್ಮ ನಮ್ಮ ಗೃಹ-ಕಲಾಪವನ್ನು ಬೇರೆಯವರ ಮುಂದೆ ಒಯ್ಯುವದು ಭೂಷಣವಲ್ಲ. ನಮ್ಮ ಹುಡುಗನು ನಿಮ್ಮ ಹುಡುಗೆಯನ್ನು ಲಗ್ನ ಮಾಡಿಕೊಂಡನಷ್ಟೇ ? ಅದುದೆಲ್ಲ ವಿಹಿತವೇ ಸರಿ. ಇದರಲ್ಲಿ ಕೆಡಕೇನಾಯಿತು ? ಅವನು ನಿಮಗೆ ತಿಳಿಸದೆ ಈ ಕಾರ್ಯವನ್ನು ಮಾಡಿದ್ದು ಅಪರಾಧವೆಂಬುದು ನಿಜವು. ಆ ಬಗ್ಗೆ ಅವನ ಕಿವಿ ಹಿಂಡಿದರೆ ತೀರಿತು. ( ರಂಗರಾಯನ ಕಿವಿ ಹಿಂಡಿ ) ಎಲಾ ರಂಗಾ, ಮಾವನವರ ಕಾಲು ಬೀಳು. ಅವರ ಕಾಲು ಗಟ್ಟಿಯಾಗಿ ಹಿಡಿದುಕೋ. ಅವರು ನಿನ್ನನ್ನು ಕ್ಷಮಿಸುವತನಕ ಅವರ ಕಾಲು ಬಿಡಬೇಡ. (ರಂಗರಾಯನು ಲಕ್ಷ್ಮೀಪತಿರಾಯನ ಕಾಲು ಹಿಡಿಯುತ್ತಾನೆ.) ಲಕ್ಷ್ಮೀಪತಿರಾವ, ಇನ್ನು ಮೇಲೆ ಅವನನ್ನು ಕ್ಷಮಿಸಿ ಅವನಿಗೆ ಆಶೀರ್ವಾದ ಕೊಡಿರಿ. ಸಿಟ್ಟಾಗಿ ಪ್ರಯೋಜನವಿಲ್ಲ. ನಿಮ್ಮ ಮಗಳು ತಾನಾಗಿಯೇ ಸಂತೋಷದಿಂದ ಲಗ್ನ ಮಾಡಿಕೊಳ್ಳಲಿಕ್ಕೆ ಹೋದ ಸಂಗತಿಯನ್ನು ಸ್ವಲ್ಪ ಲಕ್ಷ್ಯಕ್ಕೆ ತೆಗೆದುಕೊಂಡು ಬಿಡ್ರಿ. ನೀವು ಹೇಗಾದರೂ ನಿಮ್ಮ ಮಗಳನ್ನು ನನ್ನ ಮಗನಿಗೆ ಕೊಡತಕ್ಕವರೇ ಇದ್ದಿರಿ. ವೆಂಕಣ್ಣನಕಿಂತ ಇವನು ಎಷ್ಟು ಪಾಲಿಗೆ ಉತ್ತಮನಿರುತ್ತಾನೆಂಬುವದನ್ನು ನೀವು ಕಣ್ಣಾರೆ ನೋಡಿಯೇ ಇರುತ್ತೀರಿ. ಆ ಮುದುಕನು ನಿಮ್ಮ ಮಗಳ ಮೇಲೆ ಇಡಿಸುವ ದಾಗೀನೆಗಳ ಸಂಬಂಧದಿಂದ ಕೊಟ್ಟ ವಚನಕ್ಕೆ ನನ್ನ ಸಂಪೂರ್ಣ ಸಮ್ಮತಿಯುಂಟು. ಹೂ. ಬೇಗನೆ ಅವನಿಗೆ ಆಶೀರ್ವಾದ ಮಾಡಿರಿ.

**ಲಕ್ಷ್ಮೀಪತಿರಾವ**—ನಿಮ್ಮ ಮಾತು ಸರಳವಿರುತ್ತದೆ ಇನ್ನು ಅದರ ಬಗ್ಗೆ ಹೆಚ್ಚಿಗೆ ವಿಚಾರ ಮಾಡುವದು ಅವಶ್ಯವಿಲ್ಲ. ರಂಗರಾವ, ಏಳಿರಿ ( ರಂಗರಾಯನನ್ನು ಮೇಲಕ್ಕೆ ಎಬ್ಬಿಸಿ ಅವನಿಗೆ ಆಲಿಂಗನ ಕೊಡುತ್ತಾನೆ. )

**ನರಸಿಂಗರಾವ**—ಇನ್ನು ಹೋಗೋಣ ನಡೆಯಿರಿ. ಆ ವೆಂಕಣ್ಣನ ಕಿವಿಯ ಗದ್ದಿಯನ್ನು ಚೆನ್ನಾಗಿ ಕೀಳೋಣ. ಆ ಮುಗನು ಎಷ್ಟು ನಿರ್ಲಜ್ಜತನದಿಂದ

ನನ್ನ ಗೂಡ ಬಾಯಿ ಬಿಟ್ಟನು ? (ನರಸಿಂಗರಾಯನು ಲಕ್ಷ್ಮೀಪತಿರಾಯನನ್ನು ಒಳಗೆ ಕರೆದು ಕೊಂಡು ಹೋಗುತ್ತಾನೆ.)

**ರಂಗರಾವ**—ಕೊನೆಯ ಪರಿಣಾಮವು ಒಮ್ಮೆ ನೆಟ್ಟಗಾದಂತಾಯಿತು. ಇಂಥ ಮಮತೆಯುಳ್ಳ ತಂದೆಗಳು ಜಗತ್ತಿನಲ್ಲಿ ಎಷ್ಟು ಮಂದಿ ಸಿಕ್ಕಾರು ? ( ಪ್ರತಾಪರಾಯನೂ ತ್ರಾಟಿಕೆಯೂ ಮುಂದೆ ಬರುತ್ತಾರೆ. )

**ತ್ರಾಟಿಕಾ**—ಇನ್ನಾದರೂ ಮನೆಗೆ ಹೋಗೋಣಲ್ಲವೇ ? ನಿಂತು ನಿಂತು ನನ್ನ ಕಾಲು ಸೋತುಹೋದವು. ನಾವು ಇಲ್ಲಿಂದ ಬೇಗನೆ ಹೋಗದಿದ್ದರೆ ನನ್ನ ತೀರ್ಥರೂಪರು ಹೊರಗೆ ಬಂದು ನಮ್ಮಿಬ್ಬರನ್ನೂ ಇಲ್ಲಿ ನೋಡಲಿಕ್ಕಿಲ್ಲವೇ?

**ಪ್ರತಾಪರಾವ**—ಹಾಗಾದರೆ ಒಂದು ಚುಂಬನ ಕೊಡು.

**ತ್ರಾಟಿಕಾ**—( ನಾಚಿಗೊಂಡು ) ಇಲ್ಲೇ ? ದಾರಿಯಲ್ಲೇ ! ಛೀ ! ತಾಯೀ, ನಾಚಿಕೆ ಬರುತ್ತದೆ !

**ಪ್ರತಾಪರಾವ** —ಗಂಡನ ಕೂಡ ಸಹ ನಾಚಿಕೆಯೇ ?

**ತ್ರಾಟಿಕಾ**—ದಾರಿಯಲ್ಲಿ ಈ ರೀತಿ ನಡೆಯುವದು ಹೇಗೆ? ಜನರು ನೋಡಿದರೆ ಏನಂದಾರು ?

**ಪ್ರತಾಪರಾವ** —ಒಳ್ಳೇದು. ಹಾಗಾದರೆ ನಮ್ಮ ಊರಿಗೆ ಹೋಗಿ ನಮ್ಮ ಮನೆಯಲ್ಲಿ ಕೋಣೆಯ ಬಾಗಿಲವನ್ನು ಮುಚ್ಚಿಕೊಂಡು ಕುಳಿತುಕೊಳ್ಳೋಣ ನಡೆ. ಆಮೇಲೆ ನಮ್ಮನ್ನು ಯಾರು ನೋಡಲಿಕ್ಕೆ ಬರುತ್ತಾರೆ ? ನೀಲಾ, ಕುದುರೆಯನ್ನು ತೆಗೆದುಕೊಂಡು ಬಾ. ಹಿಂದಕ್ಕೆ ತಿರುಗೋಣ.

**ತ್ರಾಟಿಕಾ**—ತಿರುಗಿ ಮೊದಲಿನ ಹಾಡು ಬಂತೇನು ? ಎರಡನೆಯವರನ್ನು ಪೀಡಿಸುವದಕ್ಕೆ ನಿಮಗೆ ಬೇಸರಿಕೆಯಾದರೂ ಹೇಗೆ ಬರುವದಿಲ್ಲ ? ಒಳ್ಳೇದು. ನಿಮ್ಮ ಮನಸ್ಸಿಗೆ ಬಂದಂತೇ ಆಗಲಿ. ನನ್ನದೇನು ಗಂಟು ಹೋಗುತ್ತದೆ? ನಿಮಗೇ ಜನರು ಹೆಸರಿಡುವರು.

**ಪ್ರತಾಪರಾವ**—ಹುಚ್ಚೀ, ಈ ಪ್ರಕಾರ ನಾನು ಹೇಳಿದಂತೆ ನೀನು ಕೇಳಲಿಕ್ಕೆ ಹತ್ತಿದ ಬಳಿಕ ನಿನ್ನನ್ನು ಪೀಡಿಸುವವರಾರು ? ತಡವಾಗಿ ಆದರೂ ಚಿಂತಿಲ್ಲ, ನಿನಗೆ ಬುದ್ಧಿ ಬಂತು. ಇದನ್ನು ಕಂಡು ನನಗೆ ಅತ್ಯಾನಂದವಾಗಿರುತ್ತದೆ, ಬಲ್ಲಿಯಾ ? ಇನ್ನು ಮೇಲೆ ನಮ್ಮಿಬ್ಬರ ಸೌಖ್ಯಕ್ಕೆ ಎಣೆಯೇ ಇಲ್ಲ. ಪ್ರತಾಪರಾಯನು ನಿನ್ನ ದಾಸನೆಂತಲೇ ತಿಳಿ. ( **ಹೋಗುತ್ತಾರೆ.** )

## ಪ್ರವೇಶ ೨ನೇದ್ದು.

( ನೀಲನು ದಾರಿಯಿಂದ ಹೋಗುತ್ತಾನೆ. )

**ನೀಲಾ**—ಧನಿಯುರಂತೂ ನನಗೆ ಭೀಮರಾಯರ ಮನೆಗೆ ಹೋಗಿ ಅವರಿಗೂ ಅವರ ಕುಟುಂಬಕ್ಕೂ ಲಕ್ಷ್ಮೀಪತಿರಾಯರ ಮನೆಯ ಮೇಜವಾನಿಗೆ ಬನ್ನಿರೆಂದು ತಿಳಿಸಲಿಕ್ಕೆ ಹೇಳಿರುತ್ತಾರೆ. ಇವತ್ತೆ ಎಷ್ಟು ಆನಂದವಿನೋದಗಳು ನಡೆಯುವವೆಂದು ಹೇಳಲಿ ? ರಂಗರಾಯನ ತಂದೆಯು ಬಹಳ ಬುದ್ಧಿವಂತನು ಇರುತ್ತಾನೆ. ಅಂತೇ ಅವನು ಲಕ್ಷ್ಮೀಪತಿರಾಯರ ಸಿಟ್ಟನ್ನು ಒಂದು ಗಳಿಗೆಯಲ್ಲಿ ಒಳ್ಳೇ ಹಂಚಿಕೆಯಿಂದ ಇಳಿಸಿಬಿಟ್ಟನು ! ಆದುದರಿಂದ ಅವರು ಎಲ್ಲರಿಗೂ ದೊಡ್ಡದೊಂದು ಮೇಜವಾನಿಯನ್ನು ಮಾಡಿಸಿರುತ್ತಾರೆ. ಈ ಮೇಜವಾನಿಗೆ ರಂಗರಾಯರು, ಭೀಮರಾಯರು ಮತ್ತು ನಮ್ಮ ಧನಿಯರು ಈ ಪ್ರಕಾರ ಮೂರೂ ಮಂದಿ ತಾವು ಹೊಸದಾಗಿ ಮಾಡಿಕೊಂಡ ಹೆಂಡಂದಿರನ್ನು ಕರಕೊಂಡು ಬರತಕ್ಕವರಿದ್ದಾರೆ. ಅಂದಮೇಲೆ ಕೇಳುವದೇನದ ? ( ಮುಂದೆ ನೋಡಿ ) ಆ. ಇದೇ ಅಲ್ಲೇನು ಭೀಮರಾಯರ ಮನೆಯು ? ಇಲ್ಲೇ ನಮ್ಮ ಧನಿಯರು ಮೊದಲಿಗೆ ನನಗೆ ಬೈದಿದ್ದರು. ಹಾಗೂ ತಮಗೆ ಚನ್ನಾಗಿ ಮಾತಾಡಲಿಕ್ಕೆ ಬಾರದ್ದಕ್ಕಾಗಿ ನನಗೆ ಧಪಾ ಧಪಾ ಹಾಕಿಕೊಂಡು ದನ ಬಡಿದಂತೆ ಬಡಿದರು. ನಡೆ ಇನ್ನು. ಒಳಗೆ ಹೋಗಿ ಭೀಮರಾಯರಿಗೆ ತಿಳಿಸಿ ಬರೋಣ. ( ಒಳಗೆ ಹಣಿಕಿ ಹಾಕುತ್ತಾನೆ. ) ಆದರೆ ಇಷ್ಟು ಬೇಗನೆ ಒಳಗೆ ಹೋಗಬಾರದು. ಇಲ್ಲೇ ನಿಂತುಕೊಂಡು ಭೀಮರಾಯರು ತಮ್ಮ ಹೊಸ ಹೆಂಡತಿಯ ಸಂಗಡ ಏನೇನು ಮಾತಾಡುತ್ತಾರೆ, ಕೇಳೋಣ. ಅಂದರೆ ಅವರು ತಮ್ಮ ಹೊಸ ಹೆಂಡತಿಯ ಮೇಲೆ ಎಷ್ಟು ಪ್ರೀತಿ ಮಾಡುತ್ತಾರೆಂಬುವದಾದರೂ ನನಗೆ ತಿಳಿದೀತು. ಆ. ಒಳಗೆ ಭೀಮರಾಯರು ಯಾರೋ ಒಬ್ಬ ಹೆಂಗಸಿನ ಕೂಡ ಒದರೊದರಿ ಮಾತಾಡಲಿಕ್ಕೆ ಆರಂಭಿಸಿರುತ್ತಾರೆ. ಅವರಿಬ್ಬರೂ ಜಗಳಾಡುತ್ತಿರುವಂತೆ ತೋರುತ್ತದೆ. ಇಲ್ಲಿಯೇ ಮೂಲೆಯಲ್ಲಿ ನಿಂತುಕೊಂಡು ಏನೇನು ಚಮತ್ಕಾರ ನಡೆಯುವದೋ ನೋಡೋಣ. ( ಮೂಲೆಯೊಳಗೆ ನಿಂತುಕೊಳ್ಳುತ್ತಾನೆ. )

( ಭೀಮರಾಯನೂ ಸರಸ್ವತಿಯೂ ಬರುತ್ತಾರೆ. )

**ಸರಸ್ವತಿ**— ಇದು ನನ್ನ ಮನಸ್ಸಿಗೆ ಎಷ್ಟೆಷ್ಟೂ ಬರುವದಿಲ್ಲ.

**ಭೀಮರಾವ**—ಪ್ರಿಯೇ, ನಾನು ಹೇಳುವದನ್ನು ಸ್ವಲ್ಪ ಕೇಳಿಕೋ. ನಾಳೆ ಆ ಮಾರವಾಡಿಯ ಅಂಗಡಿಗೆ ಹೋಗಿ ಉತ್ತಮವಾದ ಜರದ ಪೀತಾಂಬರವನ್ನು ತಂದು ಕೊಡುತ್ತೇನೆ. ( ಆಕೆಯ ಗದ್ದಕ್ಕೆ ಕೈ ಹಚ್ಚುತ್ತಾನೆ. )

**ಸರಸ್ವತಿ**—(**ಕೈ ಬಿಸಾಟಿ**) ಅಹಹಾ ! ನನ್ನ ಮೇಲೆ ಎಷ್ಟು ಉಪಕಾರವನ್ನು ಮಾಡುತ್ತೀರಿ, ನೋಡಿದಿರಾ ? ಆದರೆ ಮೊದಲು ದೂರು ನಿಂತು ಮಾತಾಡಿರಿ.. ನನಗೆ ಈ ಹೊತ್ತೇ ಆ ಪೀತಾಂಬರವನ್ನು ತಂದು ಕೊಡದಿದ್ದರೆ ನಿಮಗೆ ಊಟವು ವರ್ಜವಾದೀತು. ಇದನ್ನು ನೀವು ಚೆನ್ನಾಗಿ ಲಕ್ಷದಲ್ಲಿಟ್ಟುಕೊಳ್ಳಿರಿ.

**ಭೀಮರಾವ**—ಪ್ರಿಯೇ, ಹೀಗೇಕೆ ಸಿಟ್ಟಾಗುತ್ತೀ? ನಿನಗೆ ಹೊರತಾದ್ದು ಏನಿರುತ್ತದೆ? ನೀನು ನನ್ನ ಪ್ರಾಣಪದಕಳಲ್ಲವೇ ?(**ಅವಳ ಬೆನ್ನಮೇಲೆ ಕೈಯನ್ನಿಡುತ್ತಾನೆ**)

**ಸರಸ್ವತಿ**—ಹ. ನನ್ನ ಮೈಗೆಕೈಹಚ್ಚಬೇಡಿರಿ! ಎಚ್ಚರಿಕೆಯಿಂದ ಮಾತಾಡಿರಿ! ನನಗೆಇಂಥ ಒಣ ಉಪಚಾರದ ಮಾತು ಸೇರುವದಿಲ್ಲ. ಈಹೊತ್ತು ಪೀತಾಂಬರವು ಬರುತ್ತದೋ ಇಲ್ಲೋ ಮುಂಚೆ ಹೇಳಿರಿ.

**ಭೀಮರಾವ**— (ತನ್ನಷ್ಟಕ್ಕೆ) ಏನು ಕಿರಿಕಿರಿಯಪ್ಪಾ ಇದು ? (**ಬಹಿರಂಗವಾಗಿ**) ಪ್ರಿಯೇ!, ಈಗೀಗ ಏನು ಹೇಳಿದೆ ?

**ಸರಸ್ವತಿ**— ನಿಮಗೇನು ಕಿವಿಗಳಿರುತ್ತವೋ ಇಲ್ಲೋ ? ಇಷ್ಟೊತ್ತಿನ ತನಕ ನಾನು ಗಂಟಲ ಹರಕೊಂಡೆನು. ಅಂದರೂ ಮತ್ತೆ 'ಏನಂದೀ' ಎಂತ ಕೇಳುತ್ತೀರಿ ? (**ಅವನ ಕಿವಿಯ ಹತ್ತರ ಗಟ್ಟಿಯಾಗಿ**) ಪೀತಾಂಬರವು ಬಾರದಿದ್ದರೆ ಈ ಹೊತ್ತು ನಿಮಗೆ ಊಟವು ದೊರಕಲಿಕ್ಕಿಲ್ಲ. ಈಗಾದರೂ ಚೆನ್ನಾಗಿ ಕೇಳಿಸಿತೇ ?

**ಭೀಮರಾವ**— (**ಗಟ್ಟಿಯಾಗಿ**) ಒಳ್ಳೇದೊಳ್ಳೇದು. ಕೇಳಿಸಿತು. ( **ತನ್ನಷ್ಟಕ್ಕೆ** ) ಈಗೊಂದಿಷ್ಟು ನಾನು ಸಿಟ್ಟಿಗೆದ್ದಂತೆ ತೋರಿಸಬೇಕು. (**ಬಹಿರಂಗವಾಗಿ**) ಏನು ನಿರ್ಲಜ್ಜೆಯಾದೆ ನೀನು ? ನನ್ನ ಕಿವಿಯೊಳಗೆ ಎಷ್ಟು ಕೂಗಿ ಹೇಳಿದೆ? ನಾನೇನೂ ಕಿವುಡನಾಗಿಲ್ಲ

**ಸರಸ್ವತಿ**—ಹೀಗೇನು ? ನಿಮಗೆ ಸಿಟ್ಟು ಬಂತೆಂದು ಕಾಣಿಸುತ್ತದೆ. ಹಾಗಾದರೆ ನಿಮಗೂ ಸಿಟ್ಟು ಗೊತ್ತಿರುತ್ತದೆಂದು ನನಗೆ ತಿಳಿದಂತಾಯಿತು. ನಿಮಗೆ ಸಿಟ್ಟು ಮತ್ತು ನಾಚಿಕೆಗಳು ಗೊತ್ತಿಲ್ಲೆಂದು ತಿಳಿದುಕೊಂಡಿದ್ದೆನು.! ಅಹಹ! ನಿಮ್ಮ ಕಿವಿಗಳು ಕೇಳಿಸುತ್ತವೇನು ? ಒಳ್ಳೇದೇ ಆಯಿತು. ನನಗೆ ನಿಮ್ಮ ಕಿವಿಯಲ್ಲಿ ಎಣ್ಣೆಯನ್ನು ಕಾಸಿ ಹಾಕುವ ಶ್ರಮವು ಉಳಿದಂತಾಯಿತು. (**ಹೌರಗೆ ಅವನ ಕಿವಿಯನ್ನು ಹಿಡಿಯುತ್ತಾಳೆ.** )

**ಭೀಮರಾವ**— (**ತನ್ನಷ್ಟಕ್ಕೆ**) ಇವಳು ಬರ ಬರುತ್ತ ಬಹಳ ಅಧಿಕ ಪ್ರಸಂಗಿಯಾಗುತ್ತ ನಡೆದಳು. ಇವಳಿಗೆ ಹದಿನಾಲ್ಕನೇ ರತ್ನವನ್ನು ತೋರಿಸಲಿಕ್ಕೇಬೇಕು.

ಜಯ ಪ್ರತಾಪರಾವ! ( ಚಾಬೂಕು ತೆಗೆದುಕೊಳ್ಳುತ್ತಾನೆ. ) ಏನೇ, ದೂರ ಸರಿದು ನಿಂತುಕೋ ನನ್ನ ಮೈಗೆ ಕೈ ಹಚ್ಚಬೇಡ. ಬಹಳ ಎಚ್ಚರಕೆಯಿಂದ ಇರು. ನನ್ನ ಕೈಯ್ಯಲ್ಲಿ ಏನುಂಟೆಂಬವನ್ನು ನೋಡಿದೆಯಾ ? ಈಗಿಂದೀಗ ನಿನ್ನ ಮೈ ತೊಗಲು ಸುಲಿದು ಬಿಟ್ಟೇನು !

**ಸರಸ್ವತಿ**— ಅಬಬಬ ! ಏನಂದಿರಿ ? ಇನ್ನೊಮ್ಮೆ ಗಟ್ಟಿಸಿ ಮಾತಾಡಿರಿ. ನನಗಿಷ್ಟು ಕೇಳಿಸಲಿ. ಮೊದಲು ಗಟ್ಟಿಸಿ ಮಾತಾಡಲಿಕ್ಕೆ ಕಲಿಯಿರಿ. ಗಟ್ಟಿಸಿ ಮಾತಾಡಲಿಕ್ಕೆ ಕಲಿತ ಬಳಿಕ ಬಾಯಿ ಕಸುವಿನಿಂದ ಒಂದು ವೇಳೆ ಮೈಯಲ್ಲಿ ಸಹ ಕಸುವು ಬರಬಹುದು. ಆದುದರಿಂದ ನೀವು ಮುಂಚೆ ಮಾತಾಡಿದ್ದನ್ನು ತಿರುಗಿ ಮಾತಾಡಿರಿ ಕೇಳೋಣ.

**ಭೀಮರಾವ**— ಹಾ ಹಾ ಸಾಕು. ಬಾಯಿ ಮುಚ್ಚು. ನೀನು ದಿನಾಲು ನೋಡುವವನು ನಾನಲ್ಲ. ನನ್ನ ಸಿಟ್ಟು ಬಹಳ ಕೆಟ್ಟದು ಇರುತ್ತದೆ. ಅದು ಒಮ್ಮೆ ಬಂತೆಂದರೆ ಶಾಂತವಾಗುವದೇ ಇಲ್ಲ. ಅದು ಪ್ರತ್ಯಕ್ಷ ಬೆಂಕಿಯೆಂತಲೇ ತಿಳಿ.

**ಸರಸ್ವತಿ** —ಅವ್ವಯ್ಯಾ, ಹೀಗೇನು? ಹಾಗಾದರೆ ನಾನು ಆ ನಿಮ್ಮ ಸಿಟ್ಟನ್ನು ಅವಶ್ಯವಾಗಿ ನೋಡಬೇಕೆನ್ನುತ್ತೇನೆ. ಈಗ ಬಂದ ಪ್ರಸಂಗವು ತಪ್ಪಿಹೋದರೆ ಪುನಃ ನಿಮ್ಮ ಸಿಟ್ಟು ಯಾವಾಗ ನನ್ನ ದೃಷ್ಟಿಗೆ ಬೀಳುತ್ತದೋ ತಿಳಿಯದು! ಎಷ್ಟು ಹರಿಕೆಹೊತ್ತರೂ ಬಾರದೆ ಇದ್ದಂಥ ಪ್ರಸಂಗವು ಅನಾಯಾಸವಾಗಿ ಬಂದಿರಲು ನಾನು ನಿಮ್ಮ ಸಿಟ್ಟನ್ನು ಏಕೆ ಒಮ್ಮೆ ಕಾಣಬಾರದು ?

**ಭೀಮರಾವ**— ( ತನ್ನಷ್ಟಕ್ಕೆ ) ಇವಳು ಇನ್ನೂ ಸುಮ್ಮನಾಗುವದಿಲ್ಲ. ಚಾಬೂಕವನ್ನು ಇನ್ನು ಉಪಯೋಗಿಸಲೇಬೇಕು. ಪ್ರತಾಪರಾಯಾ, ಈ ಕೆಲಸದಲ್ಲಿ ನೀನೇ ನನ್ನ ಗುರು. ಆದುದರಿಂದ ನನಗೆ ಸಾಮರ್ಥ್ಯವನ್ನು ಕೊಡಲಿಕ್ಕೆ ಬೇಗನೇ ಪ್ರಸನ್ನನಾಗು.

**ಸರಸ್ವತಿ**— ಏಕೆ ಸುಮ್ಮನೆ ತಡಮಾಡುತ್ತೀರಿ ? ನಿಮ್ಮ ಬೆಂಕಿಯಂಥ ಸಿಟ್ಟು ಇನ್ನೊಂದು ಗಳಿಗೆಯ ತರುವಾಯ ಬೂದಿಯಾದೀತು !

**ಭೀಮರಾವ**—ನೀನು ನನ್ನ ಮಾತು ಕೇಳದಿದ್ದರೆ ಈ ಇನಾಮು ತೆಗೆದುಕೋ. ( ಹೀಗೆಂದು ಚಾಬೂಕದಿಂದ ಹೊಡೆಯಲಿಕ್ಕೆ ಆರಂಭಿಸುತ್ತಾನೆ. ಅಷ್ಟರಲ್ಲಿ ಅವಳು ಅವನ ಕೈ ಹಿಡಿದು ಚಾಬೂಕವನ್ನು ಕಸಿದುಕೊಳ್ಳುತ್ತಾಳೆ. )

**ಸರಸ್ವತಿ**— ಇದಕ್ಕೇ ಏನು ನೀವು ಇನಾಮು ಎಂದು ಹೇಳಿದಿರಿ ? ನಾನು ಹೇಳಿಕೇಳಿ ಅಬಲೆಯಿರುತ್ತೇನೆ. ಇಂಥ ಇನಾಮು ತೆಗೆದುಕೊಂಡು ನಾನೇನು ಮಾಡತಕ್ಕದ್ದದೆ ? ಅದನ್ನು ನೀವೇ ತೆಗೆದುಕೊಳ್ಳಿರಿ. ( ಹೀಗೆಂದು ಅವನಿಗೆ ಚಾಬೂಕಿನಿಂದ ಹೊಡೆಯುತ್ತಾಳೆ. )

**ಭೀಮರಾವ**— ಸತ್ತೆ. ಸತ್ತೆ. ಓಡಿ ಬನ್ನಿರಿ. ಓಡಿ ಬನ್ನಿರಿ. ನನ್ನನ್ನು ಈ ರಾಕ್ಷಸಿಯು ಕೊಲ್ಲುತ್ತಾಳೆ. ಬೇಗನೆ ಬಂದು ಇವಳ ಕೈಯಿಂದ ನನ್ನನ್ನುಬಿಡಿಸಿರಿ.

**ನೀಲಾ**— ಈ ಸಮಯವು ಒಳಗೆ ಹೋಗಲಿಕ್ಕೆ ಬಹಳ ನೆಟ್ಟಗೆ ಇರುತ್ತದೆ. (**ಒಳಗೆ ಹೋಗಿ**) ನಾನು ಬಂದೆ ನೋಡಿರಿ. ಯಾರವನು ಕಳ್ಳಾ? ನಿನ್ನ ಮೈ ಎಲವು ಈಗ ಪುಡಿ ಪುಡಿ ಮಾಡಿ ಬಿಡುತ್ತೇನೆ. ( ಭೀಮರಾಯನ ಮೇಲೆ ಎರಡು ಮೂರು ಸಾರೆ ಚಾಬೂಕವನ್ನು ಛಟ್ ಛಟ್ ಎಂದು ಹಾರಿಸುತ್ತಾನೆ. )

**ಸರಸ್ವತಿ**—ಎಲಾ ಹೆಣದ ಮೋರೆಯುವನೇ, ನಾವು ಗಂಡಹೆಂಡಿರು ಏಕಾಂತದಲ್ಲಿ ಪ್ರೇಮಕಲಹವನ್ನು ಮಾಡುತ್ತಿರುವಾಗ ಇಲ್ಲಿ ನಮ್ಮ ನಡುವೆ ಬರಲಿಕ್ಕೆ ನಿನಗೆ ಯಾರು ಹೇಳಿದರು ? ಹಾಗಾದರೆ ನೀನು ಮೊದಲಿಗೆ ಈ ಇನಾಮು ತೆಗೆದುಕೋ ! ( ಅವನಿಗೆ ಹೊಡೆಯುತ್ತಾಳೆ. )

**ಭೀಮರಾವ**— ಪ್ರಿಯೇ, ಶಹಬಾಸ ! ಹೀಗೆಯೇ ಇರಬೇಕು. ಯಾಕಲೇ, ನಾವು ಏಕಾಂತವಲ್ಲಿರುವಾಗ ನೀನು ಏಕೆ ಬಂದೆ ?

**ನೀಲಾ**— ಬೇಡಿರಿ. ಬೇಡಿರಿ. ಬಹಳಾಯಿತು. ನೀವು ನಮ್ಮ ತ್ರಾಟಿಕಮ್ಮನವರಂತೆಯೇ ಇದ್ದೀರಿ. ಭೀಮರಾಯರೇ, ಒಳ್ಳೇ ಗಟ್ಟಿಮುಟ್ಟ ಅವ್ವನವರನ್ನು ಹುಡುಕಿ ಮಾಡಿಕೊಂಡಿರುತ್ತೀರಿ!

**ಸರಸ್ವತಿ**— ಕಳ್ಳಾ, ಯಾವಾಕಿಯೋ ತ್ರಾಟಿಕಾ ? ನನ್ನನ್ನು ಎರಡನೇ ಹೆಂಗಸರಂತೆ ತಿಳಿದೇನು ? ನಿಲ್ಲು. ನಿನಗೆ ಸ್ವಲ್ಪ ಬುದ್ಧೀ ಕಲಿಸುತ್ತೇನೆ. (**ಚಾಬೂಕು ಎತ್ತುತ್ತಾಳೆ.** )

**ನೀಲಾ**— ಅವ್ವನವರೇ, ತಪ್ಪಾಯಿತರಿ, ತಪ್ಪಾಯಿತು. ನೀವು ತ್ರಾಟಿಕಮ್ಮ ಏಕೆ ಆದೀರಿ ? ಅವರ ಇಮ್ಮಡಿ ಮುಮ್ಮಡಿ ಇರುತ್ತೀರಿ. ಅಂದಮೇಲೆ ನಿಮ್ಮ ಮುಂದೆ ನನ್ನ ಮಾತು ಏನು ನಡೆದೀತು ?

**ಭೀಮರಾವ**—(**ತನ್ನ ಕೈಮೈ ಒತ್ತಿಕೊಳ್ಳುತ್ತ**) ನೀಲಾ ! ನೀನು ಇಲ್ಲಿ ಹೇಗೆ ಬಂದೆ ?

**ನೀಲಾ—ನೆಟ್ಟಗೆ ಬಾಗಿಲದೊಳಗಿಂದ ಹಾದು ಬಂದೆನು !**

**ಭೀಮರಾವ**—ಹಾಗಲ್ಲ, ನೀನು ಇಲ್ಲಿ ಏಕೆ ಬಂದೆ?

**ನೀಲಾ**—ಹೀಗೆ ಕೇಳಬಾರದರೀ ಅಪ್ಪಾ? ನೀವು ನಮ್ಮ ಧನಿಯರ ಗೆಳೆಯರಿದ್ದೀರಿ. ಅದಕ್ಕಾಗಿಯೇ ಅವರು ನಿಮ್ಮನ್ನೂ ಅವ್ವನವರನ್ನೂ ಕಂಡು ಮಾತಾಡಿಸಿ ಬಾ ಎಂದು ನನಗೆ ಹೇಳಿದ್ದರು. ಅದಕ್ಕಾಗಿ ಬಂದೆ. ಅವ್ವನವರನ್ನು ಕಂಡು ಮನಸ್ಸಿಗೆ ಬಹಳ ಹರ್ಷವಾಯಿತು.

**ಸರಸ್ವತಿ**—ನೀಚಾ, ಅಧಮಾ, ನನ್ನ ಹೆಸರು ಪುನಃ ತೆಗಿಯುತ್ತಿಯೇನು?

**ನೀಲಾ**—ನಿಮ್ಮ ಹೆಸರು ನಾನೇಕೆ ತೆಗೆಯಲಿಕ್ಕೆ ಹೋಗಲಿ? ಹಿರಿಯರು ಇಟ್ಟ ಹೆಸರು ಯಾರಿಗಾದರೂ ತೆಗೆಯಲಿಕ್ಕೆ ಆದೀತೇ?

**ಭೀಮರಾವ**—ನೀಲಾ, ನಿನ್ನ ಅಧಿಕ ಪ್ರಸಂಗಿತನ ಮುಗಿಸು. ಇಲ್ಲಿ ಏಕೆ ಬಂದಿದ್ದೆ? ಹೇಳು.

**ನೀಲಾ**—ಬಿಟ್ಟೆ. ಧನಿಯರು ಕಳಿಸಿದ್ದರು. ಅದಕ್ಕಾಗಿ ಬಂದಿದ್ದೆ.

**ಭೀಮರಾವ**—ಪ್ರತಾಪರಾಯನು ಏನು ಹೇಳಿ ಕಳಿಸಿರುತ್ತಾನೆ?

**ನೀಲಾ**—ನಮ್ಮ ಧನಿಯರು ನಿಮಗೂ ಅವ್ವನವರಿಗೂ ಮೇಜವಾನಿಗೆ ಕರೆದಿರುತ್ತಾರೆ. ನಿಮ್ಮಿಬ್ಬರನ್ನೂ ಬಿಟ್ಟು ಬರಬಾರದೆಂತಲೂ, ನಿಮ್ಮಿಬ್ಬರನ್ನು ಮುಂದೆ ಹಾಕಿಕೊಂಡೇ ಬರಬೇಕೆಂತಲೂ ನನಗೆ ಹೇಳಿರುತ್ತಾರೆ.

**ಸರಸ್ವತಿ**—ನಿನ್ನ ಧನಿಯು ಇಷ್ಟು ಉದ್ಧಟನಿರುತ್ತಾನೋ?

**ಭೀಮರಾವ**—ಅದಿರಲಿ ಬಿಡು. ನೀನು ನನ್ನ ಸಂಗಡ ಮೇಜವಾನಿಗೆ ಬರುತ್ತಿಯೋ ಇಲ್ಲೋ?

**ಸರಸ್ವತಿ**—ನಾನೇಕೆ ಬರಲಿ? ನನ್ನಿಂದೇನು ಅಡ್ಡಿಯಾಗಿರುತ್ತದೆ?

**ಭೀಮರಾವ**—ಹಾಗನ್ನಬಾರದು. ದೊಡ್ಡವರು ಪ್ರೀತಿಯಿಂದ ಆಮಂತ್ರಣ ಕಳುಹಿಸಿದ ಬಳಿಕ ನಾವು ಹೋಗದೆ ಇರಬಾರದು. ಇದಲ್ಲದೆ ಪ್ರತಾಪರಾಯನು ನನ್ನ ಜೀವದ ಸ್ನೇಹಿತನಿರುತ್ತಾನೆಂದು ನಿನಗೆ ಗೊತ್ತೇ ಅದೆ.

**ಸರಸ್ವತಿ**—ಅವರು ನಿಮ್ಮ ಜೀವದ ಸ್ನೇಹಿತರಿದ್ದರೆ ನೀವು ಹೋಗಿರಿ. ನನಗೇನು ಅದರ ಗೊಡವೆ?

**ಭೀಮರಾವ**—ಏನೇ, ನನ್ನ ದೆಸೆಯಿಂದಾದರೂ ನಡೆ.

**ಸರಸ್ವತಿ**—ನಿಮ್ಮ ದೆಸೆಯಿಂದಾದರೂ ನಾನು ಏಕೆ ಬರಲಿ? ನನ್ನ ಮಾತನ್ನು ನೀವು ಕೇಳಿದರೆ ನಿಮ್ಮ ಮಾತು ನಾನು ಕೇಳೇನು!

**ಭೀಮರಾವ**— ಪ್ರಿಯೇ, ಇಂದಿನತನಕ ನಿನ್ನ ಯಾವ ಮಾತನ್ನು ನಾನು ಕೇಳದೆ ಬಿಟ್ಟಿದ್ದೇನೆ ?

**ಸರಸ್ವತಿ**— ಪೀತಾಂಬರದ ದೆಸೆಯಿಂದ ಬಾಯಿ ತೆಗೆದು ನನ್ನ ಹಲ್ಲುಗಳೆಲ್ಲ ಸವೆದು ಹೋದವು. ಪೀತಾಂಬರವನ್ನು ನೀವು ತರಿಸಿ ಕೊಟ್ಟಿರೇನು ?

**ಭೀಮರಾವ**— ಅದರ ಬಗ್ಗೆ ನಿನಗೇಕೆ ಚಿಂತೆ ? ನಾನು ಈಗಿಂದೀಗಲೇ ಹೋಗಿ ಅವನ್ನು ತರುತ್ತೇನೆ.

**ಸರಸ್ವತಿ**— ಆ ಮೇಲೆ ಬರಲಿಕ್ಕೆ ನನ್ನದೆಲ್ಲಿ ಅಡ್ಡಿಯದೆ ?

**ಭೀಮರಾವ**— ನೀಲಾ, ನೀನು ಮುಂದೆ ಹೋಗು. ನಾವು ಈಗೀಗ ನಿನ್ನ ಹಿಂದ್ಹಿಂದೇ ಬರುತ್ತೇವೆ.

**ನೀಲಾ**— ತೀವ್ರದಿಂದ ಹೊರಟು ಬನ್ನಿರಿ. ತಡ ಮಾಡಬೇಡಿರಿ. ರಂಗರಾಯರ ಮನೆಗೆ ಬರಬೇಕು. ತಿಳಿಯಿತಿರೇ? ಬರುವಾಗ ಅವ್ವನವರ ಬಾಯಿ ಒಂದಿಷ್ಟು ಜೆಲ್ಲಜೆಲ್ಲಸು ಮಾಡಿಕೊಂಡು ಬನ್ನಿರಿ. ( ನಗುತ್ತ ಹೋಗುತ್ತಾನೆ. )

**ಭೀಮರಾವ**— ಪ್ರಿಯೇ ! ನಾನು ಪೇಟೆಯಲ್ಲಿ ಹೋಗಿ ಈಗಲೇ ನೀನು ಹೇಳಿದಂಥ ಪೀತಾಂಬರವನ್ನು ತರುತ್ತೇನೆ. ನಾನು ಬರುವವರೆಗೆ ನೀನು ಮನೆಯಲ್ಲಿ ಬಹಳ ಎಚ್ಚರಿಕೆಯಿಂದಿರು.

**ಸರಸ್ವತಿ**— ಚಿಂತೆಯನ್ನು ಬಿಟ್ಟು ಹೋಗಬೇಕು. ಮನೆಯನ್ನು ಕಾಯುಲಿಕ್ಕೆ ನಾನು ನಿಮ್ಮ ಕಿಂತಲೂ ಹೆಚ್ಚು ಗಟ್ಟಿಯಿರುತ್ತೇನೆ. (**ಅವನು ಹೊರಗೆ ಹೋಗುತ್ತಾನೆ; ಅವಳು ಒಳಗೆ ಹೋಗುತ್ತಾಳೆ.**)

---

## ಪ್ರವೇಶ ೩ನೇದ್ದು.

### ( ರಂಗರಾಯನ ದಿವಾಣಖಾನೆ. )

(ರಂಗರಾವ, ಪ್ರತಾಪರಾವ, ಭೀಮರಾವ, ಮತ್ತು ವೆಂಕಣ್ಣನಾಯಕ ಈ ನಾಲ್ಕು ಮಂದಿ ಹೊರಗೆ ಕುಳಿತುಕೊಂಡಿರುತ್ತಾರೆ. ಒಳಭಾಗಕ್ಕೆ ತಾರಕಾ, ಕಮಲಾ, ಮತ್ತು ಸರಸ್ವತಿ ಈ ಮೂರು ಮಂದಿ ನಿಂತುಕೊಂಡಿರುತ್ತಾರೆ. ಕಮ್ಮಾ ಮತ್ತು ನೀಲಾ ಈ ಇಬ್ಬರು ಒಂದು ಮಗ್ಗಲಿಗೆ ನಿಂತಿರುತ್ತಾರೆ.)

**ಪ್ರತಾಪರಾವ**— ಈ ಹೊತ್ತಿನ ಮೇಜವಾನಿಯ ಸಮಾರಂಭವು ಬಹಳ ಉತ್ತಮ ರೀತಿಯಿಂದ ಜರುಗಿತು. ಗಾಯನವಾದರೂ ಬಹಳ ಉತ್ತಮವಾ

ಯಿತು. ಈ ಹೊತ್ತಿನ ಆನಂದಕ್ಕೆ ಪಾರವೇ ಇಲ್ಲ. ಏಕೆ ಭೀಮರಾವ, ಈ ಹೊತ್ತಿನ ಮೇಜವಾನಿಯು ವ್ಯವಸ್ಥೆಯು ನಿಮ್ಮ ಮನಸ್ಸಿಗೆ ಬಂತಷ್ಟೇ ?

**ಭೀಮರಾವ**—ವ್ಯವಸ್ಥೆಯನ್ನು ಏನು ಕೇಳುವದದೆ ? ಬಹಳ ಉತ್ತಮ ವಿತ್ತು. ಇದನ್ನೆಲ್ಲ ಅತ್ತಿಗಿಯವರೇ ಮಾಡಿದ್ದರೇನು ?

**ಪ್ರತಾಪರಾವ**—ಇದರಲ್ಲಿ ಸಂಶಯವೇನು ?

**ಭೀಮರಾವ**—ಇದು ನನಗಂತೂ ನಿಜವಾಗಿ ತೋರುವದಿಲ್ಲ.

**ತ್ರಾಟಿಕಾ**—ಅದೇಕೆ ಭಾವನವರೇ ?

**ರಂಗರಾವ**—ಏಕೆಂಬುವದನ್ನು ಇಡೀ ಜಗತ್ತೇ ಹೇಳೀತು.

**ತ್ರಾಟಿಕಾ**—ಸರಿ. ಸರಿ. ನೀವೇ ಹೀಗೆಂದ ಬಳಿಕ ಜನರಿಗೇನು ದೋಷ ಕೊಡತಕ್ಕದ್ದು ?

**ಕಮಲಾ**—ಅಕ್ಕಾ, ಇದರಲ್ಲಿ ಅನ್ಯಾಯವೇನಾಯಿತು ?

**ತ್ರಾಟಿಕಾ**—ತಂಗೀ, ನನ್ನ ಹಿಂದಿನ ತಪ್ಪುಗಳಿಗಾಗಿ ನೀನು ನನ್ನಮೇಲೆ ಈಗ ಸೇಡು ತೀರಿಸಿಕೊಳ್ಳುವಂತೆ ಕಾಣುತ್ತದೆ.

**ಸರಸ್ವತಿ**--ಇವರೆಲ್ಲರು ಅನ್ನುವದು ನಿಜವಿದ್ದರೆ ನಿನ್ನದೂ ನನ್ನದೂ ಸ್ವಭಾವವು ಒಂದೇ ಆದಂತಾಯಿತು. ಇದಕ್ಕಾಗಿ ನನಗೆ ಬಹಳ ಸಂತೋಷವಾಗುತ್ತದೆ.

**ಪ್ರತಾಪರಾವ**—ಭೀಮರಾವ, ನಾನು ಹೇಳಿದ ಮಾತ್ರೆಯನ್ನು ನೀವು ಬಹಳ ಸಾರೆ ಉಪಯೋಗ ಮಾಡಬೇಕಾಗುತ್ತಿದ್ದೀತು. ಯಾಕಂದರೆ ನಿಮ್ಮರೋಗ ಇತರ ಯಾವ ಉಪಾಯದಿಂದಲೂ ಮಣಿಯುವಂತೆ ಕಾಣಿಸುವದಿಲ್ಲ. (ಸರಸ್ವತಿಯ ಕಡೆಗೆ ನೋಡುತ್ತಾನೆ.)

**ಸರಸ್ವತಿ**—ಏನಂದಿರಿ ? ನೀವು ಯಾರನ್ನುದ್ದೇಶಿಸಿ ಮಾತಾಡಿದಿರಿ ? ನನಗೇನು ? ನಾನು ಯಾರ ಅಳಕಿನಲ್ಲಿಯೂ ಇರುವದಿಲ್ಲ.

**ಪ್ರತಾಪರಾವ**—ಅತ್ತಿಗೀ, ನೀವು ಅಂಥ ಗಟ್ಟಿಗರೇ ಇರುತ್ತೀರಿ. ಆದರೆ ನನ್ನ ಮಾತಿನ ಉದ್ದೇಶವು ನಿಮ್ಮ ಲಕ್ಷ್ಯದಲ್ಲಿ ಬರಲಿಲ್ಲ ! ನನ್ನ ಮಿತ್ರನಾದ ಭೀಮರಾಯನು ಸ್ವಭಾವತಃ ಬಹಳ ಪುಕ್ಕನಿದ್ದು ಅವನಿಗೆ ನಿಮ್ಮಂಥ ಗಟ್ಟಿಗರ ಬೆಂಬಲವು ದೊರಕಿರುವದರಿಂದ ಅವನು ಇನ್ನುಮುಂದೆ ಎರಡನೆಯವರಿಗೆ ಅಂಜಿ ನಡೆಯುವ ಕಾರಣವಿಲ್ಲೆಂದು ಅಂದೆನು.

**ಸರಸ್ವತಿ**—ಹೀಗೋ ? ತಮ್ಮ ಮೇಲಿಂದಲೇ ಜಗತ್ತಿನ ಪರೀಕ್ಷೆ ಮಾಡುವದು ಜನರೊಳಗೆ ಪರಿಪಾಠವು ಬಿದ್ದಿರುತ್ತದೆ. ಏನು ರಂಗಕ್ಕಾ, ಹೌದಲ್ಲೋ ?

**ತ್ರ್ರಾಟಿಕಾ**— ತಾಯಿ, ಇದೆಲ್ಲ ಅವರವರ ಅನುಭವದ ಮೇಲಿಂದಲೇ ಗೊತ್ತಾಗಬೇಕು. ಭಾವನವರ ಅನುಭವವೇನಿರುತ್ತದೆಂಬುವನ್ನು ನಾನು ಹೇಗೆ ಹೇಳಲಿ ?

**ಪ್ರತಾಪರಾವ**—ಶಹಬಾಸ, ರಂಗೂ! ನೀನು ಬಹಳ ಚತುರತನದಿಂದ ಉತ್ತರವನ್ನು ಕೊಟ್ಟೆ. ಇದು ನೋಡು, ಭೀಮರಾಯರು ತಮ್ಮ ಮೋರೆಯನ್ನು ಹೇಗೆ ಕಪ್ಪಗೆ ಮಾಡಿರುತ್ತಾರೆ ? ಇದರ ಮೇಲಿಂದ ಅವರ ಅನುಭವವು ಏನಿರುತ್ತ ದೆಂಬುದು ತಾನೇ ಸ್ಪಷ್ಟವಾಗುವದು.

**ಸರಸ್ವತಿ**--ಅಹಹ ! ಹೇಗೆ ಸುಧಾರಿಸಿಕೊಳ್ಳುತ್ತಾರೆ ನೋಡಿರಿ! ನಮ್ಮ ವರಲ್ಲಿ ಇಂಥ ತಿಳುವಳಿಕೆಯು ಇಲ್ಲ. ಆದರೆ ಭಾವನವರೇ, ನೀವು ಎಷ್ಟು ಸುಧಾ ರಿಸಿಕೊಂಡರೂ ನಿಜವಿದ್ದದ್ದು ಮಾಜುವದಿಲ್ಲ.

**ರಂಗರಾವ**--(ನಗುತ್ತ) ಪ್ರತಾಪರಾವ, ಈ ಮಾತಿನ ಪೆಟ್ಟು ನಿಮಗೂ ತಾಕಿದಂತಾಯಿತು !

**ಭೀಮರಾವ**—ರಂಗರಾವ! ನೀವು ಸುಮ್ಮನೇ ಅವಳ ಮಾತು ಕಿವಿ ಯಿಂದ ಕೇಳುತ್ತ ಕೂಡ್ರಿರಿ. ನಡುವೆ ಮಾತಾಡಿ ಏಕೆ ಅವಳನ್ನು ಹುರಿದುಂಬಿ ಸುತ್ತೀರಿ ?

**ಸರಸ್ವತಿ**— ಅಹಹಾ ! ನಾನೇನು ಸುಳ್ಳು ಮಾತಾಡಬೇಕಾಗಿರುತ್ತದೆ? ಪ್ರತಾಪರಾಯರಿಗೆ ಬಹಳ ಧಿಟ್ಟ ಮತ್ತು ತುಂಟ ಪ್ರಾಣಿಯು ಗಂಟು ಬಿದ್ದಿರುತ್ತಾ ಳೆಂದು ಇಡೀ ಜಗತ್ತಿಗೆ ಗೊತ್ತದೆ. ಆದುದರಿಂದ ಅವರಿಗೆ ಎರಡನೆಯವರೂ ತಮ್ಮಂತೆಯೇ ಇರುತ್ತಾರೆಂದು ಕಾಣುತ್ತಾರೆ. ನಾನು ಹೆಚ್ಚಿನದೇನು ಅನ್ನುತ್ತೇನೆ?

**ಕಮಲೆ** – ಅಕ್ಕಾ, ನಿನ್ನ ಕೊರಳಲ್ಲಿಯೇ ಮಾಲೆಯು ಬಿತ್ತು. ನೀನಾಗಿ ನಿನ್ನ ಅಪ್ರತಿಷ್ಠೆಯನ್ನು ಮಾಡಿಸಿಕೊಳ್ಳುವದು ಏನು ಭೂಷಣವು ?

**ರಂಗರಾವ** – ಕಮಲೇ, ನೀನು ಹೀಗೆ ಮಾತಾಡಬೇಡ. ನಿನ್ನಕಿಂತಲು ಅವಳು ಹಿರಿಯಳಲ್ಲೇ ?

**ತ್ರ್ರಾಟಿಕಾ**—ಮೈದುನರೇ, ಅವಳು ಬೇಕಾದಂತೆ ಮಾತಾಡಲಿ. ನನಗೇನೂ ಅವಳ ಮಾತಿನಿಂದ ದುಃಖವಾಗುವದಿಲ್ಲ. ಆದರೆ ನೀವು ಮಾತ್ರ ಎಚ್ಚರದಿಂದಿರ್ರಿ.

**ಸರಸ್ವತಿ** —ರಂಗಕ್ಕಾ, ಎರಡನೆಯವರಿಗೆ ಎಚ್ಚರದಿಂದ ಇರಲಿಕ್ಕೆ ನೀನಂತೂ ಹೇಳಬಾರದು !

**ಭೀಮರಾವ** — ಶಾಹಬಾಸ. ಪ್ರತಾಪರಾವ, ನನ್ನ ಪ್ರಿಯಳು ಹೇಗೆ ಮಾರ್ಮಿಕ ಭಾಷಣವನ್ನು ಮಾಡಿದಳು ನೋಡಿರಿ! ಇವಕ್ಕೆ ನಿಮ್ಮ ಅರ್ಧಾಂಗಿಯು ಏನು ಉತ್ತರ ಕೊಡುತ್ತಾಳೋ ನೋಡೋಣ.

**ಸರಸ್ವತಿ**—( ಭೀಮರಾಯನಿಗೆ ) ಸಾಕು. ಸಾಕು. ನೀವು ಮಾತ್ರ ನಡುವೆ ಮಾತಾಡಬೇಡಿರಿ.

**ತ್ರಾಟಿಕಾ**— ಭಾವನವರೇ, ನಾನೇನೂ ಉತ್ತರ ಕೊಡುವ ಕಾರಣವಿಲ್ಲ. ಒಂದು ವೇಳೆ ಉತ್ತರ ಕೊಡುವ ಕಾರಣವು ಉಳಿದಿದ್ದರೆ ನೀಲ್ಯಾನನ್ನು ಕರೆಯಲೇನು ? ಅವನು ಏನೇನೋ ಈ ಹೊತ್ತು ಮುಂಜಾನೆ ನಿಮ್ಮಲ್ಲಿ ನಡೆಯಿತೆಂದು ಹೇಳುತ್ತಿದ್ದನು.

**ಭೀಮರಾವ**—(ತನ್ನಷ್ಟಕ್ಕೆ) ಈ ಮಾಲೆಯು ಇನ್ನು ನನ್ನ ಕೊರಳಲ್ಲಿಯೇ ತಿರುಗಿ ಬರುವಂತೆ ಕಾಣುತ್ತದೆ. ನಾವಿನ್ನು ಮನೆಯ ದಾರೀ ಹಿಡಿಯುವದು ಒಳ್ಳೇದು

**ರಂಗರಾವ**— ಭೀಮರಾವ, ಅತ್ತಿಗಿಯು ಏನು ಅನ್ನುತ್ತಾಳೆಂಬುದು ನನಗೆ ಸ್ವಲ್ಪ ತಿಳಿಯಲಿ. ಏಕೆ ಮುಚ್ಚಿಟ್ಟುಕೊಳ್ಳುತ್ತೀರಿ ?

**ಪ್ರತಾಪರಾವ**— ಪಾಪ ! ಅವರಿಗೆ ಕೇಳಬೇಡಿರಿ. ಅವರು ನಾಚಿಕೆಯಿಂದ ಬಾಯಿ ಮುಚ್ಚಿಕೊಂಡು ಸುಮ್ಮನೆ ಕುಳಿತಿರುತ್ತಾರೆ ! ಅವರಿಗೆ ಮುಕ್ಕಲಿಕ್ಕೆ ನಾಲ್ಕು ಅರಳುಕಾಳನ್ನಾದರೂ ತಂದುಕೊಡಿರಿ. ಅಂದರೆ ಅವರು ಬಾಯಿ ತೆರೆದಾರು. ಅವರು ಬಾಯಿ ತೆರೆಯುವ ತನಕ ನಾವು ಸ್ವಲ್ಪ ಧೂಮ್ರಪಾನವನ್ನು ಮಾಡೋಣ.

**ಸರಸ್ವತಿ**— ಅವ್ವಯ್ಯಾ, ಇನ್ನು ಇಲ್ಲಿ ದುರ್ಗಂಧದ ಹೊಗೆಯು ಇಡಗುವದು. ನಾವೆಲ್ಲರೂ ಒಳಗೆ ಹೋಗೋಣ ನಡೆಯಿರಿ.

**ತ್ರಾಟಿಕಾ**— ಹೀಗೇನು ? ಈಗ ನಿಮಗೆ ಒಳಗೆ ಹೋಗುವ ಅಪೇಕ್ಷೆಯಾಯಿತೇನು ? ನಿಮ್ಮ ತಲೆಗೆ ಯಾವ ತರದ ಹೊಗೆಯು ಬಡಿಯಿತೆಂಬುವದು ನನಗೆ ಚೆನ್ನಾಗಿ ತಿಳಿಯಿತು !

**ಕಮಲೆ**—ತಿಳಿದರೆ ನೆಟ್ಟಗಾಯಿತು. ನಡೆಯಿರಿ. ಇನ್ನು ಒಳಗೆ ಹೋಗೋಣ.

**(ಕಮಲಾ, ತ್ರಾಟಿಕಾ ಮತ್ತು ಸರಸ್ವತಿ ಈ ಮೂರು ಮಂದಿ ಒಳಗೆ ಹೋಗುತ್ತಾರೆ.)**

**ಪ್ರತಾಪರಾವ** — (ನಗುತ್ತ) ಈ ಹೆಂಗಸರು ಒಳ್ಳೇ ಯುಕ್ತಿಯನ್ನು ತೆಗೆದು ಹೊರಟು ಹೋದರು ! ಹೆಂಗಸರ ಕೂಡ ನಾವು ವಾದ ಮಾಡುವದರಲ್ಲಿ ಅರ್ಥವಿಲ್ಲ. ಏಕೆಂದರೆ ಆ ವಾದದಲ್ಲಿ ನಾವು ಗೆದ್ದರೂ ಅವರಲ್ಲಿ ಪುರುಷಾರ್ಥವಿಲ್ಲ. ಏಕೆ ವೆಂಕಣ್ಣನಾಯಕರೇ, ನನ್ನ ಮಾತು ನಿಜವು ಹೌವಲ್ಲೋ ? ಏನಿರಿ? ಇಷ್ಟೊತ್ತಿನ ತನಕ ನಿಮ್ಮ ಸಪ್ಪಳವೇ ಇದ್ದಿಲ್ಲ. ನೀವು ಯಾವ ವಿಚಾರದಲ್ಲಿ ನಿಮಗ್ನರಾಗಿದ್ದಿರಿ ? ನಿಮ್ಮ ಪ್ರಯತ್ನದಿಂದಲೇ ಯಾವತ್ತು ಕಾರ್ಯವು ಸಿದ್ಧಿಗೆ ಹೋಗಿದ್ದು ನಿಮಗೆ ಸ್ವತಃ ಏನೂ ಲಾಭವಾಗಲಿಲ್ಲವೆಂದು ನೀವು ವ್ಯಸನದಲ್ಲಿರುವಿರೋ ?

**ವೆಂಕಣ್ಣನಾಯಕ** — ಛೇ. ಹಾಗಲ್ಲ. ನಾನೆಂದಿಗೂ ಈ ಪ್ರಕಾರದ ವಿಚಾರವನ್ನು ಮನಸ್ಸಿನಲ್ಲಿ ತರುವವನಲ್ಲ. ಆದರೆ ಈ ಮೂರೂ ಮಂದಿ ಹೆಂಗಸರು ಒಬ್ಬರಿಗಿಂತ ಇನ್ನೊಬ್ಬರು ಹೆಚ್ಚು ಜಗಳಗಂಟರಿರುವದನ್ನು ನೋಡಿ ನನ್ನ ಮನಸ್ಸಿಗೆ ಬಹಳ ವಿಷಾದವಾಗಿತ್ತು. ಆದರೆ ಕಡೆಗೆ ನಮ್ಮ ರಂಗರಾಯರ ಕುಟುಂಬವೇ ಹೆಚ್ಚು ಸೌಮ್ಯವಿರುತ್ತಾಳೆಂದು ನೋಡಿ ನನಗೆ ಸಮಾಧಾನವಾಯಿತು.

**ಪ್ರತಾಪರಾವ** — ಬಹಿರಂಗದ ಸೊಬಗಿನಿಂದ ಭ್ರಾಂತಿಗೊಳ್ಳಬೇಡಿರಿ. ಅಂತರಂಗದ ಸ್ಥಿತಿಯು ಬಹಿರಂಗದಿಂದ ಭಿನ್ನವಿರುತ್ತದೆ.

**ರಂಗರಾವ** — ಆ ಪ್ರಕಾರ ರಂಗಕ್ಕನ ಬಗ್ಗೆ ಇರುವ ಸಂಭವವು ಎಷ್ಟೇಷ್ಟೂ ಇಲ್ಲ !!

**ಭೀಮರಾವ** — ರಂಗರಾವ, ಬಹಳೇ ಯೋಗ್ಯವಾಗಿ ಮಾತಾಡಿದಿರಿ! ನನಗೂ ಅದರಂತೇ ಕಾಣುತ್ತದೆ.

**ಪ್ರತಾಪರಾವ** — ಭೀಮರಾಯರೇ, ನೀವೂ ಈ ಮಾತಿಗೆ ಅನುಮತಿಸುವಿರೇನು ? ಒಳ್ಳೇದು. ನಿಮ್ಮಿಬ್ಬರ ಮಾತು ಮುಗಿಯಿತೋ ಇಲ್ಲೋ? ನಿಮಗೆ ನನ್ನ ರಂಗೂನ ಪರೀಕ್ಷೆಯು ಚೆನ್ನಾಗಿ ಆಗೇ ಇಲ್ಲ! ಕೈಯೊಳಗೆ ಕನ್ನಡಿಯು ಇರಲಿಕ್ಕಾಗಿ ನೀರೊಳಗೆ ಏಕೆ ಮೋರೆಯನ್ನು ನೋಡಿಕೊಳ್ಳಬೇಕು ? ಜಿದ್ದು ಕಟ್ಟಿರಿ. ನಾವು ಮೂರೂ ಮಂದಿ ಈಗಿಂದೀಗಲೇ ನಮ್ಮ ನಮ್ಮ ಹೆಂಡಂದಿರನ್ನು ಕರೆಸಿ ಯಾರ ಹೆಂಡತಿಯು ತನ್ನ ಗಂಡನಿಗೆ ಹೆಚ್ಚು ವಿಧೇಯತ್ವದಿಂದ ನಡೆಯುತ್ತಾಳೆಂಬದರ ಪರೀಕ್ಷೆಯನ್ನು ಮಾಡೋಣ. ಯಾವಳು ಕರೆಸಿದ ಕೂಡಲೆ ಬಂದು ತನ್ನ ಗಂಡನು ಹೇಳಿದ ಅಪ್ಪಣೆಯನ್ನು ಶಿರಸಾಮಾನ್ಯ ಮಾಡುತ್ತಾಳೋ ಅವಳ ಗಂಡನು ಜಿದ್ದಿನಲ್ಲಿ ಗೆದ್ದನೆಂದು ತಿಳಿಮಕೊಳ್ಳುವಾ. ಇದಕ್ಕೆ ನಿಮ್ಮ ಸಮ್ಮತಿಯುಂಟೋ ?

**ರಂಗರಾವ**— ಒಹೋ, ಇದಕ್ಕೆ ನನ್ನ ಪೂರ್ಣ ಸಮ್ಮತಿಯದೆ. ಆದರೆ ಜಿಮ್ದು ಎಷ್ಟು ಕಟ್ಟುವದು ?

**ಭೀಮರಾವ**— ೧೦೦ ರೂಪಾಯಿ ಕಟ್ಟೋಣ.

**ಪ್ರತಾಪರಾವ**— ಛೀ. ಟಗರು ಇಲ್ಲವೆ ಕೋಳಿ ಕಾದಾಡಿಸುವವರು ಇಷ್ಟು ಸಣ್ಣ ಜಿದ್ದು ಕಟ್ಟುತ್ತಾರೆ. ನಾನೇನೂ ನನ್ನ ಹೆಂಡತಿಯ ಬೆಲೆಯನ್ನು ಇಷ್ಟು ಕಡಿಮೆ ಮಾಡುವದಿಲ್ಲ. ಕನಿಷ್ಟಪಕ್ಷಕ್ಕೆ ಇದರ ಇಪ್ಪತ್ತುಪಟ್ಟು ಕಟ್ಟಿರಿ.

**ರಂಗರಾವ** – ಓಹೋ, ಹಾಗೇ ಆಗಲಿ. ನಮ್ಮದೇನು ಹೋಗುತ್ತದೆ ? ನೀವೇ ಮೊದಲಿಗೆ ನಿಮ್ಮ ವಿಚಾರವನ್ನು ಚೆನ್ನಾಗಿ ಮಾಡಿಕೊಳ್ಳಿರಿ.

**ಭೀಮರಾವ**—ಪ್ರತಾಪರಾವ, ನಿಮ್ಮಂತೇ ಆಗಲಿ.

**ಪ್ರತಾಪರಾವ**—ರಂಗರಾವ, ನನ್ನ ಬಗ್ಗೆ ನೀವೇನೂ ಚಿಂತೆ ಮಾಡುವ ಕಾರಣವಿಲ್ಲ ! ಈಗೇನೂ ಆ ರೂಪಾಯಿಗಳು ನಿಮ್ಮ ಕಿಸೆಯೊಳಗೆ ಬಂದು ಬಿದ್ದ ವೆಂಮ ತಿಳಿದುಕೊಳ್ಳಬೇಡಿರಿ.

**ಭೀಮರಾವ**—( ತನ್ನಷ್ಟಕ್ಕೆ ) ಜಿದ್ದಿನ ಮಾತು ಹೊರಟದ್ದು ಬಹಳ ಕೆಟ್ಟ ದಾಯಿತು. ನಾನು ಏನಾದರೂ ಯುಕ್ತಿಯನ್ನು ತೆಗೆದು ಇಲ್ಲಿಂದ ಗಚ್ಚು ಮಾಡು ವದು ಒಳ್ಳೇದು. ನಮ್ಮಾಕೆಯು ತ್ರಾಟಿಕೆಯನ್ನು ಸಹ ಹಿಂದಕ್ಕೆ ಸರಿಸಿ ಬಿಡು ವಳೆಂಬದರಲ್ಲಿ ಸಂಶಯವಿಲ್ಲ. ( ಬಹಿರಂಗವಾಗಿ ) ಮಿತ್ರರೇ, ಈಗ ರಾತ್ರಿಯು ಬಹಳ ವಾಯಿತು. ಈ ವಿಚಾರವನ್ನು ನಾಳಿನ ತನಕ ಮುಂದಕ್ಕೆ ಹಾಕಿದರೆ ನಡೆಯಲಿ ಕ್ಕಿಲ್ಲೇನು ?

**ವೆಂಕಣ್ಣನಾಯಕ**—ಯಾಕರಿ? ನೀವು ಸ್ವಲ್ಪ ಹಿಂದಕ್ಕೆ ಸರಿದುಕೊಳ್ಳು ವಂತೆ ಕಾಣುತ್ತದೆ !

**ಭೀಮರಾವ**—ಹಾಗೇನೂ ಅಲ್ಲ. ನಿನ್ನೆ ರಾತ್ರಿ ನಾನು ನಿದ್ರೆಗೆಟ್ಟಿದ್ದ ರಿಂದ ಈಗ ನನಗೆ ನಿದ್ರೆಯು ಬಹಳ ಬಂದಿರುತ್ತದೆ. ಈ ಕಾರಣದಿಂದ ಮಾತ್ರ ನಾನು ಆ ಪ್ರಕಾರ ಸೂಚಿಸಿದೆನು.

**ಪ್ರತಾಪರಾವ**— ಭೀಮರಾವ, ಅದೆಲ್ಲ ಇರಲಿ ಬಿಡಿರಿ. ಇದೊಂದು ರಾತ್ರಿ ಹೆಚ್ಚಿಗೆ ನಿದ್ರೆ ಕಟ್ಟಿದರೆ ನೀವೇನೂ ಬೇನೆ ಬೀಳುವದಿಲ್ಲ. ಇದಲ್ಲದೆ ಮೊದಲು ಅತ್ತಿಗೆಯವರು ಇಲ್ಲಿಂದ ಹೊರಡಬೇಕಷ್ಟೇ ?

**ಭೀಮರಾವ**—(ತನ್ನಷ್ಟಕ್ಕೆ) ಅದು ನಿಜವು.

**ವೆಂಕಣ್ಣನಾಯಕ**— ಒಳ್ಳೇದು. ಮೊದಲಿಗೆ ಕರೆಸುವವರಾರು ?

**ರಂಗರಾವ**—ನಾನು. (ತನ್ನ ಆಳನ್ನುದ್ದೇಶಿಸಿ) ತಮ್ಮಾ, ನೀನು ಹೋಗಿ ನನ್ನ ಅರ್ಧಾಂಗಿಗೆ ಸ್ವಲ್ಪ ಇತ್ತ ಕಡೆಗೆ ಬರಲಿಕ್ಕೆ ಹೇಳು.

**ತಮ್ಮಾ**—ಹೂ. ಹಾಗೇ ಮಾಡುತ್ತೇನೆ. (ಹೋಗುತ್ತಾನೆ.)

**ವೆಂಕಣ್ಣನಾಯಕ**—ರಂಗರಾವ, ನಿಮ್ಮ ಜಿದ್ದಿನಲ್ಲಿ ನನ್ನದೂ ಅರ್ಧ ಪಾಲು ಇರಲಿ.

**ರಂಗರಾವ**—ಛೀ, ಛೀ. ನನಗೆ ಯಾರದೂ ಪಾಲು ಗೀಲು ಬೇಡ. ('ತಮ್ಮಾ'ನು ತಿರುಗಿ ಬರುತ್ತಾನೆ.) ಯಾಕೋ ಅವಳು ಎಲ್ಲಿದ್ದಾಳೆ ?

**ತಮ್ಮಾ**—ನಾನು ಅವ್ವನವರ ಹತ್ತರ ಹೋಗಿ ನೀವು ಕರೆಯುತ್ತೀರೆಂದು ತಿಳಿಸಿದೆನು. ಅವರು ತಮಗೆ ಕೆಲಸವದೆ, ತಾವು ಈಗ ಬರುವದಿಲ್ಲೆಂದು ಹೇಳಿದರು.

**ಪ್ರತಾಪರಾವ**—ಛೀ. ಛೀ. ಹಾಗೆಂದಿಗೂ ಅವಳು ಅಂದಿರಲಿಕ್ಕಿಲ್ಲ ! ಏಕೆ ರಂಗರಾವ ? "ನೀವೇ ಮೊದಲಿಗೆ ನಿಮ್ಮ ವಿಚಾರವನ್ನು ಚೆನ್ನಾಗಿ ಮಾಡಿಕೊಳ್ಳಿರಿ!" "ನನಗೆ ಯಾರದೂ ಪಾಲುಗೀಲು ಬೇಡ" ಎಂಬ ಶಬ್ದಗಳು ನಿಮ್ಮ ನೆನಪಿನಲ್ಲಿರುತ್ತವೇನು ? ನಿಮ್ಮ ಹೆಂಡತಿಯು ಈಗ ಎಂಥಾ ವಿನಯದ ಉತ್ತರವನ್ನು ಹೇಳಿ ಕಳುಹಿಸಿದಳು !

**ವೆಂಕಣ್ಣನಾಯಕ**—ಪ್ರತಾಪರಾವ ! ಅವಳು ಕಳುಹಿಸಿದ ಉತ್ತರದಲ್ಲೇನೂ ಅವಿನಯವಿಲ್ಲ. ಬಹಳ ಮಾಡಿ ಅವಳಿಗೆ ಕೆಲಸವಿರಬಹುದು ಅಂತೇ ಅವಳು ಬಂದಿರಲಿಕ್ಕಿಲ್ಲ. ನಿಮ್ಮವರು ಇಷ್ಟು ಸರಳ ಉತ್ತರವನ್ನು ಮೊದಲಿಗೆ ಹೇಳಿ ಕಳುಹಿಸಲಿ, ನೋಡೋಣ.

**ಪ್ರತಾಪರಾವ**—ನೀವು ಬಹಳ ಚೆನ್ನಾಗಿ ಮಾತಾಡಿದಿರಿ ! ನಿಮಗೆ ನಿಮ್ಮ ಮಿತ್ರನ ಮತ್ತು ನಿಮ್ಮ ಅತ್ತಿಗೆಯ ಅಭಿಮಾನವಿರುವದು ಸ್ವಾಭಾವಿಕವದೆ. ನೀವೇ ಇಷ್ಟೊಂದು ಶ್ರಮಮಾಡಿ ಅವರ ದಾಂಪತ್ಯವನ್ನು ಕೂಡಿಸಿ ಕೊಟ್ಟವರು. ಅಂದ ಮೇಲೆ ನೀವು ಅವರ ಅಭಿಮಾನ ಹಿಡಿಯುವದು ಸಹಜವೇ ಸರಿ. ಇರಲಿ. ಭೀಮರಾವ, ಇನ್ನು ಮೇಲೆ ನಿಮ್ಮ ಕುಟುಂಬದ ಪರೀಕ್ಷೆಯಾಗಲಿ.

**ಭೀಮರಾವ**—(ತನ್ನಷ್ಟಕ್ಕೆ) ಇನ್ನು ನನ್ನ ಅವಮಾನವಾಗುವ ಹೊತ್ತು ಬಂತು. ಆದರೆ ಅಂಜುವದರಿಂದ ಉಪಯೋಗವೇನು? (ಬಹಿರಂಗವಾಗಿ) ಉಃ ಆ ಬಗ್ಗೆ ಸಂಶಯವೇ ಬೇಡ. ಕರೆಕಳಿಸುವದೊಂದೇ ಅವಕಾಶವು. ಆಕೆಯು ಬಂದೇ ಬರು

ತ್ತಾಳೆ. ನೀಲಾ, ಹೋಗು. ಆಕೆಗೆ ಅಗತ್ಯವಾಗಿ ಹೊರಟು ಬಾ ಎಂದು ಹೇಳು. ಇಲ್ಲಿ ಬಹಳ ಅಗತ್ಯದ ಕೆಲಸವಿರುತ್ತದೆಂದು ತಿಳಿಸು. (ನೀಲನು ಹೋಗುತ್ತಾನೆ.)

**ಪ್ರತಾಪರಾವ**–'ಅಗತ್ಯವಾಗಿ ಹೊರಟು ಬಾ'ವುತ್ತು 'ಅಗತ್ಯದ ಕೆಲಸ' ಎಂದು ಹೇಳಿ ಕಳುಹಿಸಿದ ಬಳಿಕ ನಿಮ್ಮ ಹೆಂಡತಿಯು ಬಾರದೆ ಹೇಗೆ ನಿಂತಾಳು? 'ಕೈಜೋಡಿಸಿ ಬೇಡಿಕೊಳ್ಳುತ್ತೇನೆ' ಎಂದು ಹೇಳುವದೊಂದೇ ಉಳಿಯಿತು!

**ಭೀಮರಾವ**--ಪ್ರತಾಪರಾವ! ಚೇಷ್ಟೆಯನ್ನು ಮಾಡಬೇಡಿರಿ. ನಿಮ್ಮವಳಿಗೆ ಮಾತ್ರ ಇಷ್ಟರಿಂದಲೇ ಸಾಕಾಗಲಿಕ್ಕಿಲ್ಲ. ನೀವು ನೆಲಕ್ಕೆ ಮೂಗು ಹಚ್ಚಿ ಸಾಷ್ಟಾಂಗ ನಮಸ್ಕಾರ ಹಾಕಬೇಕಾದೀತು! ತಿಳಿಯಿತೋ? (ನೀಲನು ಬರುತ್ತಾನೆ) ಯಾಕೋ, ಬಂದಳೇನು?

**ನೀಲಾ**-- ನಿಮಗೇನಾದರೂ ಚೇಷ್ಟೆಯನ್ನು ಮಾಡಬೇಕಾಗಿದ್ದೀತು. ಆದುದರಿಂದ ತಾವು ಜೀವ ಹೋದರೂ ಬರುವದಿಲ್ಲ. ಬೇಕಾದರೆ ನೀವೇ ಇಲ್ಲಿ ಬನ್ನಿರೆಂದು ಅವರು ಅನ್ನುತ್ತಾರೆ.

**ಪ್ರತಾಪರಾವ**--ಎಲೆಲೆಲೆ! ಇದಂತೂ ಬಹಳ ಕೆಡಕು! ಇಂಥ ಕೆಟ್ಟ ಉತ್ತರವನ್ನು ಕಿವಿಯಿಂದ ಕೇಳಿ ನಾನು ಜೀವ ಇಡಲಾರೆನು. (ತನ್ನ ಆಳನ್ನುದ್ದೇಶಿಸಿ) ನೀಲಾ, ನೀನು ನಿನ್ನ ಯಜಮಾನತಿಯ ಕಡೆಗೆ ಹೋಗಿ ಈಗಿಂದೀಗಲೇ ಇದ್ದಕ್ಕಿದ್ದಹಾಗೆ ಹೊರಟು ಬಾ ಎಂದು ಹೇಳು.

**ಭೀಮರಾವ**--ಅಪ್ಪಣೆಯನ್ನಂತೂ ಬಹಳ ಸಡಗರದಿಂದ ಕೊಟ್ಟಿದ್ದಾಯಿತು. ಅದರ ಉತ್ತರವೇನು ಬರುತ್ತದೋ ನೋಡಬೇಕು. ಅವಳ ಹೆಸರು ಮೊದಲು ತ್ರಾಟಿಕೆಯು. ಅಂದಮೇಲೆ ಅವಳು ತನ್ನ ಹೆಸರಿಗೆ ತಕ್ಕಂಥ ಉತ್ತರವನ್ನು ಕಳುಹಿಸದೆ ಬಿಟ್ಟಾಳೇ!

**ಪ್ರತಾಪರಾವ**--ಏನು ಉತ್ತರವನ್ನು ಕಳುಹಿಸಬಹುದ ?

**ಭೀಮರಾವ**--ಎರಡನೇದ್ದೇನು? " ನಾನು ಸರ್ವಥಾ ಬರುವದಿಲ್ಲ. ಕರೆಕಳಿಸಿದವರಿಗೆ ಉದ್ಯೋಗವಿಲ್ಲ, ಉಸಾಬರಿಯಿಲ್ಲ. ಅವರಿಗೆ ಸುಮ್ಮನೆ ಕುಳಿತುಕೊಳ್ಳಿರಿ ಎಂದು ಹೇಳು." ಎಂದು ಉತ್ತರ ಕಳುಹಿಸಬಹುದು.

**ಪ್ರತಾಪರಾವ**--ಅಂದರಂತೂ ಮುಗಿದು ಹೋಯಿತು. ನನ್ನ ಹಣೇಬರಹದ ಪರೀಕ್ಷೆಯು ಚೆನ್ನಾಗಿ ಆಯಿತೆಂದು ಅನ್ನಲಿಕ್ಕೆ ಅಡ್ಡಿ ಇಲ್ಲ. ಆದರೆ ಸ್ವಲ್ಪ ಹೊತ್ತು ಸಮಾಧಾನ ಹಿಡಿಯಿರಿ. ಏನಾಗುತ್ತದೋ ನೋಡೋಣ.

**ವೆಂಕಣ್ಣನಾಯಕ**--ಏನಾಶ್ಚರ್ಯವಿದು? ತ್ರಾಟಿಕವ್ವನು ಬಂದಳು!

(ತ್ರಾಟಿಕೆಯು ಬರುತ್ತಾಳೆ.)

**ತ್ರ್ರಾಟಿಕಾ**—(**ಪ್ರತಾಪರಾಯನನ್ನುದ್ದೇಶಿಸಿ**) ಏನಪ್ಪಣೆಯುಂಟು ?

**ಪ್ರತಾಪರಾವ**— ನಿನ್ನ ತಂಗಿಯೂ ಸರಸ್ವತಿಯೂ ಒಳಗೆ ಏನು ಕೆಲಸ ಮಾಡುತ್ತಿರುವರು ?

**ತ್ರಾಟಿಕಾ**—ಏನೂ ಇಲ್ಲ. ಸುಮ್ಮನೇ ಮಾತಾಡುತ್ತ ಕುಳಿತಿರುತ್ತಾರೆ.

**ಪ್ರತಾಪರಾವ**—ಏನರಿ ರಂಗರಾಯರೇ, ಮತ್ತು ಭೀಮರಾಯರೇ, ಇದಕ್ಕೆ ನಿಮ್ಮ ಅಂಬೋಣವೇನಿದೆ ? ವೆಂಕಣ್ಣನಾಯಕರೇ, ನಿಮ್ಮ ಕಮಲವ್ವನು ಎಂಥ ದೊಡ್ಡ ಕೆಲಸದಲ್ಲಿ ತೊಡಗಿರುತ್ತಾಳೆಂಬದನ್ನು ಕಿವಿಯಿಂದ ಕೇಳಿದಿರಾ? ಪ್ರಿಯೇ, ಈಗಲೇ ಹೋಗಿ ಅವರಿಬ್ಬರನ್ನೂ ಇಲ್ಲಿ ಎಳಕೊಂಡು ಬಾ. ಅವರು ಏನು ಹೇಳಿದಾಗ್ಯೂ ಬಿಡಬೇಡ. ಬೇಗನೆ ಹೋಗು. ( **ತ್ರಾಟಿಕೆಯು ಹೋಗುತ್ತಾಳೆ.** )

**ರಂಗರಾವ**—ನಿಶ್ಚಯವಾಗಿ ಇದು ದೊಡ್ಡ ಚಮತ್ಕಾರವು !

**ಭೀಮರಾವ**—ಇದು ಬಹಳ ವಿಲಕ್ಷಣವಾದ ಸಂಗತಿಯು ! ಈ ಪ್ರಕಾರ ತ್ರಾಟಿಕೆಯ ಸ್ವಭಾವದಲ್ಲಿ ಇಷ್ಟು ದೊಡ್ಡ ಭೇದವಾಗಿರುವದರ ಪರಿಣಾಮವು ಕೊನೆಗೆ ಏನಾಗುವದೋ ತಿಳಿಯದು !

**ಪ್ರತಾಪರಾವ**—ಉ: ಈ ಪ್ರಕಾರ ನೀವು ವ್ಯರ್ಥವಾಗಿ ಸಂದೇಹ ಪಡಬೇಡಿರಿ. ಅದರ ಪರಿಣಾಮವು ಏನಾಗುತ್ತದೆಂಬುವದನ್ನು ನಾನು ಹೇಳುತ್ತೇನೆ, ಕೇಳಿರಿ. ಮನೆಯಲ್ಲಿ ಯಾವಾಗಲು ಶಾಂತತೆಯುಂಟಾಗಿ ಗಂಡಹೆಂಡಿರ ಪ್ರೇಮವು ಬೆಳೆದು ನಿಜವಾದ ಸಂಸಾರಸುಖವು ಪ್ರಾಪ್ತವಾಗುವದು. ಗಂಡನ ಆಜ್ಞೆಯನ್ನು ಹೆಂಡತಿಯು ವಿಧೇಯತ್ವದಿಂದ ಪಾಲಿಸುವದು ಸಂಸಾರಸುಖದ ಪೂರ್ಣ ಚಿನ್ಹವಿರುವದು. ತಿಳಿಯಿತೇ !

**ವೆಂಕಣ್ಣನಾಯಕ** - ಪ್ರತಾಪರಾವ, ನೀವೇ ನಿಶ್ಚಯವಾಗಿ ಜಿದ್ದು ಗೆದ್ದಿರಿ. ಇದೇ ಪ್ರಕಾರ ನಿಮಗೆ ಯಾವಾಗಲು ಯಶಸ್ಸು ದೊರೆತು ಸೌಖ್ಯವುಂಟಾಗಲಿ ! ನಿಮ್ಮ ಪತ್ನಿಯ ಸ್ವಭಾವದಲ್ಲಿ ಇಷ್ಟು ಬದಲು ಆಗಿದ್ದೀತೆಂದು ನಾನು ನನ್ನ ಕನಸು ಮನಸಿನಲ್ಲಿ ಸಹ ನೆನೆಸಿದ್ದಿಲ್ಲ. ಇವಳನ್ನು ಈಗ ನೋಡಿದರೆ ಇವಳು ಮೊದಲಿನವಳು ಹೌದೋ ಅಲ್ಲೋ ಎಂದು ಭ್ರಾಂತಿಯಾಗುತ್ತದೆ. ಇವಳು ಈ ಪ್ರಕಾರ ಸುಧಾರಿಸಿದ್ದನ್ನು ನೋಡಿ ಇವಳ ಮುದುಕ ತಂದೆಯಾದ ಲಕ್ಷ್ಮೀಪತಿರಾಯನಿಗೆ ಎಷ್ಟು ಆನಂದವಾದೀತು ?

**ಪ್ರತಾಪರಾವ** – ಸ್ವಲ್ಪ ತಡೆಯಿರಿ. ಇನ್ನೂ ಇವಳ ಸ್ವಭಾವದಲ್ಲಿ ಎಷ್ಟು ಸುಧಾರಣೆಯಾಗಿರುತ್ತದೆಂಬುವದು ನಿಮಗೆ ಇನ್ನೂ ಚೆನ್ನಾಗಿ ಗೊತ್ತಾಗಿಲ್ಲ. ಇವಳು ಈಗ ಅತ್ಯಂತ ಸದ್ಗುಣಿಯೂ ಪತಿಸೇವಾದಕ್ಷಳೂ ಆಗಿರುತ್ತಾಳೆ. ನೀವು ಎಷ್ಟು ಶೋಧಮಾಡಿದರೂ ಇಂಥ ಸ್ತ್ರೀಯು ನಿಮಗೆ ಕಾಣಲಿಕ್ಕಿಲ್ಲ. ಅಗೋ ನೋಡಿರಿ. ಅವಳು ಹಟಮಾರಿ ಹೆಂಗಸರನ್ನು ಪೂರ್ಣವಾಗಿ ಸೋಲಿಸಿ ಸ್ವಂತ ಪಾತಿವ್ರತ್ಯದ ಮತ್ತು ಸದ್ಗುಣದ ವಿಜಯಧ್ವಜವನ್ನು ಹಿಡಿದುಕೊಂಡು ಗಂಧರ್ವಳಂತೆ ಬರುತ್ತಲಿದ್ದಾಳೆ ! ಅವಳು ಜಯಶ್ರೀಯನ್ನು ಸಂಪಾದಿಸಿ ತನಗೆ ಸೋತಂಥ ಶತ್ರುಗಳನ್ನು ಸೆರೆಹಿಡಿದುಕೊಂಡು ಬರುವ ವೀರಾಗ್ರಣಿಯಂತೆ ಈಗ ಕಾಣಿಸುತ್ತಾಳೆ! ಆದರೂ ಅವಳಲ್ಲಿ ಸ್ತ್ರೀಧರ್ಮಕ್ಕೆ ಅನುರೂಪವಾದ ವಿನಯವು ಎಷ್ಟು ತುಂಬಿರುತ್ತದೆ ನೋಡಿರಿ ! ( **ಕಮಲಾ, ಸರಸ್ವತಿ, ಮತ್ತು ತ್ರಾಟಿಕಾ ಬರುತ್ತಾರೆ.** ) ರಂಗೂ, ನೀನು ಈ ಹೊತ್ತು ಎಂಥ ಮಹತ್ವವಾದ ಕಾರ್ಯವನ್ನು ಮಾಡಿದೆ ? ಇದರಿಂದ ನಾನು ಅತ್ಯಂತ ಧನ್ಯನಾಗಿರುತ್ತೇನೆ. ನಾನು ಈಗೀಗ ಇವರ ಮುಂದೆ ನಿನ್ನ ಸ್ತುತಿಯನ್ನು ಮಾಡಿದೆನು. ಆದರೆ ಇವರು–"ನಿಮ್ಮ ಹೆಂಡತಿಯು ಎಷ್ಟು ಸುಧಾರಿಸಿದಾಗ್ಯೂ ಅವಳಿಗೆ ಉಳಿದ ಹೆಂಗಸರಂತೆ ಮೈಮೇಲೆ ಅಲಂಕಾರಗಳನ್ನಿಡುವ ಅಕ್ಕರತೆಯು ಯಥಾಪ್ರಕಾರವೇ ಇರುತ್ತದೆ" ಎಂದು ಉಪಹಾಸ ಮಾಡುತ್ತಾರೆ. ಆದರೆ ನೀನು "ಸ್ತ್ರೀಯರಿಗೆ ಪಾತಿವ್ರತ್ಯವೇ ನಿಜವಾದ ಅಲಂಕಾರವು. ಅವರ ಮೈಮೇಲಿನ ಅಲಂಕಾರಗಳಿಗೆ ಏನೂ ಮಹತ್ವವಿರುವದಿಲ್ಲ" ಎಂದು ಇವರ ನಿದರ್ಶನಕ್ಕೆ ಚೆನ್ನಾಗಿ ತಂದು ಕೊಡು.

**ತ್ರಾಟಿಕಾ**— ಇದನ್ನು ನೀವು ನನಗೆ ಮೊದಲೇ ಏಕೆ ಹೇಳಲಿಲ್ಲ ? ಮೈಮೇಲೆ ಈ ಅಲಂಕಾರಗಳನ್ನಿಟ್ಟುಕೊಂಡು ಬಾರದಿದ್ದರೆ ನಿಮಗೆ ಕೆಡಕು ಕಂಡೀತೆಂದು ನಾನು ಇಟ್ಟುಕೊಂಡು ಬಂದೆನು. ಆದರೆ ನನ್ನ ನಿಜವಾದ ಅಲಂಕಾರವು ಪಾತಿವ್ರತ್ಯವೇ. ಈ ಕೃತ್ರಿಮ ಅಲಂಕಾರಗಳನ್ನು ತೆಗೆದುಕೊಂಡು ಏನು ಸುಡಬೇಕು ? ಇವು ಇದ್ದ ಭಾಗ್ಯವೂ ಇಲ್ಲದ ಭಾಗ್ಯವೂ ಅಷ್ಟೇ ! (**ಮೈಮೇಲಿನ ದಾಗೀನೆಗಳನ್ನು ತೆಗೆಯುತ್ತಾಳೆ.** )

**ರಂಗರಾವ** – ಅತ್ತಿಗೆಯೇ, ಅವು ಹಾಗೇ ಇರಲಿ. ನೀನು ಅವುಗಳನ್ನು ಪ್ರತ್ಯಕ್ಷ ತೆಗೆಯುವ ಕಾರಣವಿಲ್ಲ.

**ಕಮಲೆ**—ಅವ್ವಯ್ಯಾ! ಇದಕ್ಕೇ ಏನು ಪತಿವ್ರತಾ ಧರ್ಮ ಅಂಬುವದು? ಛೀ, ಛೀ! ನಾನು ಈ ಪ್ರಕಾರ ಪಂಜರದೊಳಗಿನ ಗಿಳಿಯಾಗಿ ಇರಲಾರೆನು.

**ರಂಗರಾವ**—ವ್ಹಾ. ನೀವು ಅಂಥ ಪಂಡಿತರೇ ಇದ್ದೀರಿ! ನಿಮಗೆ ಇಂಥ ಪತಿವ್ರತಾ ಧರ್ಮವು ಏಕೆ ಮನಸ್ಸಿಗೆ ಬಂದೀತು? ನಿಮ್ಮ ಪಾಂಡಿತ್ಯದ ದೆಸೆಯಿಂದಲೇ ನಾಲ್ಕು ಜನರೊಳಗೆ ನಮ್ಮ ಸ್ವರೂಪನಾಶವು ಆಯಿತು. ನಿಜವಾಗಿಯೂ ಹೆಂಗಸರ ಪರೀಕ್ಷೆಯನ್ನು ಮಾಡುವದು ಬಹಳ ಕಠಿಣವು. ಅವರ ಸ್ವಭಾವದ ಬಗ್ಗೆ ಯಾರೂ ನಂಬಿಗೆಯನ್ನು ಇಡಕೂಡದು.

**ಕಮಲೆ**—ಸಾಕು. ಸಾಕು. ಇಷ್ಟು ಬೇಗನೆ ನನ್ನಮೇಲೆ ನಿಮ್ಮ ಅಧಿಕಾರವನ್ನು ನಡೆಸಬೇಡಿರಿ. ನನ್ನ ಬಗ್ಗೆ ಜಿದ್ದು ಕಟ್ಟಲಿಕ್ಕೆ ನಿಮಗೆ ಯಾರು ಹೇಳಿದ್ದರು? ನನ್ನ ಬದಲಾಗಿ ಮತ್ತೊಬ್ಬಳು ಇದ್ದರೆ "ನೀವೆಲ್ಲಿ ಬುದ್ಧಿ ಇಟ್ಟಿದ್ದೀರಿ?" ಎಂದು ನಿಮಗೆ ಕಟಬಾಯಿ ತಿವಿದು ಕೇಳುತ್ತಿದ್ದಳು.

**ತ್ರಾಟಿಕಾ**—ತಂಗೀ, ಇದೇನು?

**ರಂಗರಾವ**—ಒಳ್ಳೇದು. ನಾವು ಝುಕ್ಕಿಸುವ ಕಾರಭಾರ ಮಾಡಿದಿವಿ. ಕತ್ತೇ ಕಾಯುವ ಕೆಲಸ ಮಾಡಿದಿವಿ. ಇನ್ನಾದರೂ ನಿಮ್ಮ ಬಾಯಿ ಮುಚ್ಚಿರಿ.

**ಕಮಲೆ**—ಮೈಮೇಲೆ ಪ್ರಸಂಗವು ಬಂತೆಂದರೆ ಅದರ ಸೇಡನ್ನು ಹೆಂಗಸರ ಮೇಲೆ ತೀರಿಸಿಕೊಳ್ಳುವದು ಗಂಡಸರಿಗೆ ಮೈಯುಂಡು ಹೋಗಿರುತ್ತದೆ. ಆಕಳವು ಕೈಯೊಳಗೆ ಸಿಕ್ಕಮೇಲೆ ಅದನ್ನು ಬೇಕಾದಷ್ಟು ಪೀಡಿಸಿದರೂ ಕೇಳುವವರಾರು?

**ಸರಸ್ವತಿ**—ಇವರೆಲ್ಲರು ನಮ್ಮ ದೆಸೆಯಿಂದಲೇ ಜಿದ್ದು ಕಟ್ಟಿದ್ದರೇನು? ಎಂಥ ಸೋಜಿಗವ್ವಾ ಇದು? ಪ್ರತಿಷ್ಠಿತ ಗಂಡಸರು ತಮ್ಮದಾಗಲಿ ತಮ್ಮ ಮನೆಯ ಹೆಂಗಸರದಾಗಲಿ ಮರ್ಯಾದೆಯನ್ನು ಹೊರಗೆ ಹಾಕುವದು ಎಷ್ಟು ಕ್ಷುದ್ರತನವು? (ತನ್ನಗಂಡನಿಗೆ) ತಾವೂ ಈ ಕಾರಭಾರದಲ್ಲಿ ಸೇರಿಕೊಂಡಿದ್ದಿರೇನು? ಒಳ್ಳೇದಿರಲಿ. ಮನೆಗೆ ಬಂದಬಳಿಕ ನೋಡಿಕೊಳ್ಳುತ್ತೇನೆ.

**ಪ್ರತಾಪರಾವ**—ಭೀಮರಾವ, ಇನ್ನು ಜಪ್ಪಿಸಿರು. ಈ ಹೊತ್ತು ನಿನಗೆ ಮನೆಗೆ ಹೋಗಲಿಕ್ಕೆ ಪ್ರತಿಬಂಧವಿರುವದು.

**ಸರಸ್ವತಿ**—ಮನೆಗೆ ಬರುವದನ್ನು ಹೇಗೆ ಬಿಡುತ್ತಾರೆ ನೋಡೋಣ.

**ಭೀಮರಾವ**— ಏನೇ, ಅವರ ಮಾತಿಗೆ ನೀನೇಕೆ ಲಕ್ಷ್ಯಕೊಡುವೆ ? ನಾನು ನಿನ್ನ ಹಿಂದೆ ಬರತಕ್ಕವನೇ.

**ಪ್ರತಾಪರಾವ**—ಅತ್ತಿಗೀ, ಇನ್ನು ಸಾಕು ಮಾಡು. ರಂಗೂ ! ಈ ಗರ್ವಿಷ್ಠ ಮತ್ತು ದುರಾಗ್ರಹಿ ಹೆಂಗಸರು ಬಹಳ ಅಳತೆಗೆಟ್ಟಿರುತ್ತಾರೆ. ಇವರಿಗೆ ಪಾತಿವ್ರತ್ಯವೆಂದರೇನು ಎಂಬದನ್ನು ಚೆನ್ನಾಗಿ ಉಪದೇಶ ಮಾಡು, ನೋಡೋಣ.

**ಸರಸ್ವತಿ**—ಭಾವನವರೇ, ಈ ವಿನೋದವು ಇನ್ನು ಸಾಕು. ನಿಮ್ಮ ಹೆಂಡತಿಯು ನಿಮಗೆ ಬಹಳ ಬುದ್ಧಿವಂತಳೆಂದು ಕಾಣಿಸುತ್ತಿರಬಹುದು. ಅವಳು ಬಹಳ ನಮ್ರಳಿರಬಹುದು, ಮತ್ತು ನಿಮ್ಮ ಕಡೆಯಿಂದ ಬೇಕಾದಂತೆ ಒದಿಸಿಕೊಳ್ಳಲಿಕ್ಕೆ ಸಿದ್ಧಳಾಗಿರಬಹುದು. ಆದರೆ ನನಗೇನೂ ಇಂಥ ಸ್ವಭಾವವು ಸೇರುವದಿಲ್ಲ. ಅಹಹ ! ಏನು ನಮ್ಮಕ್ಕನ ಬುದ್ಧಿಯ ವೈಭವವು !

**ಪ್ರತಾಪರಾವ**— ಅಬಬಬ ! ಎಷ್ಟು ಉನ್ಮತ್ತತನವಿದು ? ರಂಗೂ, ! ಇವಳ ಕಿವಿಯನ್ನು ಚೆನ್ನಾಗಿ ಹಿಂಡು. ಇವಳ ಕಣ್ಣೊಳಗೆ ತೀಕ್ಷ್ಣವಾದ ಅಂಜನವನ್ನು ಹಾಕು.

**ಸರಸ್ವತಿ**—ನನಗೆ ಹೀಗೆ ಮಾಡಲಿಕ್ಕೆ ಆಕೆಯು ಮೂರು ಕಣ್ಣು ಹಚ್ಚಿಕೊಂಡು ಬರಬೇಕಾದೀತು !

**ಪ್ರತಾಪರಾವ**— ಪರೀಕ್ಷೆಯನ್ನು ಮಾಡುವಿಯೇನು ? ರಂಗೂ, ಆಗಲಿ ಇನ್ನು ಆರಂಭಮಾಡು.

**ತ್ರಾಟಿಕಾ**—ಛೀ. ಛೀ. ಸರಸ್ವತೆವ್ವಾ! ಕಮಲಾ, ನೀವು ಎಂಥ ಮೊಂಡರು? ನಿಮ್ಮ ಮೋರೆಯ ಗಂಟನ್ನು ಇನ್ನು ತೆಗೆದು ಬಿಡಿರಿ ! ಈ ಪ್ರಕಾರ ಕಣ್ಣು ಹಿಗ್ಗಿಸಬೇಡಿರಿ! ನಿಮ್ಮ ಗಂಡಂದಿರ ಮೇಲೆ ಏಕೆ ಸಿಟ್ಟಿಗೇಳುತ್ತೀರಿ ? ಇವರು ಎಷ್ಟಾದರೂ ನಿಮ್ಮ ಗಂಡಂದಿರು, ನಿಮ್ಮ ಒಡೆಯರು, ನಿಮ್ಮ ಅರಸರು, ಮತ್ತು ನಿಮ್ಮ ದೇವರು. ನಿಮ್ಮ ಸಿಟ್ಟು ನಿಮಗೂ, ನಿಮ್ಮ ಸ್ತ್ರೀಧರ್ಮಕ್ಕೂ, ನಿಮ್ಮ ಮನೆತನಕ್ಕೂ ಕಲಂಕವನ್ನು ಹಚ್ಚುತ್ತದೆ. ನದಿಯ ನೀರು ಮಲಿತರೆ ಅದರ ಕಡೆಗೆ ಯಾರಾದರೂ ಹಣಿಕಿಹಾಕಿ ನೋಡುತ್ತಾರೋ? ಪತಿಯೆಂದರೆ ನಮ್ಮ ದೈವತವು. ಪತಿಯೇ ನಮ್ಮ ಅಷ್ಟೈಶ್ವರ್ಯವು. ಪತಿಯೇ ನಮ್ಮ ಶಿರಸ್ಸು. ಶಿರಸ್ಸಿಲ್ಲದೆ ಅವಯವಕ್ಕೆ ಎಂದಾದರೂ ಶೋಭೆಯುಂಟೇನು ? ನಮ್ಮ ಪತಿಗಳ ಚಿಂತೆಯು ಯಾವಾಗಲು ನಮ್ಮ ಸಂರಕ್ಷಣದ ದೆಸೆಯಿಂದ ಏಕೆ ಇರುತ್ತದೆ? ಅವರು ಯಾವಾಗಲೂ ದುಡಿ

ಯುವದು, ದುಃಖಪಡುವದು ಯಾರ ಸಲುವಾಗಿ ? ಪ್ರಸಂಗ ಬಂದಾಗ್ಗೆ ಬಿಸಿಲು, ಚಳಿ, ಮಳೆ, ಇವುಗಳನ್ನೆಲ್ಲ ಲಕ್ಷ್ಯಕ್ಕೆ ತಾರದೆ ಅವರು ಶ್ರಮಪಡುವದು ಮತ್ತು ರಾತ್ರಿಯಲ್ಲಿ ನಿದ್ರೆಗೆಡುವದು ತಮ್ಮ ಹೆಂಡಿರು-ಮಕ್ಕಳಿಗೆ ನಾನಾತರದ ಸುಖವೂ, ಸಮಾಧಾನವೂ, ಸಂತೋಷವೂ ಆಗಬೇಕಂತಲೇ ಅಲ್ಲವೇ ? ಈ ಎಲ್ಲ ಶ್ರಮದ ಗೋಸ್ಕರ ಅವರಿಗೆ ನಾವು ಪ್ರತಿಫಲವವನ್ನು ಏನು ಕೊಡುತ್ತೇವೆ ? ಅವರ ಕೂಡ ಯಾವಾಗಲು ನಗುತ್ತ ಕೆಲೆಯುತ್ತ ಇರುವದು, ನಾಲ್ಕು ಸವಿ ಮಾತುಗ ಳನ್ನು ಆಡುವದು, ಪ್ರೇಮದಿಂದ ನಡೆಯುವದು ಮತ್ತು ಅವರು ಹೇಳಿದ್ದನ್ನು ಕೇಳುವದು. ಈ ಪ್ರತಿಫಲವು ಅವರು ನಮ್ಮಗೋಸ್ಕರ ಮಾಡುವ ಶ್ರಮಕ್ಕೆ ಬಹಳ ಸ್ವಲ್ಪೇ ಇರುತ್ತದೆ. ಇಷ್ಟಾದರೂ ಪ್ರತಿಫಲವನ್ನು ನಾವು ಅವರಿಗೆ ಕೊಡದೆ ಇದ್ದರೆ ನಮ್ಮಪಾಲಿಗೆ ಕೃತಘ್ನತನದ ದೋಷವು ಹೇಗೆ ಬಾರದೆ ಬಿಟ್ಟೇತು ? ಉದ್ಧಟತನದಿಂದ ನಡೆಯುವದು, ಕೊಳಕು ಮಾತಾಡುವದು, ಸಿಟ್ಟಿಗೇಳು ವದು, ಮೋರೆ ಸೊಟ್ಟ ಮಾಡುವದು ಈ ಎಲ್ಲ ಅವಗುಣಗಳು ನಮ್ಮಲ್ಲಿ ದ್ದರೆ ನಾವು ನಮ್ಮ ಕರ್ತವ್ಯಕ್ಕೆ ತಪ್ಪಿದಂತಾಗುವದಿಲ್ಲವೇ ? ಪತಿದ್ರೋಹದಂಥ ಕೃತಘ್ನತನವು ಮತ್ತು ಪಾಪವು ಎರಡನೇದ್ದು ಯಾವದೂ ಇಲ್ಲ. ಏನೇನು ಮಾಡಿ ದರೂ ಈ ಪಾಪವು ಹೋಗುವಂಥದಲ್ಲ. ದೇವರು ನಮ್ಮ ಶರೀರವನ್ನು ಮೃದುವಾ ಗಿಯೂ, ಕೋಮಲವಾಗಿಯೂ ಅಶಕ್ತವಾಗಿಯೂ ಮಾಡಿರುವ ಕಾರಣವೇನು ? ನಮ್ಮ ಶರೀರದಂತೆ ನಮ್ಮ ಮನಸ್ಸಾದರೂ ಮೃದುವಾಗಿಯೂ, ಕೋಮಲ ವಾಗಿಯೂ ಇರಬೇಕೆಂಬುವು ಆತನ ಉದ್ದೇಶವಿರುವದೆಂದು ಕಾಣುವದಿಲ್ಲೇ ? ನಾವು ಗಂಡಸರಂತೆ ಸ್ವೇಚ್ಛಾಚಾರಿಗಳಾದರೆ ನಮ್ಮ ಈಗಿರುವ ಸ್ಥಿತಿಯು ಉಳಿಯ ಬಹುದೇ? ನಾವು ಗಂಡಂದಿರ ಸಂಗಡ ಉದ್ದಾಮತನದಿಂದ ನಡೆದು ಉಪಯೋಗ ವೇನು? ನಮ್ಮ ಕೈಯ್ಯಲ್ಲಿರುವ ದೊಡ್ಡ ಆಯುಧಗಳೆಂದರೆ ಒಂದು ಕಣ್ಣೀರು, ಎರಡ ನೇದ್ದು ಸಿಟ್ಟು, ಮೂರನೇದ್ದು ಅನ್ನ ನೀರಿಲ್ಲದೆ ಉಪವಾಸ ಬೀಳುವದು. ಈ ಆಯುಧಗಳಿಂದಲೇ ನಾವು ನಮ್ಮ ಪತಿಗಳನ್ನು ಯುದ್ಧದಲ್ಲಿ ಸೋಲಿಸತಕ್ಕದ್ದಲ್ಲವೇ? ಅಂದಮೇಲೆ ಇದೆಷ್ಟು ಸಂಭವನೀಯವು ? ಈ ಸಾಧನಗಳಿಂದಲೇ ಹೆಂಗಸರು ತಮ್ಮ ಗಂಡಂದಿರನ್ನು ವಶೀಕರಣ ಮಾಡುವರೆಂದು ನೀವು ಅನ್ನಬಹುದು. ಆದರೆ ಆ ನಿಮ್ಮ ತಿಳುವಳಿಕೆಯು ತಪ್ಪು. ನಮ್ಮ ಬಲವಾದ ಆಯುಧವೆಂದರೆ ನಮ್ಮ ಮೇಲೆ ಪತಿಗಳ ಪ್ರೇಮವನ್ನುಂಟುಮಾಡಿಕೊಳ್ಳುವದು. ನಮ್ಮ

ಪತಿಗಳು ನಮ್ಮ ರಾಜರಾದಾಗ್ಯೂ ಅವರು ನಮ್ಮ ಪ್ರೇಮದ ವಸಲುವಾಗಿ ನಮ್ಮ ದಾಸರಾಗುತ್ತಾರೆ. ನಾವು ಅವರಿಗೆ ಪ್ರೇಮ ಮಾಡಿದರೆ ಅವರು ನಮಗೆ ಪ್ರೇಮ ಮಾಡಲಿಕ್ಕೆ ಬದ್ಧರಿರುತ್ತಾರೆ. ವಿಧೇಯತ್ವ, ವಿನಯ, ಮಿತಭಾಷಣ, ಸೌಮ್ಯ ಭಾಷಣ ಮತ್ತು ಪ್ರೇಮ ಈ ಆಯುಧಗಳಿದ್ದರೆ ನಾವು ಹೆಂಗಸರು ಗೃಹಿಣಿ ಅಥವಾ ಗೃಹಲಕ್ಷ್ಮಿ ಎಂದು ಕರೆಸಿಕೊಳ್ಳಲಿಕ್ಕೆ ಯೋಗ್ಯರಾಗುತ್ತೇವೆ. ಈ ಆಯುಧಗಳನ್ನು ನಾವು ಕಳೆದುಕೊಂಡರೆ ನಮ್ಮ ಕುತ್ತಿಗೆಯನ್ನು ನಾವೇ ಕೊಯಿದುಕೊಂಡಂತೆ ಆಗುವದು. ನನ್ನಲ್ಲಿಯಾವರೂ ಮುಂಚೆ ಸೊಕ್ಕು, ಹಟ, ಸಿಟ್ಟು, ಜಗಳಾಡುವದು, ಒದರಾಡುವದು ಮೊದಲಾದ ಕೆಟ್ಟಗುಣಗಳು ತುಂಬಿದ್ದವು. ಆದರೆ ಅವೆಲ್ಲಾ ದೇವರ ದಯದಿಂದ ಹೊರಟು ಹೋದುದರಿಂದ ನಾನು ಈಗ ಬಹಳ ಸುಖಿಯಾಗಿರುತ್ತೇನೆ. ಪತಿಯೇ ದೇವರು. ಅಂದಮೇಲೆ ಪತಿಯ ದಯಕ್ಕೆ ದೇವರ ದಯವೆನ್ನಲಿಕ್ಕೆ ಅಡ್ಡಿ ಇಲ್ಲ. ನಾನು ಬುದ್ಧಿ ಕಲಿತದ್ದೆಲ್ಲ ನನ್ನ ಪತಿಯ ದಯದಿಂದಲೇ. ಈಗ ನನಗೆ ಸಂಸಾರಸುಖವು ಚೆನ್ನಾಗಿ ತಿಳಿಯಹತ್ತಿರುತ್ತದೆ. ನಾವು ಪತಿಗಳ ಮಾತು ಕೇಳಿದರೆ ಪತಿಗಳು ನಮ್ಮ ಮಾತು ಕೇಳುತ್ತಾರೆ. ಪ್ರೀತಿ ವಿಶ್ವಾಸಗಳು ನಮ್ಮ ನಮ್ಮ ವರ್ತನದ ಮೇಲಿಂದಲೇ ನಮ್ಮ ಪತಿಗಳಲ್ಲಿ ಉತ್ಪನ್ನವಾಗುತ್ತವೆ. ನಾವು ಅವರ ಅನುಕೂಲವನ್ನೂ, ಅವರ ಅಭಿಪ್ರಾಯವನ್ನೂ, ಅವರ ಸೌಖ್ಯವನ್ನೂ ನೋಡಿಕೊಂಡು ಹಟವನ್ನೂ ದುರಾಗ್ರಹವನ್ನೂ ಬಿಟ್ಟು ನಡೆಯಹತ್ತಿದರೆ ನಾವು ಅಬಲೆಯರು ನಮ್ಮ ಅಬಲತ್ವವನ್ನು ಬಿಟ್ಟುಕೊಟ್ಟು ಸಬಲರಾಗುತ್ತೇವೆ. ಅಂದ ಮೇಲೆ ಇನ್ನೇಕೆ ಸುಮ್ಮನೆ ಅನುಮಾನಮಾಡುತ್ತೀರಿ? ಇಷ್ಟೊತ್ತಿನತನಕ ನೀವು ಮಾಡಿದ ಅಪರಾಧವನ್ನು ಕ್ಷಮಿಸುವದಕ್ಕಾಗಿ ನೀವು ನಿಮ್ಮ ಪತಿಗಳ ಕಾಲು ಬೀಳಿರಿ. ಅಂದರೆ ಅವರಲ್ಲಿ ನಿಮ್ಮ ಬಗ್ಗೆ ಕ್ಷಮೆಯೂ, ದಯವೂ, ಪ್ರೇಮವೂ ನಿಶ್ಚಯವಾಗಿ ಹುಟ್ಟುವವು. ನೀವು ಅವರ ಅರ್ಧಾಂಗಿಗಳು. ಅಂದಮೇಲೆ ಶರೀರದ ಒಂದು ಭಾಗವು ಇನ್ನೊಂದು ಭಾಗದ ಕಾಲು ಬೀಳಲಿಕ್ಕೆ ಅಡ್ಡಿ ಏನುಂಟು ಇದರಲ್ಲಿ ಅಪಮಾನವು ಯಾರಿಗೆ ಆಗುತ್ತದೆ? ಹೂ ನಡೆಯಿರಿ. ಕಾಲು ಬೀಳಿರಿ.

**( ಹೀಗೆಂದು ಇಬ್ಬರನ್ನೂ ಕರಕೊಂಡು ಬಂದು ಅವರವರ ಗಂಡಂದಿರ ಕಾಲು ಬೀಳಿಸುತ್ತಾಳೆ. )**

**ಎಲ್ಲರು**—ಶಹಬಾಸ, ಶಹಬಾಸ, ನೀನು ನಿಜವಾದ ಪತಿವ್ರತೆಯು ಇರುತ್ತೀ..

**ಸಮಾಪ್ತ.**